



ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೫, ಸಂಚಿಕೆ : ೦೧

ಜನವರಿ - ಜೂನ್ ೨೦೨೧

ಸಂಪಾದಕ

ಪ್ರೊ. ಬಿ.ಪಿ. ವೀರೇಂದ್ರಕುಮಾರ್

ಬಿ.ಎಂ.ಶ್ರೀ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ಇ-ಅಂಚೆ : bmsritrust@gmail.com bmsrilochana@gmail.com



ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ



## ಬಿ.ಎಂ.ಶ್ರೀ ಪ್ರತಿಷ್ಠಾನದ ಪದಾಧಿಕಾರಿಗಳು

ನಾಡೋಜ ಪ್ರೊ. ಎಂ. ಎಚ್. ಕೃಷ್ಣಯ್ಯ
ಗೌ॥ ಅಧ್ಯಕ್ಷರು

ಡಾ. ಆರ್. ಲಕ್ಷ್ಮೀನಾರಾಯಣ
ಅಧ್ಯಕ್ಷರು

ಡಾ. ಹೆಚ್.ಎಸ್.ಎಂ. ಪ್ರಕಾಶ್
ಡಾ . ಬಿ.ಸಿ. ರಾಜಕುಮಾರ್
ಗೌ॥ ಕಾರ್ಯದರ್ಶಿಗಳು

ಡಾ. ಎಸ್. ಅನಿಲ್ ಕುಮಾರ್
ಕೋಶಾಧಿಕಾರಿಗಳು

ಸಂಪುಟ : ೩೫ ಸಂಚಿಕೆ : ೦೧
ಜನವರಿ-ಜೂನ್ ೨೦೨೧

ಕರ್ನಾಟಕ

# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೫ ಸಂಚಿಕೆ : ೦೧

ಜನವರಿ–ಜೂನ್ ೨೦೨೧

ಸಂಪಾದಕ

ಪ್ರೊ. ಬಿ.ಪಿ. ವೀರೇಂದ್ರಕುಮಾರ್



ಬಿ.ಎಂ.ಶ್ರೀ ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಕಲಾಭವನ (ರಿ)

೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ

ಬೆಂಗಳೂರು – ೫೬೦೦೧೯.

ದೂರವಾಣಿ : 26615877, 26676773

ವಿ–ಅಂಚೆ : bmsritrust@gmail.com

bmsrilochana@gmail.com

**KARNATAKA LOCHANA**
Half yearly Research Journal
Edited by Prof. B.P. Veerendra Kumar and
Published by B.M.Sri. Prathistana
M.V.Si. P.G. Research Centre
B.M.Sri. Kalabhavan(R), 3rd Main Road
Narasimharaja Colony, Bangalore 560 019.
Ph.No. 080-26615877
e-mail : bmsritrust@gmail.com | bmsrilochana@gmail.com

January - June 2021 (Vol. 35, No. 1)
Pages : viii + 140

Subscription Details :
**Annual : Rs. 100/-**
**Life : Rs. 1500/-**

ಚಂದಾ ವಿವರ:
ವಾರ್ಷಿಕ : ರೂ. ೧೦೦/-
ಆಜೀವ : ರೂ. ೧೫೦೦/-

ಮುದ್ರಣ
**ಸ್ಪ್ಯಾನ್ ಪ್ರಿಂಟ್**
ಬೆಂಗಳೂರು
ದೂರವಾಣಿ : 90369 03496
ಇ-ಅಂಚೆ : spanprint@gmail.com

## ಸಂಪಾದಕರ ನುಡಿ

ಆತಂಕ, ಆಘಾತಗಳ ವಿಚಿತ್ರ ಸಾಮಾಜಿಕ ಪರಿಸರದಲ್ಲಿ ನಾವೆಲ್ಲರೂ ಇದ್ದೇವೆ. ಇಂತಹ ಹೊತ್ತಿನಲ್ಲಿಯೂ ಈ ಸಂಚಿಕೆ ಹೊರಬರುತ್ತಿರುವುದು ಸಮಾಧಾನಕರ ಸಂಗತಿಯಾಗಿದೆ.

ಜನ್ನನ ಕಾವ್ಯಗಳಲ್ಲಿ 'ಸಾವು ಮತ್ತು ಸ್ವರ್ಗ-ನರಕ' ಎನ್ನುವ ವಿದ್ಯಾಸಾಗರವರ ಲೇಖನ ಜನ್ನನ ಕಾವ್ಯಗಳ ಬಗೆಗೆ ಹೊಸ ದೃಷ್ಟಿಕೋನವನ್ನು ಕೊಟ್ಟಿದೆ. ಸತಿ ಸಹಗಮನದಂಥ ಜೈನೇತರ ಆಚರಣೆಯ ಬಗೆಗೆ, ಹಾಗೂ ಮೋಕ್ಷವೇ ಅಂತಿಮ ಗುರಿ ಎನ್ನುವ ಜೈನಧರ್ಮದ ತತ್ವದ ಹಿನ್ನಲೆಯಲ್ಲಿ ಸ್ವರ್ಗವೇ ಪ್ರಧಾನ ಮೌಲ್ಯವಾಗಿರುವುದರ ಬಗೆಗೆ ಇನ್ನಷ್ಟು ಸಾಂಸ್ಕೃತಿಕ ವಿಶ್ಲೇಷಣೆ ಮಾಡಬಹುದಿತ್ತು ಎನಿಸುತ್ತದೆ.

ಡಾ.ಲ.ನ. ಸ್ವಾಮಿಯವರ 'ಪ್ರಧಾನ ವೆಂಕಪ್ಪಯ್ಯನವರ ಜನ್ಮ ವೃತ್ತಾಂತ' ಎನ್ನುವ ಲೇಖನ, ೧೮ನೇ ಶತಮಾನದ ಅಪೂರ್ವ ವಿದ್ವಾಂಸರೊಬ್ಬರ ಬಗೆಗೆ ಇದೇ ಮೊದಲ ಬಾರಿಗೆ ಸಂಪೂರ್ಣ ಮಾಹಿತಿಯನ್ನು ಒದಗಿಸಿರುವ ವಿಶಿಷ್ಟ ಲೇಖನವಾಗಿದೆ.

'ವಚನ ಸಾಹಿತ್ಯದಲ್ಲಿ ಬಯಲು ಪರಿಕಲ್ಪನೆ' ಎನ್ನುವ ಡಾ. ಸಿ. ಯು. ಮಂಜುನಾಥ್ ಅವರ ಲೇಖನ ವಿಶಿಷ್ಟವಾಗಿದೆ. 'ಬಯಲು' ಎನ್ನುವ ಪದವನ್ನು ರತ್ನಾಕರನ ಶತಕಗಳಲ್ಲಿ ಬಳಕೆಯಾಗಿರುವುದು ನೆನಪಿಗೆ ಬರುತ್ತದೆ.

ಬಸಯ್ಯ ಸ್ವಾಮಿಯವರ 'ಸ್ವಪ್ನ ಸಾರಸ್ವತ ಕಾದಂಬರಿಯಲ್ಲಿ ವಲಸೆ ಪ್ರಜ್ಞೆ ಮತ್ತು ಮಾನಸಿಕ ತಳಮಳ'- ಲೇಖನ, ವಲಸೆಗಾರರ ಬಗೆಗಿನ ಸಾಮಾಜಿಕ ಜವಾಬ್ದಾರಿಯನ್ನು ಕುರಿತು ಯೋಚಿಸುವಂತೆ ಮಾಡುತ್ತದೆ.

'ನ್ಯಾಯ' ಶಬ್ದ ಸಾಮಾನ್ಯರ ಜೀವನಕ್ರಮದಲ್ಲಿ ಪ್ರಾಯೋಗಿಕವಾಗಿ ಹೇಗೆ ಹಾಸುಹೊಕ್ಕಾಗಿದೆ ಎಂಬುದರ ಸ್ವಾರಸ್ಯಕರ ವಿವರಣೆಯನ್ನು ಡಾ. ಎಚ್.ಎಸ್. ಅನಂತನಾರಾಯಣರವರು ನೀಡಿದ್ದಾರೆ.

'ಆಲಿಕಲ್ಲು ಹಸೆ' ಎಂಬ ಬಸವರಾಜ ಕೋಡಗುಂಟೆಯವರ ಪ್ರಬಂಧದಲ್ಲಿ ಅಕ್ಕಮಹಾದೇವಿಯ ವಚನವೊಂದನ್ನು ಪ್ರಾಯೋಗಿಕ ವಿಶ್ಲೇಷಣೆ ಮಾಡಿರುವುದು ಕಂಡು ಬರುತ್ತದೆ. ಅಕ್ಕಮಹಾದೇವಿಯ ಮಾನಸಿಕ ಸ್ಥಿತಿಯ ಬಗೆಗೆ ವಿಶ್ಲೇಷಿಸಿರುವುದು ನವೀನವಾಗಿದೆ.

ಡಾ. ಜಿ.ಎಂ. ಹೆಗಡೆಯವರು ತಮ್ಮ 'ಶ್ರೀಕಂಠಯ್ಯನವರು ಮತ್ತು ಕರ್ನಾಟಕ ಹಿತೈಷಿಣಿ ಗ್ರಂಥಮಾಲೆ' ಎಂಬ ಪ್ರಬಂಧದಲ್ಲಿ ಬಿ. ಎಂ. ಶ್ರೀಕಂಠಯ್ಯನವರ ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆಯ ವಿಚಾರಗಳನ್ನು ಪ್ರಸ್ತಾಪಿಸಿರುವುದು ಶ್ರೀಯವರ ಸಮಗ್ರ ವ್ಯಕ್ತಿತ್ವದ ಗ್ರಹಿಕೆಗೆ ಪೂರಕವಾಗಿದೆ.

ಚಂದ್ರಶೇಖರ್‌ರವರು ತಮ್ಮ 'ಪಾರ್ವರ ಪಿಳ್ಳೆಯ ಪೋದ ಜೀವಮಂ' ಎನ್ನುವ ಲೇಖನದಲ್ಲಿ ಪಂಪನ ಭಾರತದಲ್ಲಿ ಕಂಡುಬರುವ ಈ ಪ್ರಸಂಗವನ್ನು ಸಮರ್ಪಕವಾಗಿ ಗ್ರಹಿಸಲು ಬೇಕಾಗಿರುವ ದಾಖಲೆಯೊಂದನ್ನು ಒದಗಿಸಿರುವುದು ಉಚಿತವಾಗಿದೆ.

ಎಲ್ಲ ವಿಷಯಗಳಲ್ಲೂ ಮಾರ್ಗದರ್ಶನ ನೀಡುತ್ತಿರುವ ಆತ್ಮೀಯರೂ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರೂ ಅದ ಡಾ. ಆರ್. ಲಕ್ಷ್ಮೀನಾರಾಯಣ ಅವರಿಗೂ ಕಾರ್ಯದರ್ಶಿಗಳಾದ ಡಾ. ಹೆಚ್.ಎಸ್.ಎಂ. ಪ್ರಕಾಶ್ ಮತ್ತು ಡಾ. ಬಿ.ಸಿ. ರಾಜಕುಮಾರ್‌ರವರಿಗೂ, ಕೋಶಾಧಿಕಾರಿಗಳಾದ ಡಾ.ಎಸ್. ಅನಿಲ್ ಕುಮಾರ್‌ರವರಿಗೂ ಹಾಗೂ ಸಿಬ್ಬಂದಿ ವರ್ಗದವರಿಗೂ, ಸುಂದರವಾಗಿ ಮುದ್ರಿಸಿ ಕೊಡುತ್ತಿರುವ ಸ್ವಾನ್ ಪ್ರಿಂಟರ್ಸ್ ಅವರಿಗೂ ಗೌರವಪೂರ್ವಕ ವಂದನೆಗಳು.

**ಪ್ರೊ. ಬಿ.ಪಿ. ವೀರೇಂದ್ರಕುಮಾರ್**
ಸಂಪಾದಕರು

೦೩-೦೬-೨೦೨೧

**ಲೇಖಕರಿಗೆ ಸೂಚನೆಗಳು...**

೧. ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನೆ ವಿಮರ್ಶೆಗಳ ಅಪ್ರಕಟಿತ ಬರಹಗಳನ್ನು 'ಕರ್ನಾಟಕ ಲೋಚನ' ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಸ್ವೀಕರಿಸಲಾಗುವುದು.

೨. ಲೇಖನಗಳು ನುಡಿ ಅಥವಾ ಬರಹ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿದವಾಗಿರಬೇಕು ಅಥವಾ ಸ್ಫುಟವಾದ ಕೈಬರಹದಲ್ಲಿರಬೇಕು.

೩. ಲೇಖನಗಳು ಒಪ್ಪಿತವಾದ ಮಾದರಿಯಲ್ಲಿ ಸೂಕ್ತ ಉಲ್ಲೇಖಗಳು ಮತ್ತು ಟಿಪ್ಪಣಿಗಳಿಂದ ಕೂಡಿರಬೇಕು.

೪. ಚಿತ್ರಗಳು, ನಕ್ಷೆಗಳು ಮೊದಲಾದುವನ್ನು ಸ್ಕ್ಯಾನ್ ಮಾಡಿದ ತಂತ್ರಾಂಶದಲ್ಲಿ ನೀಡಬೇಕು.

೫. ಲೇಖಕರು ತಮ್ಮ ವಿಳಾಸ, ದೂರವಾಣಿ ಸಂಖ್ಯೆ ಮತ್ತು ವಿ-ಅಂಚೆಗಳನ್ನು ತಪ್ಪದೆ ನೀಡಬೇಕು.

೬. ಅಸ್ವೀಕೃತ ಬರಹಗಳನ್ನು ಹಿಂದಿರುಗಿಸಲಾಗುವುದಿಲ್ಲ ಮತ್ತು ಈ ಬಗೆಗೆ ಪತ್ರವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

೭. ಲೇಖನಗಳನ್ನು ಪ್ರತಿಷ್ಠಾನದ ವಿಳಾಸಕ್ಕೆ ಅಥವಾ bmsrilochana@gmail.com ಈ ವಿ-ಅಂಚೆಗೆ ಕಳುಹಿಸಬಹುದು.

೮. ಪ್ರಕಟವಾದ ಬರಹಗಳಿಗೆ ಪ್ರತಿಷ್ಠಾನವು ಸಾಂಕೇತಿಕ ಗೌರವ ಸಂಭಾವನೆಯನ್ನು ನೀಡುತ್ತದೆ.

೯. ಲೇಖನದಲ್ಲಿನ ಅಭಿಪ್ರಾಯಗಳು ಲೇಖಕರದೇ ಆಗಿದ್ದು ಪ್ರತಿಷ್ಠಾನದ ನಿಲುವುಗಳನ್ನು ಪ್ರತಿನಿಧಿಸುವುದಿಲ್ಲ.

## ಈ ಸಂಚಿಕೆಯಲ್ಲಿ

# ವಚನ ಸಾಹಿತ್ಯದಲ್ಲಿ ಬಯಲು ಪರಿಕಲ್ಪನೆ

**(ತಿಳಿಯುವ ಹಾದಿಯಲ್ಲಿ ಒಂದು ವಿನೀತ ಪ್ರಯತ್ನ)**



**ಡಾ.ಸಿ.ಯು. ಮಂಜುನಾಥ್**

ವಚನ ಸಾಹಿತ್ಯದ ವಿಷಯದಲ್ಲಿ ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೂ ಇನ್ನೂ ಹೊಸ ಹೊಸ ಅಧ್ಯಯನಗಳಿಗೆ ವಚನಸಾಹಿತ್ಯ ಸಾಹಿತ್ಯ ಅವಕಾಶಗಳನ್ನು ಕಲ್ಪಿಸಿ ಕೊಡುತ್ತಲೇ ಇದೆ. ಈ ದೃಷ್ಟಿಯಿಂದ ವಚನಸಾಹಿತ್ಯ ಸಾಹಿತ್ಯ ಸಂಶೋಧಕರಿಗೆ, ಅಧ್ಯಯನ ಶೀಲರಿಗೆ ತವನಿಧಿಯೇ ಆಗಿದೆ. ವಚನಕಾರರು ಬಯಲು ಪರಿಕಲ್ಪನೆಯನ್ನು ಹೇಗೆ ಮಾಡಿದ್ದಾರೆ ಎಂಬ ಒಂದು ಸ್ಥೂಲ ವಿವರಣೆಯನ್ನು ಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ವಚನ ಸಾಹಿತ್ಯ ಪರಿಸರದಲ್ಲಿ 'ಬಯಲು' ಪದದ ಅರ್ಥವ್ಯಾಪ್ತಿ ಹಾಗೂ ಅದರ ಪರಿಕಲ್ಪನೆ ತುಂಬ ಮಹತ್ವದ ಸ್ಥಾನವನ್ನು ಪಡೆದಿದೆ. ಬಯಲು ಪದವನ್ನು ಸಂಸ್ಕೃತದ 'ಶೂನ್ಯ' ಪದಕ್ಕೆ ಸಂವಾದಿಯಾಗಿ ಬಳಸಿರುವುದು ಕಂಡು ಬರುತ್ತದೆ. ಶೂನ್ಯ ಸಂಸ್ಕೃತ ಪದವನ್ನು ವಚನಕಾರರು ಹಲವಾರು ಕಡೆ ಬಳಸಿದ್ದರೂ, ವಚನಕಾರರು ಕನ್ನಡ ಪ್ರೀತಿಗೆ, ಪಕ್ಷಪಾತಕ್ಕೆ ಒಲಿದವರು. ಹೀಗಾಗಿ ಬಯಲು ಪದವನ್ನು ವ್ಯಾಪಕವಾಗಿ ಬಳಸಿದ್ದಾರೆ. ಬಯಲು ಪೂರ್ವಪದವಾಗಿ ಉಳ್ಳ ಸುಮಾರು ೨೮ಕ್ಕೂ ಹೆಚ್ಚು ಭಿನ್ನಭಿನ್ನ ಪದಗಳನ್ನು ಕನ್ನಡ ನಿಘಂಟುಗಳಲ್ಲಿ ಕಾಣಬಹುದು. ಉದಾಹರಣೆಗೆ ಬಯಲಾಟ, ಬಯಲಿಗ, ಬಯಲುಗ (ಬೌದ್ಧ), (ಶೂನ್ಯವಾದಿ), ಬಯಲ್ಗಾಳಿ, ಬಯಲು ಸೀಮೆ, ಬಯಲುಗಾಡಿ, ಬಯಲ್ನಾಡು ಇತ್ಯಾದಿ. ಬಯಲು ಪದ ಸ್ವತಂತ್ರರೂಪದಲ್ಲಿಯೂ ವ್ಯಾಪಕವಾಗಿ ಬಳಕೆಯಾಗಿದೆ. ಬಯಲು ಪದಕ್ಕೆ ಮೂಲರೂಪ ವಯಲ್>ವಯಲು ಇದಕ್ಕೂ ೧೩ಕ್ಕೂ ಹೆಚ್ಚು ಅರ್ಥಗಳು ಬಳಕೆಯಲ್ಲಿವೆ. ದಾಖಲೆಯಾಗಿರುವಂತೆ ಕ್ರಿ.ಶ. ೭೭೬ರ ನಾಗಮಂಗಲ ಶಾಸನದಲ್ಲಿ

ವಯಲ್ ಪದ ಪ್ರಯೋಗ ಮೊದಲು ದೊರೆಯುತ್ತದೆ. ಇದು ದ್ರಾವಿಡ ಮೂಲದ ಪದವಾಗಿದ್ದು ತಮಿಳು, ಕನ್ನಡ, ಮಲೆಯಳಂ, ತೆಲುಗು, ಕೊಡವ, ತುಳು ಮೊದಲಾದ ಭಾಷೆಗಳಲ್ಲಿ ಕಂಡು ಬರುತ್ತದೆ. ತಮಿಳಿನಲ್ಲಿ ವಯಲ್, ವಯಕ್ಕಲ್‌ಗೆ ಬತ್ತದ ಗದ್ದೆ, ಕೃಷಿಭೂಮಿ, ಸಮತಟ್ಟಾದ ಖಾಲಿಜಾಗ ಇತ್ಯಾದಿ ಅರ್ಥಗಳಿವೆ. ಈ ಅರ್ಥಛಾಯೆಯ ಅರ್ಥಗಳೇ ಬಹುತೇಕ ದ್ರಾವಿಡ ಭಾಷೆಗಳಲ್ಲಿ ಕಂಡುಬರುತ್ತದೆ. ಪೂರ್ವದ ಹಳಗನ್ನಡದ ಪದಾರಂಭದ ವಕಾರ ಹಳಗನ್ನಡದ ಕಾಲಕ್ಕೆ ಬಕಾರವಾಗಿ ಧ್ವನಿ ವ್ಯತ್ಯಾಸ ಪಡೆದು ಬಯಲ್ ಆಗಿ ಮುಂದಿನ ಪ್ರಕ್ರಿಯೆಯಲ್ಲಿ ವ್ಯಂಜನಾಂತರೂಪವು ಸ್ವರಾಂತರೂಪವಾಗಿ ಬಯಲು ರೂಪವನ್ನು ಪಡೆಯಿತು.

ಎಲ್ಲ ದ್ರಾವಿಡ ಭಾಷೆಗಳಲ್ಲಿ ಮೇಲೆ ಸೂಚಿಸಿದ ಸಾಮಾನ್ಯ ಭೌತಿಕ ಅಥವಾ ಲೌಕಿಕಾರ್ಥ ಬಳಕೆಯಲ್ಲಿದ್ದರೂ ವಚನಸಾಹಿತ್ಯದಲ್ಲಿ ಬಳಕೆಯಾಗಿರುವ ಅನುಭಾವಿಕ ಪರಿಭಾಷೆಯ ಅರ್ಥ ಕನ್ನಡ ಬಿಟ್ಟು ಉಳಿದ ಭಾಷೆಗಳಲ್ಲಿ ಕಂಡು ಬಂದಂತಿಲ್ಲ. ಈ ದೃಷ್ಟಿಯಿಂದ ಬಯಲು ಪದಕ್ಕೆ ವಿಶಿಷ್ಟ ಅರ್ಥವನ್ನು ರೂಪಿಸಿ ಬಳಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ. ಈ ಕಾರಣದಿಂದ ಇದು ವಿಶಿಷ್ಟ ಹಾಗೂ ಅನನ್ಯ.

**ಬ್ರಹ್ಮವಿಷ್ಣುರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ**
**ತಲೆ ದೋರದ ಮುನ್ನ- ಅಲ್ಲಿಂದತ್ತ ಬಯಲೆ ಸ್ವರೂಪವಾಗಿತ್ತು**
**ಆ ಸ್ವರೂಪಿನ ಘನತೆಯ ಉಪಮಿಸಬಾರದು**
**ನೋಡಬಾರದ ಬೆಳಗು, ಕೂಡ ಬಾರದ ಮೂರ್ತಿ**
**ಅಖಂಡ ಅಪ್ರತಿಮ ನಮ್ಮ ಗುಹೇಶ್ವರ ಲಿಂಗದ ಬೆಳ (ಬೆಡ?)ಗಿನ ಮೂಲವ**
**ಲಿಂಗ ಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿಗಳೇನ ಬಲ್ಲರೊ ೧೪೧೧ ಸಂ.೨**

ಈ ವಚನದ ಬಗ್ಗೆ ಬರೆಯುತ್ತಾ ಎಂ.ಆರ್. ಶ್ರೀನಿವಾಸಮೂರ್ತಿಯವರು 'ಬಯಲು ಎಲ್ಲಕ್ಕೂ ಮೂಲ, ಅದಕ್ಕೆ ಮೂಲವಿಲ್ಲ, ಅದು ಪರಮ ಸ್ವತಂತ್ರವಾದದ್ದು ಅದಕ್ಕೆ ಅಧೀನವಾಗಿ ಅದರ ಭಯದಿಂದ ಎಲ್ಲವೂ ನಡೆಯುತ್ತದೆ. ಆ ಪರವಸ್ತು ಮೂವತ್ತಾರು ತತ್ತ್ವಗಳಿಗೆ ಮೀರಿದ್ದು, ನಿರಾಕಾರ, ನಿಷ್ಕಲ; ಅದಕ್ಕೆ ನಾಮರೂಪ ಕ್ರಿಯಾದಿಗಳಿಲ್ಲ; ಅದು ಬ್ರಹ್ಮ ವಿಷ್ಣುರುದ್ರಾದಿಗಳಲ್ಲಿ' ಎಂದಿದ್ದಾರೆ.[1] ಡಾ. ಎಂ. ಚಿದಾನಂದ ಮೂರ್ತಿಯವರು 'ವೀರಶೈವ ಧಾರ್ಮಿಕ ಸಾಹಿತ್ಯದಲ್ಲಿ 'ಶೂನ್ಯ' ಎಂಬ ಮಾತನ್ನು ಅಷ್ಟಾವರಣಗಳ ಬೆಲೆಯನ್ನರಿತು ಷಟ್ಸ್ಥಲ ಮಾರ್ಗವಾಗಿ ಉಪಾಸನೆ ಮಾಡಿದ ಸಾಧಕನಿಗೆ ಸಾಧನೆಯ ಅಂತ್ಯದಲ್ಲಿ ಒದಗುವ ಬ್ರಹ್ಮಸಾಕ್ಷಾತ್ಕಾರ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಅಷ್ಟೇಅಲ್ಲ, ಸೃಷ್ಟಿ ಪೂರ್ವದ ಪರವಸ್ತುವನ್ನು ಶೂನ್ಯವೆಂದೇ ನಿರ್ದೇಶಿಸುತ್ತಾರೆ. ಅದನ್ನು ಅಚ್ಚಗನ್ನಡ ಶಬ್ದಗನ್ನಡ ಶಬ್ದ 'ಬಯಲು' ಎಂದೂ ನಿರ್ದೇಶಿಸುತ್ತಾರೆ.[2] ಎಂದು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಪ್ರೊ. ಸಂ.ಶಿ. ಭೂಸನೂರ ಮಠ ಅವರು 'ನಾಮವಿಲ್ಲದೆ ಸೀಮೆಯಿಲ್ಲದ ಈ ಬಯಲು ಇಲ್ಲದ ಬಯಲಿಲ್ಲ. ಇದ್ದ ಬಯಲು ಸರ್ವ ಶೂನ್ಯವನ್ನು ಒಳಗೊಂಡು ತಾನು ತಾನಾಗಿರ್ದ ಬಯಲು ಅಥವಾ ನಿರವಯಲು. ಅಂತೆಯೇ ಪ್ರಭುದೇವರು. ಶರಣರು ತಮ್ಮ ನಿರವಯಲ ಸಮಾಧಿಯಲ್ಲಿ ಅನುಭವಿಸಿ ಹೇಳುವ ಈ ಬಯಲು ಪರಮಪದ, ಪರಮಸತ್ಯ (supreme truth or existence)ವೆಂಬ ಅರ್ಥದಲ್ಲಿಯೇ ಶೂನ್ಯ ಸಂಪಾದನೆಯಲ್ಲಿ ಬಳಕೆಯಾಗಿದೆ'–೩ 'ವೀರಶೈವರು ಹೇಳುವ ಷಟ್ಸ್ಥಲ ಮಾರ್ಗದಲ್ಲಿ ಐಕ್ಯಸ್ಥಲವೇ ದಿವ್ಯ ಜೀವನದ ಅವಸಾನಭೂಮಿ–ಇದನ್ನೇ ಐಕ್ಯಸ್ಥಲ–ಜ್ಞಾನ ಶೂನ್ಯ ಸ್ಥಲ–ಇಲ್ಲಿಯೂ ಶೂನ್ಯದ ಅರ್ಥ ಅದೇ ಅರ್ಥ ಏನೂ, ಎಲ್ಲ ಬಯಲೆಂದು, ಆದರೆ ಬಯಲು ಮಹಾಘಟ್ಟ' ಎಂದು ಅಭಿಪ್ರಾಯ ಪಟ್ಟಿದ್ದಾರೆ.[೩]

ಬಯಲು ಪದದ ಲೌಕಿಕಾರ್ಥ ಬಹಳ ಹಿಂದಿನಿಂದಲೂ ಪ್ರಯೋಗದಲ್ಲಿ ಇದ್ದರೂ ಅದನ್ನು ವಿಶಿಷ್ಟ ಅನುಭಾವಿಕ ಅರ್ಥದಲ್ಲಿ ಟಂಕಿಸಿ ಪ್ರಯೋಗಿಸಿದ್ದು ವಚನಕಾರರು. ಇದು ಅವರ ಸೃಜನಾತ್ಮಕ ಪ್ರತಿಭೆಗೆ ಸಂಕೇತವಾಗಿದೆ; ಈ ರೀತಿಯ ಅಸಂಖ್ಯಾತ ಪದಗಳನ್ನು ರೂಪಿಸಿ ಪ್ರಯೋಗಿಸಿದ್ದಾರೆ. ಶರಣ, ಸ್ಥಲ, ವಿರಕ್ತ, ಆಚಾರ, ಅಷ್ಟಾವರಣ, ಶ್ರೀಅನುಭಾವ, ಶಿವಯೋಗ, ಕಾಯಕ, ದಾಸೋಹ, ಮಾಹೇಶ್ವರ, ಲಿಂಗಾನುಭಾವ, ಅಂಗೈಕ್ಯ, ಚರಲಿಂಗ, ಲಿಂಗಾಂಗ ಸಾಮರಸ್ಯ, ಲಿಂಗಪತಿ ಶರಣಸತಿ ಇತ್ಯಾದಿ. ಅಸಂಖ್ಯಾತ ಪದಗಳನ್ನು ರೂಪಿಸುವುದರ ಜೊತೆಯಲ್ಲಿ ಪೂರ್ವದಿಂದ ಬಳಕೆಯಲ್ಲಿದ್ದ ಎಷ್ಟೋ ಪದಗಳಿಗೆ ಹೊಸ ಅರ್ಥದ ಹೊಳಪನ್ನು ನೀಡಿದರು. ಪ್ರೊ. ಅ.ರಾ. ಮಿತ್ರ ಅವರು ವಚನಕಾರರ ಶಬ್ದಗಳ ಬಳಕೆಯನ್ನು ಕುರಿತು ಹೀಗೆ ಅಭಿಪ್ರಾಯ ಪಡುತ್ತಾರೆ. 'ಕನ್ನಡದಲ್ಲಿ ಮೊದಲಬಾರಿಗೆ ವಿಪುಲವಾಗಿ ತಾತ್ವಿಕ ಜಿಜ್ಞಾಸೆ ಸಾರ್ವತ್ರಿಕವಾಗಿ ನಡೆದಿರುವುದು ವಚನ ಸಾಹಿತ್ಯದಲ್ಲೇ ಎಂದು ಹೇಳಬಹುದು. ಜೈನ ಸಾಹಿತ್ಯದಲ್ಲಿ ಸಂಸ್ಕೃತ ಪ್ರಾಕೃತಗಳಿಂದ ಬಂದ ಜೈನಧರ್ಮ ಸಿದ್ಧಾಂತ ನಿರೂಪಣೆ, ತತ್ವಜಿಜ್ಞಾಸೆ ಸಿದ್ಧರೂಪದಲ್ಲಿಯೇ ಇದ್ದುದರಿಂದ ಪಂಪ, ರನ್ನ, ಪೊನ್ನಾದಿಗಳಿಗೆ ಅವುಗಳನ್ನು ವಿವರಿಸುವಲ್ಲಿ ಯಾವ ಭಾಷಿಕ ತೊಡಕು ಕಾಡಿದಂತೆ ಕಾಣುವುದಿಲ್ಲ. ಆದರೆ ವಚನಯುಗದ ಉಚ್ಛ್ರಾಯ ಸ್ಥಿತಿಯಲ್ಲಿ ವಚನಕಾರರು ತಮ್ಮ ಚಿಂತನೆಗಳಿಗೆ ಹೊಸದಾಗಿ ಶಬ್ದರೂಪವನ್ನು ಕೊಡುತ್ತ ಹೋಗಬೇಕಾಗಿ ಬಂದುದರಿಂದ ಅವುಗಳ ಸಮರ್ಥ ವ್ಯಾಖ್ಯಾನವನ್ನೂ ಅವರೇ ಮಾಡಬೇಕಾಯಿತು. ತಾವು ಬಳಸಿದ ಶಬ್ದಗಳೆಲ್ಲ ಹಳೆಯದೇ ಆದರೂ ಆ ಶಬ್ದಗಳು ವಿವಿಧ ಧ್ವನಿಗಳನ್ನು ಮೂಡಿಸುವಂತೆ ಬಳಸುವ ಜವಾಬ್ದಾರಿಯನ್ನು ಹೊತ್ತರು.'[೪]

ಕೊಂಡಗುಳಿ ಕೇಶಿರಾಜ, ಜೇಡರ ದಾಸಿಮಯ್ಯರಂತಹ ಬಸವಪೂರ್ವ ಶರಣರಲ್ಲಿ ಬಳಕೆಯಾಗಿದ್ದ ಮಿತ ಸಂಖ್ಯೆಯ ಶರಣ ಪದಕೋಶ (ಉದಾಹರಣೆಗೆ ಇಷ್ಟಲಿಂಗ, ತ್ರಿಲಿಂಗ, ಬಯಲು, ಜಂಗಮ, ಕಾಯಕ, ಮಹೇಶ, ತುರಿಯ, ವಿಭೂತಿ, ರುದ್ರಾಕ್ಷಿ, ಪಂಚಾಚಾರ ಇತ್ಯಾದಿ. ಬಸವಣ್ಣನವರ ಕಾಲದಲ್ಲಿ ವ್ಯಾಪಕವಾಗಿ ಬೆಳೆದು

ತನ್ನ ವಿಸ್ತಾರ, ವ್ಯಾಪ್ತಿಗಳನ್ನು ಹಿಗ್ಗಿಸಿಕೊಂಡಿತು. ಬರುಬರುತ್ತಾ ಅದರ ವೈಶಾಲ್ಯ ಕನ್ನಡ ಶಬ್ದಕೋಶಕ್ಕೆ ನವೀನ ಶಕ್ತಿಯನ್ನೂ, ಸೃಜನಾತ್ಮಕ ಕಸುವನ್ನೂ ಕೊಡುವುದರ ಜೊತೆಯಲ್ಲಿ ಅದುವರೆಗೂ ಸಾಹಿತ್ಯ ಕ್ಷೇತ್ರದಲ್ಲಿ ಅಷ್ಟಾಗಿ ಪ್ರವೇಶ ಪಡೆಯದ ನೂರಾರು ವೃತ್ತಿ ಸಂಬಂಧಿ ಪದಗಳು ಬೆಳಕಿಗೆ ಬರುವಂತೆ ಆಯಿತು. ಈ ಕಾರಣಗಳಿಂದ ಕನ್ನಡ ಭಾಷೆ ಶ್ರೀಮಂತಿಕೆಯನ್ನು ಹಾಗೂ ಹೆಚ್ಚು ಸೃಜನಾತ್ಮಕವಾಗಿ ಕ್ರಿಯಾಶೀಲತೆಯನ್ನು ಪಡೆಯಿತು. ವಚನಕಾರರಲ್ಲಿ ಜೇಡರ ದಾಸಿಮಯ್ಯನನ್ನು ಆದ್ಯ ವಚನಕಾರನೆಂದು ಗುರುತಿಸಲಾಗುತ್ತದೆ. ಅವನ ನಾಲ್ಕು ವಚನಗಳಲ್ಲಿ ಬಯಲು ಪದದ ಉಲ್ಲೇಖವನ್ನು ಕಾಣಬಹುದು.

**ಆಡಬಾರದ ಬಯಲು ಸೂಡಬಾರದ ಬಯಲು**
**ನುಡಿಯಬಾರದ ಬಯಲು ಹಿಡಿಯಬಾರದ ಬಯಲು**
**ಈ ಒಡಲಿಲ್ಲದ ಬಯಲೊಳಗೆ ಅಡಗಿರ್ದ ಭೇದವ**
**ಈ ಲೋಕದ ಜಡರೆತ್ತ ಬಲ್ಲರೈ? ರಾಮನಾಥ ೭೩೩ ಸಂ. ೭**

ಈ ವಚನದಲ್ಲಿ ಜೇಡರ ದಾಸಿಮಯ್ಯ ಬಯಲಿನ ಸ್ವರೂಪವನ್ನು ಹೇಳುತ್ತಾ ಆಡಬಾರದ ಬಯಲು ಎಂದಾಗ ಎಡೆಯಾಡದಂತಹ, ಮಾತಿಗೆ ಸಿಗದಂತಹ ಎಂಬ ದ್ವಂದ್ವಾರ್ಥವನ್ನು ಗ್ರಹಿಸಲು ಅವಕಾಶವಿದೆ. ಸೂಡಬಾರದ ಬಯಲು ಎಂದಾಗ ಹಿಡಿತಕ್ಕೆ ಸಿಗಲಾರದ್ದು, ಧರಿಸಲಾರದ್ದು ಎಂಬ ಅರ್ಥಗಳು ಇವೆ. ಈ ಒಡಲಿಲ್ಲದ ಬಯಲಿನಲ್ಲಿ ಇದ್ದು ಇಲ್ಲದಂತೆ ಅಡಗಿರುವ ಭೇದವನ್ನು ಲೋಕದ ಅಜ್ಞಾನಿಗಳು ತಿಳಿಯಲು ಸಾಧ್ಯವೇ? ಎಂದು ಪ್ರಶ್ನಿಸುತ್ತಾ, ಬಯಲಿನ ಗ್ರಹಿಕೆಗೆ ಜಡತ್ವ ನೀಗಿಕೊಂಡ ಅರಿವಿನ ಅಗತ್ಯವಿದೆ ಎಂದು ಸೂಚಿಸಿದ್ದಾರೆ.

**ಘಟವ ನೊಡೆದು ಬಯಲ ನೋಡಲದೇಕೆ?**
**ಘಟದೊಳಗಿಪ್ಪುದು ಬಯಲೆಂದರಿದಡೆ ಸಾಲದೆ?**
**ಪಟವ ಹರಿದು ತಂತುವ ನೋಡಲದೇಕೆ?**
**ಆ ಪಟವ ತಂತುವೆಂದರಿದಡೆ ಸಾಲದೆ?**
**ಕಟಕವೆ ಕಾಂಚನವೆಂದರಿದಡೆ ಸಾಲದೆ?**
**ತನ್ನನಳಿದು ಘನವ ನೋಡಲದೇಕೆ?**
**ತಾನೆ ಘನವೆಂದರಿದಡೆ ಸಾಲದೆ? ಹೇಳಾ! ರಾಮನಾಥ ೭೯ ಸಂ.೭**

ಈ ವಚನದಲ್ಲಿ ಬಯಲು ಸ್ವರೂಪವನ್ನು ಪರಮಾತ್ಮನ ಸ್ವರೂಪ ನಿರ್ದೇಶನಕ್ಕೆ ಬಳಸಿಕೊಳ್ಳಲಾಗಿದೆ. ಪರಮಾತ್ಮನ ಸ್ವರೂಪವನ್ನು ಅರಿಯಲು ಘಟ (ದೇಹ)ವನ್ನು ಒಡೆಯುವ ಅಗತ್ಯವಿಲ್ಲ. ಘಟದೊಳಗಿರುವ ಆತ್ಮವೇ ಪರಮಾತ್ಮ (ಬಯಲು) ಎಂದು ತಿಳಿದರೆ ಸಾಕಾಗುವುದಿಲ್ಲವೆ? ವಸ್ತ್ರವನ್ನು ಹರಿದು ನೂಲಿನ ಎಳೆಯನ್ನು ನೋಡುವ

ಅಗತ್ಯವೇನಿದೆ? ವಸ್ತ್ರವೇ ನೂಲಿನ ಎಳೆಗಳೆಂದು ಅರಿತರೆ ಸಾಲದೆ? ಚಿನ್ನದ ಕಡಗನನ್ನು ಮುರಿದು ಚಿನ್ನವನ್ನು ನೋಡುವ ಅಗತ್ಯವೇನಿದೆ? ಕಡಗವೇ ಚಿನ್ನವೆಂದು ಅರಿತರೆ ಸಾಲದೆ? ಹಾಗೆಯೇ ತನ್ನನ್ನು ಅಳಿದುಕೊಂಡು ಪರಾತ್ಪರವನ್ನು ಏಕೆ ನೋಡಬೇಕು? ತಾನೆ ಪರಾತ್ಪರವೆಂದು ಅರಿತರೆ ಸಾಲದೆ? ಎಂದು ರಾಮನಾಥನನ್ನು ಸಾಕ್ಷಿಯಾಗಿಟ್ಟು ಕೊಂಡು ಪ್ರಶ್ನಿಸಿದ್ದಾರೆ. ಆತ್ಮ ಪರಮಾತ್ಮಗಳ ಅಭೇದ ತತ್ವವನ್ನು ಘಟ, ಪಟ, ಕಟಕ, ದೇಹ (ಆತ್ಮ); ಬಯಲು ತಂತು, ಕಾಂಚನ ಮತ್ತು ಘನ ಎಂಬ ಸುಲಭ ಲೌಕಿಕ ಗ್ರಾಹ್ಯ ವಿಷಯಗಳ ಮೂಲಕ ಸರಳವಾಗಿ ಅಷ್ಟೇ ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ.

ಇನ್ನೂ ಎರಡು ವಚನಗಳಲ್ಲಿ ಜೇಡರ ದಾಸಿಮಯ್ಯ ಪರಮಾತ್ಮನ ಬೆಡಗಿನ ಸ್ವರೂಪವನ್ನು ಸುಲಭವಾಗಿ ಗ್ರಹಿಸಲು ಸಾಧ್ಯವಿಲ್ಲವೆಂಬುದನ್ನು ನಿರೂಪಿಸಿದ್ದಾರೆ.

**ಬಯಲ ಬಣ್ಣವ ಮಾಡಿ**
**ಸ್ವಯವ ನಿಲವ ಮಾಡಿ**
**ಸುಳಿವಾತನ ಬೆಡಗ ಬಲ್ಲವರಾರೈ? ರಾಮನಾಥ ೮೩೦.ಸಂ. ೭**
**ಮಾಡಿದಲ್ಲದೆ ಮನೆಯೊಳಗಾಗದು ಬಯಲು**
**ಕಣ್ಣು ಕಂಡಲ್ಲದೆ ಪರವಾಗದು**
**ಈ ಪರಿಯ ನರರೆತ್ತ ಬಲ್ಲರೈ ರಾಮನಾಥ ೮೪೯. ಸಂ.೭**

ಬಯಲನ್ನು (ವರ್ಣರಹಿತವಾದದ್ದನ್ನು) ವರ್ಣಮಯವಾಗಿಸುವ ಸ್ವಯ(ನಿತ್ಯವಾದುದು)ವನ್ನೇ ತನ್ನ ನಿಲವನ್ನಾಗಿ ಮಾಡಿ ಸುಳಿಯುವ ಬೆಡಗನ್ನು ಅರಿತವರು ಯಾರು ಎಂದು ಮೊದಲ ವಚನದಲ್ಲಿ ಸೂಚಿಸಿದರೆ ಎರಡನೆಯ ವಚನದಲ್ಲಿ ಇಚ್ಛಾ ಪೂರ್ವಕವಾಗಿ ಮಾಡಿಕೊಳ್ಳದೆ ಬಯಲು ಮನೆಯಲ್ಲಿ (ಮನದಲ್ಲಿ) ರೂಪುಗೊಳ್ಳದು. ಕಣ್ಣುಗಳು ಪ್ರತ್ಯಕ್ಷವಾಗಿ ಕಂಡಲ್ಲದೆ ರೂಪವನ್ನು ಗ್ರಹಿಸಲು ಸಾಧ್ಯವಿಲ್ಲ. ಮನಸ್ಸು ಪರವೆಂದು ಭಾವಿಸದೆ ಪರವೆಂದು ಗ್ರಹಿಸುವುದು ಅಸಾಧ್ಯ. ಈ ಒಳ ಸೂಕ್ಷ್ಮಗಳನ್ನು ಮಾನವರು ಹೇಗೆ ತಿಳಿಯಲು ಸಾಧ್ಯ ಎಂದು ನಿರೂಪಿಸಿದಂತೆ ಕಾಣುತ್ತದೆ.

ದೈವವನ್ನು ನಿರ್ದೇಶಿಸಲು ವಚನಕಾರರು ಬೇರೆಬೇರೆ ಪದಗಳನ್ನು ಬಳಸಿರುವರಾದರೂ (ಲಿಂಗ, ಘನ, ಚಿದ್ಘನ, ನಿರಾಳ, ನಿಶ್ಶಬ್ದ.. ಇತ್ಯಾದಿ) ಬಯಲು ಪದವನ್ನೂ ವ್ಯಾಪಕವಾಗಿ ಬಳಸಿದ್ದಾರೆ. ಬಯಲು ಪದದ ಅರ್ಥ ವ್ಯಾಪ್ತಿ ದೈವ ಎಂಬ ಅರ್ಥದಲ್ಲಿ ನಿಲ್ಲದೆ ಅದರ ಅರ್ಥ ವೈಶಾಲ್ಯ ಮಾತಿನ ಮಿತಿಗೆ ನಿಲುಕಲಾರದ್ದಾಗಿದೆ ಅಥವಾ ದೈವದ ಅರ್ಥ ವ್ಯಾಪ್ತಿಗೆ ವಚನಕಾರರು ನೀಡಿದ ಮಹೋನ್ನತ ಕಲ್ಪನೆ ಇದಾಗಿದೆ. 'ಬಯಲು ಎಂಬ ಪದಕ್ಕೆ ಅರ್ಥವನ್ನು ನಾವು ಎರಡು ವಿಧದಲ್ಲಿ ನೋಡಬಹುದು. ಒಂದು ಆಧ್ಯಾತ್ಮಿಕ ದೃಷ್ಟಿಕೋನವಾದರೆ, ಮತ್ತೊಂದು ವೈಜ್ಞಾನಿಕ

ದೃಷ್ಟಿಕೋನ. ಬಯಲಿನ ಸ್ವರೂಪ ಕುರಿತು ಅಂದು ವಚನಕಾರರು ವಿವರಿಸಿದ ಪರಿಯು ಇಂದು ವಿಜ್ಞಾನಿಗಳು ವರ್ಣಿಸುವ Space ದ ಪರಿಗೆ ಸರಿಹೊಂದುವುದನ್ನು ಗಮನಿಸಿದರೆ ನಮಗೆಲ್ಲಾ ವಚನಕಾರರ ಆ ಅನುಭಾವ ನಿಜವಾಗಿಯೂ ಒಂದು ಸಂಶೋಧನೆ ಎಂದೆನಿಸುತ್ತದೆ. ಕೇವಲ ಅನುಭಾವದ ಮೂಲಕ ಅವರು ಬಯಲನ್ನು ಅಳೆದು ನೋಡಿದರೆ ಈಗಿನ ವಿಜ್ಞಾನಿಗಳು ಸಾಧನ ಸಲಕರಣೆಗಳ ಮೂಲಕ ಬಯಲಿನ ವಿಸ್ತಾರ ಕಂಡು ಬೆರಗಾಗಿದ್ದಾರೆ'[೫] ಎಂದು ರುದ್ರೇಶ ಗಂಗಾಧರ ಕಿತ್ತೂರ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಅವರು ಮುಂದುವರಿದು ಬಯಲಿಗೆ ಪ್ರಾರಂಭವೆಂಬುದಿಲ್ಲ ಮತ್ತು ಅಂತ್ಯವೆಂಬುದಿಲ್ಲ. ಈ ಬ್ರಹ್ಮಾಂಡವೆಲ್ಲ ಬಯಲಿನಲ್ಲಿ ಅಡಗಿದೆ. ಬ್ರಹ್ಮಾಂಡವು ಕೋಟಿ ಕೋಟಿ ಮೈಲುಗಳಷ್ಟು ವ್ಯಾಪ್ತಿಯನ್ನು ಹೊಂದಿದೆ ಎಂದು ಅಳೆದಿದ್ದಾರೆ. ಅಲ್ಲದೆ ನಮ್ಮ ಬ್ರಹ್ಮಾಂಡವು ಬಯಲಿನಲ್ಲಿ ತೇಲುತ್ತಿದೆ ಎಂದಿದ್ದಾರೆ. ಜೊತೆಗೆ ನಮ್ಮಂತಹ ಮಿಲಿಯನ್ ಬ್ರಹ್ಮಾಂಡಗಳು ಬಯಲಿನ ಸ್ವರೂಪವನ್ನು ಅಂದೇ ಹನ್ನೆರಡನೆಯ ಶತಮಾನದಲ್ಲಿ ಅವರು ತಿಳಿದಿರುವುದು ನಿಜಕ್ಕೂ ಅಚ್ಚರಿಯ ಸಂಗತಿ.'[೬] 'ಬಯಲು ಎಂಬುದು ಸೃಷ್ಟಿಯ ಜೊತೆಗೆ ಅಸ್ತಿತ್ವ ಪಡೆಯಿತು ಎನ್ನುತ್ತದೆ ವಿಜ್ಞಾನ. ಇದರ ಪ್ರಕಾರ ಕಾಲದ ಹಾಗೆ ಬಯಲಿಗೆ ಆದಿ ಅಂತ್ಯವಾಗಲಿ, ರೂಪುರೇಖೆ, ಬಣ್ಣ, ಗುಣ, ವಾಸನೆ, ಪರಿವರ್ತನೆಯಾಗಲೀ ಇರುವುದಿಲ್ಲ. ಈ ಬಯಲನ್ನು 'ವಿದ್ಯುತ್ ಚಿನ್ಮಯ' (Electro spiritnal) ಎಂದು ಕರೆಯುತ್ತಾರೆ. ಇದು ಇದ್ದೂ ಇಲ್ಲದಿರುವ ಮೂಲ ಧಾತುಗಳನ್ನು ಹೊಂದಿರುತ್ತದೆ. ವಿಜ್ಞಾನಿಗಳ ಪ್ರಕಾರ ಆ ಮೂಲಧಾತು ಈಥರ್(either)ಈಥರ್ ಅನ್ನು ಇದೆ ಎಂದರೂ ಇಲ್ಲ, ಇಲ್ಲ ಎಂದರೂ ವ್ಯತ್ಯಾಸವಿರುವುದಿಲ್ಲ. ಕಾಲದಿಂದ ಒಂದಷ್ಟು ಪ್ರಮಾಣವನ್ನು ಬೇರೆ ಮಾಡುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಬಯಲಿಂದ ಎಷ್ಟೇ ಜಾಗವನ್ನು ಆವರಿಸಿದರೂ ನಾವು ಬಯಲಿನೊಳಗೇ ಇರಬೇಕಾಗುತ್ತದೆ. ಬಯಲಿನ ಪರಿಧಿಬಿಟ್ಟು ಹೊರಗೆ ಹೋಗಬೇಕೆಂದೇನಾದರೂ ಯೋಚಿಸಿದರೆ ಈ ಬಯಲಿಗೆ ಪರಿಧಿಯೇ ಇರುವುದಿಲ್ಲ'[೭] ಎಂದು ವಿವರಿಸಿದ್ದಾರೆ.

ಪ್ರೊ. ಬಿ.ವಿರೂಪಾಕ್ಷಪ್ಪನವರು 'ಇಂದಿನ ಖಗೋಳ ವಿಜ್ಞಾನದ ಮಹಾಸ್ಫೋಟ ಸಿದ್ಧಾಂತ (Big bang theory)ದ ಪ್ರಕಾರ ಅನೇಕ ಅಗೋಚರ ಪ್ರಕ್ರಿಯೆಗಳ ಪರಿಣಾಮವಾಗಿ ಅದರಲ್ಲಿರುವ ಅಂತರ್ಗತ ಶಕ್ತಿ ಒಂದು ಬಿಂದುವಾಗಿ ಪರಿಣಮಿಸುತ್ತದೆ. (ಇದನ್ನೇ ಬಯಲು ಬಲಿಯುವದೆಂದು ಪ್ರಭು ದೇವರು ಹೇಳಿದ್ದಾರೆ.) ಈ ಬಿಂದು ಸ್ಫೋಟಗೊಂಡು ಶಕ್ತಿ ಹೊರಹೊಮ್ಮಿ ಸೃಷ್ಟಿ ರಚನೆಯಾಗುವುದನ್ನು ಈ ಸಿದ್ಧಾಂತ ಪ್ರತಿಪಾದಿಸುತ್ತದೆ.[೮] ..ಇಂದಿನ ವಿಜ್ಞಾನ ಪ್ರಾಯೋಗಿಕ ತಳಹದಿಯ ಮೇಲೆ ಪ್ರತಿಪಾದಿಸಿದ ವಿಶ್ವೋತ್ಪತ್ತಿ ಸಿದ್ಧಾಂತವನ್ನು ಶರಣರು ತಮ್ಮ ಅನುಭಾವದ ಒಳಗಣ್ಣಿನಿಂದ ಪ್ರತಿಪಾದಿಸಿರುವುದು ಅದ್ಭುತ ಸಂಗತಿಯಾಗಿದೆ.'[೯] ಎಂದು ಅಭಿಪ್ರಾಯ ಪಟ್ಟಿದ್ದಾರೆ.

**ಬಯಲಿನ ಸ್ವರೂಪವನ್ನು ಚಿಂತಿಸುತ್ತಾ ಸಿದ್ಧರಾಮ ಕೊಡುವ ಚಿತ್ರ ಹೀಗಿದೆ.**

**ಆದಿಯಲ್ಲಿ ಬಯಲು, ಅಂತ್ಯದಲ್ಲಿ ಬಯಲು**
**ಮಧ್ಯದಲ್ಲಿ ತೋರಿ ಕೊಡುವುದು ನೋಡಾ ಈ ಘಟವು**
**ತೋರಿ ತೋರಿ ಕೆಡುವುದಕ್ಕೆ**
**ಈ ಜಗದಲ್ಲಿ ಇದೆ ದೃಷ್ಟ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ ೧೪೮೮ ಸಂ. ೪**

ಆದಿ ಅಂತ್ಯಗಳಲ್ಲಿ ಬಯಲು ಸಕಲ ಚರಾಚರವೂ ಈ ಬಯಲಿನಲ್ಲಿ ಸಮಾವೇಶವಾಗಿದೆ. ನಮ್ಮ ಬ್ರಹ್ಮಾಂಡವೂ ತೇಲುತ್ತಿರುವ ಒಂದು ಅಂಶ. ಈ ವಿಸ್ತಾರ ಬಯಲಿನಲ್ಲಿ ಬ್ರಹ್ಮಾಂಡ ಪ್ರಕಟವಾಗಿ ಮತ್ತೆ ಮತ್ತೆ ವಿನಾಶ ಹೊಂದುತ್ತದೆ. ಈ ಜಗತ್ತಿನಲ್ಲಿ ಕಾಣುವುದು ಇದು ಎಂದಿದ್ದಾರೆ.

**ಸತ್ಯವೂ ಇಲ್ಲ ಅಸತ್ಯವೂ ಇಲ್ಲ**
**ಸಹಜವೂ ಇಲ್ಲ ಅಸಹಜವೂ ಇಲ್ಲ**
**ನಾನೂ ಇಲ್ಲ ನೀನೂ ಇಲ್ಲ**
**ಇಲ್ಲ ಇಲ್ಲವೆಂಬುದು ಗುಹೇಶ್ವರ ಬಯಲು ೧೫೭೬ ಸಂ. ೨**

ಬಯಲು ಇದೆ ಆದರೆ ಇಲ್ಲ. ಅದು ಸತ್ಯವೂ ಇಲ್ಲ ಅಸತ್ಯವೂ ಇಲ್ಲ. ಸಹಜ ಅಸಹಜವೂ ಇಲ್ಲ ನಾನೂ (ಆತ್ಮ) ಇಲ್ಲ ನೀನೂ(ಪರಮಾತ್ಮ) ಇಲ್ಲ. ಯಾವುದು ಇಲ್ಲ ಇಲ್ಲ ಎನ್ನುತ್ತೇವೋ ಅದೇ ಬಯಲು. ಇಲ್ಲ ಎಂದಾಗ ಇಲ್ಲ ಎಂದಲ್ಲ; ಏನೂ ಇಲ್ಲವೆಂದಲ್ಲ ಅದು ಇದೆ. ಸಾಪೇಕ್ಷ ಪರಿಕಲ್ಪನೆಗಳಿಂದ ಅದನ್ನು ವಿವರಿಸಿ ಹೇಳುವುದು ಸಾಧ್ಯವಿಲ್ಲ. ಈ ಎಲ್ಲ ಸಾಪೇಕ್ಷಗಳಿಂದ ಅತೀತವಾದ ಬಯಲು, ಈ ಎಲ್ಲವನ್ನೂ ಸಾಪೇಕ್ಷಗಳನ್ನೂ ಒಳಗೊಂಡಂತೆ ವಿಶ್ವಾತೀತವಾಗಿ ಆವರಿಸಿದೆ. ಇಡೀ ವಚನದಲ್ಲಿ ಮೊದಲಿಗೇ ಎದ್ದು ಕಾಣುವುದು 'ಇಲ್ಲ' ಪದದ ಪುನರಾವರ್ತನೆ. ಇದು ಪೂರ್ಣ ನೇತ್ಯಥಕ ಪದ. ಇತ್ಯರ್ಥಕ ಹಾಗೂ ನೇತ್ಯರ್ಥಕ ಮಿತಿದಾಟಿ ಇತ್ಯರ್ಥಕ ಬಯಲನ್ನು ಪರಿಭಾವಿಸುವ ಅಲ್ಲಮ ಪ್ರಭುವಿನ ಗ್ರಹಿಕೆ ಅನನ್ಯ ಅಸಧಾರಣ.

**ಅಲ್ಲಮ ಪ್ರಭುವಿನ ಇನ್ನೊಂದು ವಚನ**

**ಅರಿದೆನೆಂಬುದು ತಾಬಯಲು**
**ಅರಿಯೆನೆಂಬುದು ತಾಬಯಲು**
**ಅರುಹಿನ ಕುರುಹಿನ ಮರಹಿನೊಳಗೆ**
**ಗುಹೇಶ್ವರನೆಂಬುದು ತಾ ಬಯಲು ೬೨೩ ಸಂ.೨**

ತಿಳಿದಿರುವುದು, ತಿಳಿಯದಿರುವುದು ಅದೆಲ್ಲವೂ ಬಯಲು, ಅರಿವು ಮತ್ತು ಗುರುತಿನ ಮರೆವಿನಲ್ಲಿ ಗುಹೇಶ್ವರ ತಾ ಬಯಲು ಎಂದು ಹೇಳುವಾಗ, ನಿತ್ಯ ಸ್ಥಿರವಾದ ಬಯಲು (ಗುಹೇಶ್ವರ) ಅರಿವು ಮತ್ತು ಗುರುತುಗಳ ಮೂಲಕ ಗ್ರಹಿಸುವ

ಅಜ್ಞಾನದ ಮಿತಿಯಲ್ಲಿ ಬಯಲಾಗಿ ಹೋಗುತ್ತದೆ ಎಂದು ಸೂಚಿಸುವಂತಿದೆ. ಪರಮಾತ್ಮನ ನಿತ್ಯ ಸ್ಥಿರತೆಯ ಸಾಂಕೇತಿಕ ಪರಿಕಲ್ಪನೆ ಬಯಲು. ಈ ಮಹಾನ್ ಪರಿಕಲ್ಪನೆ ಅಲ್ಲಮಪ್ರಭುವಿನ ಭೂಮ ಗ್ರಹಿಕೆಯಾಗಿದೆ.

ಬಸವಣ್ಣನವರು ಒಂದು ವಚನದಲ್ಲಿ ಬಯಲು ಮತ್ತು ರೂಪಗಳ ಪಾರಸ್ಪಾರಿಕತೆಯನ್ನು, ಅದನ್ನು ಸಾಧಿಸಿದ್ದರಿಂದ ಉಂಟಾಗುವ ಸಾರ್ಥಕತೆಯನ್ನು ನಿರೂಪಿಸಿದ್ದಾರೆ.

**ಬಯಲ ರೂಪ ಮಾಡಬಲ್ಲಾತನೆ ಶರಣನು**
**ಆರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ**
**ಬಯಲ ರೂಪ ಮಾಡಲರಿಯದಿದ್ದರೆ ಎಂತು ಶರಣನೆಂಬೆ**
**ಆರೂಪ ಬಯಲ ಮಾಡಲರಿಯದಿದ್ದೆ ಎಂತುಲಿಂಗಾನುಭವಿಯೆಂಬೆ**
**ಈ ಈ ಉಭಯ ಒಂದಾದರೆ ನಿಮ್ಮಲ್ಲಿ ತೆರಹುಂಟೆ**
**ಕೂಡಲ ಸಂಗಮದೇವಾ ೯೨೫ (ಬಸವನಾಳರ ಸಂಪುಟ)**

ಬಯಲು ರೂಪಗಳ ಪಾರಿಸ್ಪಾರಿಕತೆಯ ಮರ್ಮವನ್ನು ಅರಿತ ಸಾಧಕ ಐಕ್ಯಸ್ಥಿತಿಯನ್ನು ಸಾಧಿಸಬಲ್ಲ ಎನ್ನುವುದನ್ನು ಶರಣ-ಲಿಂಗಾನುಭಾವಿಯ ಮೂಲಕ ನಿರೂಪಿಸಿದ್ದಾರೆ.

ಅರಿವಿನ ಮಾರಿ ತಂದೆ ರೂಪ ಮತ್ತು ಬಯಲುಗಳ ಪಾರಿಸ್ಪಾರಿಕತೆಯನ್ನು ಹೇಳುತ್ತಲೇ ಪರಮಾತ್ಮನ ಅರಿವು ಪಡೆಯುವ ಕೌಶಲ ಮಾರ್ಗವನ್ನು ನಿರೂಪಿಸಿದ್ದಾರೆ.

**ಬಯಲು ಬಯಲ ನೋಡಿ ಕಾಬುದಿನ್ನೇನು?**
**ರೂಪ ರೂಪ ನೋಡಿ ಕಾಬುದಿನ್ನೇನು?**
**ರೂಪ ಹಿಡಿಯಬಾರದು, ಬಯಲನರಿಯ ಬಾರದು**
**ಬಯಲು ರೂಪಿಂಗೆ ಹೊರಗು, ರೂಪು ಬಯಲಿಂಗೆ ಹೊರಗು**
**ಉಭಯವನರಿತಲ್ಲಿ ಸದಾಶಿವ ಮೂರ್ತಿ ಲಿಂಗಕ್ಕೆ ಒಳಗು ೫೫೮ ಸಂ.೫**

ಬಯಲು ಮತ್ತು ರೂಪ ಒಂದಕ್ಕೊಂದು ಭಿನ್ನ ಹಾಗೂ ಅಭಿನ್ನ. ಬಯಲು ಬಯಲನ್ನು ನೋಡಿದಾಗ ಬಯಲಲ್ಲದೆ ಇನ್ನೇನೂ ಕಾಣದು. ಹಾಗೆಯೇ ರೂಪು ರೂಪನ್ನು ನೋಡಿದಾಗ ರೂಪಲ್ಲದೆ ಇನ್ನೇನು ಕಾಣಲು ಸಾಧ್ಯ? ರೂಪ ಹಿಡಿತಕ್ಕೆ ಒಳಗಾಗದು. ಬಯಲು ಅರಿವಿಗೆ ಇವೆರಡನ್ನೂ ಏಕಕಾಲದಲ್ಲಿ ಸಂಧಿಸಿ ಅರಿತರೆ ಆತನು ಪರಮಾತ್ಮನಲ್ಲಿ ಒಳಗಾಗುತ್ತಾನೆ. ಇದು ಐಕ್ಯಸ್ಥಿತಿ; ಬಯಲು ಸ್ಥಿತಿ. ಬಯಲಾಗುವ ಪರಿಕಲ್ಪನೆಯನ್ನು ಅರಿವಿನ ಮಾರಿ ತಂದೆ ಅರ್ಥಪೂರ್ಣವಾಗಿ ನಿರೂಪಿಸಿದ್ದಾನೆ.

ಘಟ್ಟಿವಾಳಯ್ಯ ಬಯಲಿನ ಸ್ವರೂಪವನ್ನು ಹೇಳುತ್ತಾ ಹೇಳುತ್ತಾ ಮೂಕ ವಿಸ್ಮಿತನಾಗುತ್ತಾನೆ.

**ಏನೆಂದು ಎನಲಿಲ್ಲ; ನುಡಿದು ಹೇಳಲಿಕ್ಕಿಲ್ಲ**
**ನಿಜದಲ್ಲಿ ನಿಂದ ಬೆರಗ ಕುರುಹ ಹರಿವುದೇ ಮರುಳೆ?**
**ಹರಿದು ಹತ್ತುವುದೆ ಮರುಳೆ ಬಯಲು**
**ಅದು ತನ್ನಲ್ಲಿ ತಾನಾದ ಬಯಲು? ತಾನಾದ ಘನವು**
**ಇನ್ನೇನನರಸಲಿಲ್ಲ.**
**ಅದು ಮುನ್ನವೆ ತಾನಿಲ್ಲ**
**ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ.** **೪೪೩ ಸಂ.೭**

ಬಯಲಿನ ಅರಿವು ಮಾತಿನ ಮಿತಿಗೆ ನಿಲುಕುವಂತಹದಲ್ಲ. ಅದು ಅರಿವಿಗೆ ಬಂದ ನಂತರ ಅದು ಏನೆಂದು ಹೇಳಲು ಸಾಧ್ಯ? 'ನಿಜ'ದ ಸಾಕ್ಷಾತ್ಕಾರ ಪಡೆದು ನಿಂತ ಬೆರಗಿನ ಪರಾಕಾಷ್ಠೆಯಲ್ಲಿ ಬೇರೆಯಾಗಿ ನಿಂತು ಬಯಲನ್ನು ಪ್ರಾಪ್ತಿಗೊಳಿಸಿ ಕೊಳ್ಳಲು ಸಾಧ್ಯವೇ? ತಾನೂ ಬಯಲಿನಲ್ಲಿ ಒಂದಾಗಿ, ತಾನೇ ಘನವಾದ ಮೇಲೆ ಇನ್ನು ಅನ್ವೇಷನೆಗೆ ಉಳಿದುದಾದರೂ ಏನು? ಏಕೆಂದರೆ ಆಲೋಚಿಸುವ ಅಸ್ತಿತ್ವವೇ ಇಲ್ಲದಾಗ ಇಲ್ಲ ಇಲ್ಲ ಅಷ್ಟೆ. ಈ ಸ್ಥಿತಿಯಲ್ಲಿ ಮಾತು ಇಲ್ಲ. ಅಸ್ತಿತ್ವವೇ ಕರಗಿದಾಗ ಮಾತು ಮೌನದಲ್ಲಿ ಲೀನವಾಗುತ್ತದೆ.

ಅಕ್ಕಮಹಾದೇವಿ ಈ ಐಕ್ಯಸ್ಥಿತಿಯನ್ನು ತನ್ನ ಒಂದು ವಚನದಲ್ಲಿ ಹೀಗೆ ನಿರೂಪಿಸಿದ್ದಾರೆ.

**ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ, ಸಂಗವೆನ್ನೆ ಸಮರಸವೆನ್ನೆ**
**ಆಯಿತೆನ್ನೆ ಆಗದೆನ್ನೆ, ನೀನೆನ್ನೆ ನಾನೆನ್ನೆ**
**ಚೆನ್ನ ಮಲ್ಲಿಕಾರ್ಜುನಯ್ಯ**
**ಲಿಂಗೈಕ್ಯವಾದ ಬಳಿಕ ಏನೂ ಎನ್ನೆ** **೨೯೨ ಸಂ.೫**

ಸಾಕ್ಷಿಭಾವದಿಂದ ಅನಂತ ಕಾಲದಿಂದಲೂ ಅಸ್ತಿತ್ವದಲ್ಲಿರುವ ಬಯಲು ಹೇಗೆ ತನ್ನೊಳಗೆ ಅನಂತಕಾಲದ ಗಾಡಗೂಢ ರಹಸ್ಯಗಳನ್ನೂ ಒಳಗೊಂಡೂ ನಿರ್ಭಾವುಕ ಎಂಬಂತೆ ಇರುವ ರೀತಿ ಬೆರಗುಗೊಳಿಸುವಂತಹದು. ಅಲ್ಲಮ ಪ್ರಭುವಿನ ಈ ವಚನವನ್ನು ಗಮನಿಸಬಹುದು.

**ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು**
**ಬಯಲು ಬಯಲಾಗಿ ಬಯಲಾಯಿತಯ್ಯ**
**ಬಯಲ ಜೀವನ ಬಯಲ ಭಾವನೆ**
**ಬಯಲು ಬಯಲಾಗಿ ಬಯಲಾಯಿತಯ್ಯಾ**

**ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು**
**ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ** **೬೫೯ ಸಂ. ೨**

ಬಯಲಿನ ಆದಿ ಅಂತ್ಯಗಳು ಅರಿವಿಗೆ ಬಾರದಷ್ಟು ವಿಸ್ತಾರ ಬಯಲಿಂದ ಉತ್ಪತ್ತಿಯಾದ ಬಯಲು ವೃದ್ಧಿಸಿ ಬಯಲು ಬಯಲಾಗಿ ಬೆಳೆದಿದೆ. ಬದುಕೂ ಬಯಲು ಭಾವನೆಯೂ ಬಯಲು. ಪರಮಾತ್ಮ ಸ್ವರೂಪಿಯಾದ ಬಯಲನ್ನು ಆರಾಧಿಸಿ ಪೂಜಿಸಿದವರು ಬಯಲಿನಲ್ಲಿ ಐಕ್ಯವಾಗಿದ್ದಾರೆ. ಪರಮಾತ್ಮನನ್ನು ತಾನೂ ನಂಬಿ ಬಯಲಾದ ಮಾತನ್ನು ಅಲ್ಲಮ ಪ್ರಭು ನಿರೂಪಿಸಿದ್ದಾರೆ. ಅಮನೂಹ್ಯವಾದ, ಅಗ್ರಾಹ್ಯವಾದ ಬಯಲನ್ನು ಸರಳ ಕನ್ನಡ ಮಾತುಗಳಲ್ಲಿ ಸಹಜ ಸರಳ ಎಂಬಂತೆ ಚಿತ್ರಿಸುವ ಅಲ್ಲಮ ಪ್ರಭುವಿನ ಕಲೆಗಾರಿಕೆ, ಭಾಷಾ ಪ್ರಭುತ್ವ ಅಸದೃಶವಾದುದು.

ಮುಕ್ತಾಯಕ್ಕ ಹನ್ನೆರಡನೆಯ ಶತಮಾನದ ಅಸಾಧಾರಣ ಬೌದ್ಧಿಕ ಶಕ್ತಿಯುಳ್ಳ ವ್ಯಕ್ತಿ. ಅಲ್ಲಮರೊಂದಿಗೆ ಸಮಸಮವಾಗಿ ತಾತ್ವಿಕ ಚರ್ಚೆಯನ್ನು ಮಾಡಿ ತನ್ನಲ್ಲಿದ್ದ ಸಂದೇಹಗಳನ್ನು ಪರಿಹರಿಸಿಕೊಂಡು ಅನಂತರ ಮಾರ್ಗದರ್ಶನ ಪಡೆದ ಘನವ್ಯಕ್ತಿತ್ವ ಉಳ್ಳ ವ್ಯಕ್ತಿ. ಮುಕ್ತಾಯಕ್ಕನ ಒಂದು ವಚನ ಹೀಗಿದೆ.

**ಘನಮಹಿಮ ಶರಣರ ಸಂಗದಿಂದ ಘನಕ್ಕೆ ಘನವೇದ್ಯವಾದ ಬಳಿಕ**
**ಅರಿಯಲಿಲ್ಲ ಮರೆಯಲಿಲ್ಲ ಕೂಡಲಿಲ್ಲ, ಅಗಲಲಿಲ್ಲ**
**ಮನ ಮೇರೆದಪ್ಪಿ ನಿರವಯಲಾದ ಸುಖವ**
**ಶೂನ್ಯನಿಶ್ಶೂನ್ಯವೆಂದು ನುಡಿಯಲುಂಟೆ**
**ಶಬ್ದಮುಗ್ಧವಾಗಿ ಎನ್ನ ಅಜಗಣ್ಣ ತಂದೆಯ ಬೆರಸಿದ ಬಳಿಕ**
**ಉರಿಯುಂಡ ಕರ್ಪುರದಂತಾದೆನಯ್ಯಾ** **೮೬೬ ಸಂ.೫**

ಮಹಾಮಹಿಮ ಶರಣರ ಸಂಗದಿಂದ ಪರಮಾತ್ಮ ವೇದ್ಯವಾದನಂತರ, ಅರಿಯಲಿಲ್ಲ, ಮರೆಯಲಿಲ್ಲ, ಕೂಡಿದಂತಾಗಲಿಲ್ಲ, ಅಗಲಿದಂತೆಯೂ ಆಗಲಿಲ್ಲ, ಮನಸ್ಸು ಮೇರೆ ಮೀರಿ ನಿರವಯಲಾದ ಸುಖವನ್ನು ಮಾತಿನಲ್ಲಿ ಶೂನ್ಯವೆಂದೊ ನಿಶ್ಶೂನ್ಯವೆಂದೊ ಹೇಳುವುದು ಸರಿಯೆ? ಶಬ್ದ ಮುಗ್ಧವಾಗಿ ತನ್ನ ಅಣ್ಣ ಅಜಗಣ್ಣ ತಂದೆಯನ್ನು ಬೆರಸಿದ ಬಳಿಕ ತನ್ನ ಇಡೀ ಅಸ್ತಿತ್ವವೇ ಇಲ್ಲವಾದ ಸ್ಥಿತಿಯನ್ನು ಮುಕ್ತಾಯಕ್ಕ 'ಉರಿಯುಂಡ ಕರ್ಪೂರದಂತಾದೆನಯ್ಯಾ' ಎಂದು ನಿರೂಪಿಸಿದ್ದಾರೆ. ಶೂನ್ಯವಾಗುವ, ಬಯಲಾಗುವ ಪ್ರಕ್ರಿಯೆಯನ್ನು ಅತ್ಯಂತ ಸಮರ್ಥ ಉಪಮೆಯಲ್ಲಿ ಅಭಿವ್ಯಕ್ತಿ ಮಾಡಿರುವುದು ಅವರ ಸೃಜನಾತ್ಮಕ ಪ್ರತಿಭೆಗೆ ಸಾಕ್ಷಿಯಾಗಿದೆ. ಇನ್ನೊಂದು ವಚನದಲ್ಲಿ ಮುಕ್ತಾಯಕ್ಕೆ 'ಹೇಳದೆ ಬಯಲಾದ ಕಾಣ, ಎನ್ನ ಅಜಗಣ್ಣ ತಂದೆ' ಎಂದು ಅಣ್ಣನ ಅಗಲುವಿಕೆಯನ್ನು ಸ್ಮರಿಸಿಕೊಂಡಿರುವುದನ್ನು ಕಾಣಬಹುದು. (೮೭೨ ಸಂ೫)

ಹೀಗೆಯೇ ಅನೇಕ ವಚನಕಾರರು, ವಚನಕಾರ್ತಿಯರು ತಮ್ಮ ವಚನಗಳಲ್ಲಿ ಬಯಲು ಕುರಿತು ಚಿಂತಿಸಿದ್ದಾರೆ. ಮನುಮುನಿ ಗುಮ್ಮಟದೇವ ಒಂದು ವಚನದಲ್ಲಿ

'ಬಯಲ ಬ್ರಹ್ಮಾಂಡಗಳಿಲ್ಲದಲ್ಲಿ' (೧೦೨೭.ಸಂ.೮), ಅಕ್ಕ ಮಹಾದೇವಿ ಒಂದು ವಚನದಲ್ಲಿ 'ಬಯಲು ಲಿಂಗವೆಂಬೆನೆ? ಬಗಿದು ನಡೆವಲ್ಲಿ ಹೋಯಿತ್ತು' (೨೪೧ ಸಂ.೫) ಎಂದು ಹೇಳಿರುವುದನ್ನು ಗಮನಿಸಬಹುದು.

ಬೌದ್ಧ ಧರ್ಮದಲ್ಲಿ ಶೂನ್ಯದ ಚರ್ಚೆ ಬರುವುದುಂಟು. ಶೂನ್ಯ (ಸಂಸ್ಕೃತ) ಪಾಳಿ ಮತ್ತು ಟಿಬೇಟನ್ ಭಾಷೆಗಳಲ್ಲೂ ಸಮಾನಾರ್ಥಕ ಅನ್ಯರೂಪಗಳಲ್ಲಿ ಬಳಕೆಯಲ್ಲಿದೆ. ಬೌದ್ಧ ಧರ್ಮದ ಉಪದೇಶಗಳಲ್ಲಿ ಕಂಡು ಬರುವ ಪ್ರಮುಖ ಪರಿಕಲ್ಪನೆಗಳಲ್ಲಿ ಇದೂ ಒಂದಾಗಿದೆ. ಶೂನ್ಯತೆಯನ್ನು ಸಾಧಿಸುವುದು ಸಂಸಾರ ಚಕ್ರದಿಂದ ಮುಕ್ತಿ ಪಡೆಯುವ ಅಗತ್ಯಗಳಲ್ಲಿ ಒಂದೆಂದೂ, ಅದನ್ನು ಪಡೆಯಲು ಒಂದು ಮುಖ್ಯವಾದ ಬಾಗಿಲು ಶೂನ್ಯವಾಗುವಿಕೆ ಎಂದು ತೇರಾವಾದದಲ್ಲಿ ನಿರೂಪಿಸಲಾಗಿದೆ. ಶೂನ್ಯದ ಅರ್ಥ ಸಾರದ (essence) ಖಾಲಿಯಾಗುವಿಕೆ. ಈ ಖಾಲಿಯಾಗುವಿಕೆ ಜಾಗೃತ ಮನಸ್ಸಿನ ಪರಮಸುಖ, ಅನುಕಂಪೆ, ವಿವೇಕ ಗುಣಗಳನ್ನು ಒಳಗೊಂಡಿರುತ್ತದೆ. ಪರಮ ಔಷಧವೆಂದರೆ ಎಲ್ಲವುಗಳಿಂದ ಖಾಲಿಯಾಗುವುದು. ಪರಾತ್ಪರವಲ್ಲದ ಅನ್ಯವಿಷಯಗಳು ಮನಸ್ಸಿನಲ್ಲಿ ತುಂಬಿದ್ದರೆ ಅವು ನೋವನ್ನು, ಚಿಂತೆಯನ್ನು, ನಷ್ಟವನ್ನು ಉಂಟುಮಾಡುತ್ತವೆ. ಯಾವಾಗ ಪರಾತ್ಪರವಲ್ಲದ ಬೇರೆ ಎಲ್ಲವುಗಳಿಂದ ಮನುಷ್ಯ ಖಾಲಿಯಾಗುವನೊ ಆಗ ಸ್ವತಂತ್ರನಾಗುತ್ತಾನೆ. ಶೂನ್ಯತೆ ಅಸ್ತಿತ್ವದ ನಿರಾಕರಣೆಯಲ್ಲ. ಅಲ್ಲದೆ 'emptiness-the most misunderstood in Buddhism' ಎಂಬ ಮಾತೂ ಪ್ರಚಲಿತವಿದೆ. ಇದು ಶೂನ್ಯಕ್ಕೆ ಬೌದ್ಧಧರ್ಮದಲ್ಲಿ ಇರುವ ಒಂದು ಸ್ಥೂಲ ವಿವರಣೆ ಮಾತ್ರ. ಇದು ಏನೇ ಇರಲಿ, ವಚನಕಾರರು ಪರಿಕಲ್ಪಿಸಿರುವ 'ಶೂನ್ಯ'– 'ಬಯಲು' ಅರ್ಥ ವಲಯ ಬೌದ್ಧ ಧರ್ಮದಿಂದ ತುಂಬಾ ಭಿನ್ನವಾಗಿರುವುದು ಮೇಲು ನೋಟಕ್ಕೆ ಕಂಡುಬರುತ್ತದೆ.

ತೀರಾ ಇತ್ತೀಚೆಗೆ ಪ್ರಕಟವಾದ ಶಿವಪದ ರತ್ನಕೋಶದಲ್ಲಿ[೧೦] ಹತ್ತಕ್ಕೂ ಹೆಚ್ಚು ಅರ್ಥಗಳನ್ನು ಬಯಲು ಪದಕ್ಕೆ ನೀಡಲಾಗಿದೆ. ಆ ಪದಕ್ಕೆ ಮುಕ್ತಿ, ಪರಶಿವ, ಆಕಾಶ, ಚಿದಾಕಾಶ, ಚಿದಂಬರ, ಶೂನ್ಯ, ಶೂನ್ಯ ಸ್ಥಲ, ನಿಃಶೂನ್ಯ ಪರ್ಯಾಯ ಪದಗಳೆಂದು ಹೇಳಿದೆ. ಮುಂದುವರಿದು ಶೂನ್ಯದೊಂದಿಗೆ ಬೆರೆತು ಹೋಗುವುದು, ಐಕ್ಯ, ರೂಪವಿಲ್ಲದುದು ನಿರಾಕಾರ, ಪರವಸ್ತುಶಿವ, ಮಿಥ್ಯವಾದ ಮಾಯಾ ಪ್ರಪಂಚ, ಬಯಲದೇಹಿ, ಪಂಚಭೂತಗಳ ಕೆಟ್ಟ ಪರಿಣಾಮವನ್ನು ಇಲ್ಲವಾಗಿಸಿದವನು, ತನ್ನ ದೇಹವನ್ನು ಶಿವನ ಅಥವಾ ಬಯಲಿನ ಅಂಗವನ್ನಾಗಿ ಮಾಡಿಕೊಂಡವನು, ಐಕ್ಯವಾಗು, ಲೀನವಾಗು, ಗತಿಸು, ಮರಣ ಹೊಂದು ಎಂದು ಮುಂತಾದ ಅರ್ಥಗಳನ್ನು ನೀಡಲಾಗಿದೆ.

ಲೇಖನದ ಆರಂಭದಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿಯವರು ಅಲ್ಲಮಪ್ರಭು ಹಾಗೂ ಜೇಡರ ದಾಸಿಮಯ್ಯನವರ ವಚನಗಳನ್ನು ಉಲ್ಲೇಖಿಸಿ ಬಯಲ ಸ್ವರೂಪವನ್ನು ನಿರೂಪಿಸಿದ ವಿವರಗಳಿಂದ ಪ್ರಾರಂಭಿಸಿ, ಡಾ.ಎಂ.

ಚಿದಾನಂದ ಮೂರ್ತಿ, ಪ್ರೊ. ಸಂ.ಶಿ. ಭೂಸನೂರಮಠ, ರುದ್ರೇಶ ಗಂಗಾಧರ ಕಿತ್ತೂರ, ಪ್ರೊ. ಬಿ. ವಿರೂಪಾಕ್ಷಪ್ಪ ಮುಂತಾದ ಆಧುನಿಕ ಕಾಲದ ವಿದ್ವಾಂಸರು, ವಿಜ್ಞಾನಿಗಳು ನೀಡಿದ ವಿವರಣೆಗಳು, ಜೇಡರದಾಸಿಮಯ್ಯ, ಅಲ್ಲಮಪ್ರಭು, ಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮುಕ್ತಾಯಕ್ಕ, ಅರಿವಿನ ಮಾರಿತಂದೆ, ಘಟ್ಟಿವಾಳಯ್ಯ ಮುಂತಾದ ವಚನಕಾರರು ನಿರೂಪಿಸಿದ ಬಯಲು ಪರಿಕಲ್ಪನೆ, ಅರ್ಥ ನಿರ್ವಚನ ಮತ್ತು ವಿವಿಧ ನಿಘಂಟುಗಳು, ಪಾರಿಭಾಷಿಕ ಕೋಶಗಳು ಕೊಡುವ ಅರ್ಥವಲಯಗಳನ್ನು ಗಮನಿಸಿದ ನಂತರವೂ ಬಯಲಿನ ಪರಿಕಲ್ಪನೆಯ ಗ್ರಹಿಕೆ ಸುಸ್ಪಷ್ಟ ಗ್ರಾಹ್ಯವಾಗುವಂತಿಲ್ಲ. ಬಯಲು ಅಣುಅಣುವಿನ ಕಣಕಣಗಳ ಮಧ್ಯೆ ಪ್ರತಿ ವ್ಯಕ್ತಿ ವಸ್ತು ಸಕಲ ಸಜೀವ ನಿರ್ಜೀವ ಜೀವರಾಶಿಗಳ ಮಧ್ಯೆ ವ್ಯಾಪಿಸಿರುವ ಸರ್ವಾಂತರ್ಯಾಮಿಯಾಗಿದೆ. ಅದಿಲ್ಲದ ವಿಶ್ವವನ್ನೇ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅರಿವಿನ ಗಡಿಗಳನ್ನೂ, ಊಹೆಗಳ ಆಚೆ ನಿಲ್ಲುವ 'ಬಯಲು' ಅರ್ಥ ಪ್ರಯತ್ನ, ಪರಿಕಲ್ಪನೆಯ ಮಿತಿಗಳಾಚೆ ನಿಂತು ಮುಗುಳ್ನಂತೆ ಭಾಗವಾಗುತ್ತದೆ. ಅದೇ ಬಯಲಿನ ಮಹಾಬೆರಗು, ಮಹಾವಿಸ್ಮಯ. ಬಯಲಿನ ಪರಿಕಲ್ಪನೆಯನ್ನು ರೂಪಿಸುವುದೆಂದರೆ ಒಂದು ರೀತಿಯಲ್ಲಿ ಚಿತ್ರವಿಲ್ಲದ್ದಕ್ಕೆ ಚೌಕಟ್ಟು ಹಾಕಿದಂತೆ ಅಥವ ಚೌಕಟ್ಟೇ ಇಲ್ಲದ ಚಿತ್ರದಂತೆ.

**ಅಡಿ ಟಿಪ್ಪಣಿಗಳು:**

೧. ಎಂ.ಆರ್. ಶ್ರೀನಿವಾಸಮೂರ್ತಿ : ವಚನ ಧರ್ಮಸಾರ ಪು. ೨೧. ಐದನೆಯ ಮುದ್ರಣ ೧೯೭೭.

೨. ಡಾ.ಎಂ.ಚಿದಾನಂದಮೂರ್ತಿ : ಶೂನ್ಯ ಸಂಪಾದನೆಯನ್ನು ಕುರಿತು. ಪು. ೩೦ ಮೂರನೆಯ ಮುದ್ರಣ.೧೯೯೦

೩. ಪ್ರೊ. ಸ.ಶಿ. ಭೂಸನೂರಮಠ : ಶೂನ್ಯ ಸಂಪಾದನೆಯ ಪರಾಮರ್ಶೆ ಪು. ೭೧, ೩೨, ಅದೇ ೭೪, ೭೫. ೧೯೮೩.

೪. ಪ್ರೊ. ಅ.ರಾ.ಮಿತ್ರ : ವಚನಕಾರರು ಮತ್ತು ಶಬ್ದಕಲ್ಪ. ಪು. ೭೨ ೧೯೮೮೪

೫. ರುದ್ರೇಶ ಗಂಗಾಧರ ಕಿತ್ತೂರ : 'ವಚನಗಳಲ್ಲಿ ಬಯಲಿನ ವೈಜ್ಞಾನಿಕ ಅಂಶಗಳು' ಪು. ೭೪

೬. ಅದೇ ಪು. ೭೫

೭. ಅದೇ ಪು. ೭೬

೮. ಪ್ರೊ. ಬಿ. ವಿರೂಪಾಕ್ಷಪ್ಪ ವಿಜ್ಞಾನ ದಾಸೋಹ ಪು. ೩೨. ೧೯೯೮

೯. ಪ್ರೊ. ಬಿ. ವಿರೂಪಾಕ್ಷಪ್ಪ 'ವಚನಗಳಲ್ಲಿ ವಿಶ್ವೋತ್ಪತ್ತಿ ಸಿದ್ಧಾಂತ' ಪು. ೧೫೧ ಪೂರ್ವೋಕ್ತ– ವಚನಗಳಲ್ಲಿ ವಿಜ್ಞಾನ.

೧೦. ಶಿವಪದ ರತ್ನಕೋಶ. ೨೦೨೦



# ಜನ್ನನ ಕಾವ್ಯಗಳಲ್ಲಿ ಸಾವು ಮತ್ತು ಸ್ವರ್ಗ-ನರಕ



**ವಿದ್ಯಾಸಾಗರ**

ಜನ್ನನು ಪ್ರಾಚೀನ ಕನ್ನಡ ಕವಿಗಳಲ್ಲಿ ಪ್ರಮುಖವಾದಂತಹ ಕವಿಯಾಗಿದ್ದಾನೆ. ಜನ್ನನು ಪ್ರಾಚೀನ ಕಾವ್ಯಗಳನ್ನು ರಚಿಸಿರುವುದಲ್ಲದೆ ಹಲವು ಶಾಸನಗಳನ್ನು ಕೂಡ ಬರೆದಿರುವಂತದ್ದು ಕನ್ನಡ ಸಂದರ್ಭದಲ್ಲಿ ಚರ್ಚೆಯಾಗಿದೆ. ಈತನ ಹೆಸರನ್ನು ಸ್ಥಿರವಾಗಿ ಉಳಿಯುವಂತೆ ಮಾಡಿರುವ ಕೃತಿಗಳೆಂದರೇ ಯಶೋಧರ ಚರಿತೆ ಮತ್ತು ಅನಂತನಾಥಪುರಾಣ ಎಂದು ಹೇಳಬಹುದು. ಈ ಎರಡು ಕಾವ್ಯಗಳು ಧಾರ್ಮಿಕವಾದಂತಹವುಗಳೇ. ಇವುಗಳ ನಿರೂಪಣ ಶೈಲಿ ಮತ್ತು ವಸ್ತುವಿನ ಹಂದರ ಸ್ವಲ್ಪ ಭಿನ್ನವಾಗಿದೆ. ಯಶೋಧರ ಚರಿತೆ ಬಹಳಷ್ಟು ಪುರಾಣದ ಹಂದರಕ್ಕೆ ಸಿಲುಕದೆ ಬಹಳ ಸರಳವಾದ ರೀತಿಯಲ್ಲಿ ರಚನೆಗೊಂಡಿರುವಂತದ್ದಾಗಿದೆ. ಇದರ ಇನ್ನೊಂದು ವಿಶೇಷ ಗುಣವೆಂದರೆ ಬಹಳ ಸರಳ ಕಥಾವಸ್ತುವಿನಂತೆ ಕಂಡರೂ ಹೇಳಲು ಹೊರಟಿರುವ ಜೈನ ತಾತ್ವಿಕತೆ ಹಾಗೂ ಜೈನ ಧರ್ಮದ ಕುರಿತ ಭಿನ್ನ ಆಲೋಚನೆಗಳು ಬಹಳ ಮಹತ್ವದಾಗಿವೆ. ಇದಕ್ಕೆ ಪೂರಕ ಎಂಬಂತೆ ಇದರ ಕುರಿತ ಬಂದ ಭಿನ್ನ ನೆಲೆಯ ಅಧ್ಯಯನಗಳು ಮತ್ತು ವಿಮರ್ಶೆಯನ್ನು ನೋಡಬಹುದು. ಇದಕ್ಕೆ ಹೋಲಿಸಿ ಹೇಳುವುದಾದರೆ ಅನಂತನಾಥ ಪುರಾಣವು ಹೆಚ್ಚು ಪುರಾಣದ ಹಂದರದ ನೇಯ್ಗೆಯನ್ನು ಒಳಗೊಂಡಿದ್ದರೂ ಅದು ಯಶೋಧರ ಚರಿತೆಯಷ್ಟು ಚರ್ಚೆಗೆ ಒಳಗಾಗಲಿಲ್ಲ ಎಂದು ಹೇಳಬಹುದು. ಆದರೆ ಎರಡು ಕಾವ್ಯಗಳು ಜೈನ ಧರ್ಮದ ಹಿರಿಮೆಯನ್ನು ಹೇಳುವಂತಹ ಕೃತಿಗಳೇ ಆಗಿವೆ. ಯಶೋಧರ ಚರಿತೆಯು ಜೈನ ಧರ್ಮದ ಹಿರಿಮೆಯನ್ನು ಹೇಳುತ್ತಾ ವೈದಿಕ ಧರ್ಮವನ್ನು ವಿಡಂಬನೆಗೆ ಒಳಪಡಿಸಿರುವುದು ಕೂಡ ಕಂಡುಬರುತ್ತದೆ.

ಹೀಗೆ ಹಲವು ಅಂಶಗಳು ಒಳಗೊಂಡಿರುವ ಈ ಎರಡು ಕೃತಿಗಳಲ್ಲಿ ಸಾವು ಮತ್ತು ಸ್ವರ್ಗ ನರಕದ ಸ್ವರೂಪ ಹೇಗೆ ಬಂದಿದೆ ಎಂಬುದನ್ನು ಗುರುತಿಸುವುದು ಈ ಲೇಖನದ ಆಶಯವಾಗಿದೆ. ಯಶೋಧರ ಚರಿತೆ ಮತ್ತು ಅನಂತನಾಥ ಪುರಾಣ ಈ ಎರಡು ಕಾವ್ಯಗಳಲ್ಲಿ ಸಾವು ಮತ್ತು ಸ್ವರ್ಗ ನರಕದ ಕುರಿತ ಅಂಶಗಳು ಬಹಳಷ್ಟು ಬಂದಿವೆ. ಇಂತಹ ವಿವರಗಳು ಜೈನ ಧರ್ಮದ ಕಾವ್ಯಗಳಲ್ಲಿ ಸಾಮಾನ್ಯವಾಗಿ ಹರಿದು ಬಂದಿವೆ. ಜೈನಧರ್ಮದಲ್ಲಿ ಹೆಚ್ಚು ಮೋಕ್ಷ, ಪುನರ್ಜನ್ಮ, ಸಮಾಧಿಮರಣ, ಸ್ವರ್ಗ, ನರಕ, ಆತ್ಮ ಇಂತಹ ಹಲವಾರು ಬಗೆಯ ನಂಬಿಕೆಗಳು ಇರುವುದರಿಂದ ಸಹಜವಾಗಿ ಅವರ ಕಾವ್ಯಗಳಲ್ಲಿ ಇವೆಲ್ಲವುಗಳ ವಿವರ ಬಂದಿರುವುದನ್ನು ಕಾಣುತ್ತೇವೆ. ಜೈನ ಧರ್ಮದಲ್ಲಿ ಸಾವು ಕೂಡ ಒಂದು ಬಗೆಯ ಸಂಭ್ರಮದಂತೆ ಕಾಣವಂತಹುದಾಗಿದೆ. ಜೈನ ಧರ್ಮದಲ್ಲಿ ನಲವತ್ತೆಂಟು ಸಾವಿನ ಪ್ರಕಾರಗಳು ಇರುವುದನ್ನು ಸಾವನ್ನು ಅರಸಿ ಎಂಬ ಪುಸ್ತಕದಲ್ಲಿ ಷ. ಶೆಟ್ಟರ ಗುರುತಿಸಿದ್ದಾರೆ. ಇದಲ್ಲದೆ ಸಾವನ್ನು ಸ್ವಾಗತಿಸಿ ಎಂಬ ಪುಸ್ತಕದಲ್ಲಿ ಸಾವನ್ನು ಕುರಿತ ಹಲವಾರು ರೀತಿಯ ಚರ್ಚೆಯನ್ನು ಮಾಡಿದ್ದಾರೆ. ಇಂತಹ ಹಲವು ಅಂಶಗಳು ಈ ಎರಡು ಕಾವ್ಯಗಳಲ್ಲಿ ಕೂಡ ಬಂದಿವೆ. ಅಲ್ಲದೆ ಇನ್ನಿತರ ಧಾರ್ಮಿಕವಾದಂತಹ ಆಚರಣೆಯ ಇನ್ನಿತರ ಸಾವಿನ ಪ್ರಕಾರಗಳ ವಿವರಗಳು ಕೂಡ ಬಂದಿವೆ. ಇಂತಹ ಹಲವು ಅಂಶಗಳನ್ನು ಗುರುತಿಸಬಹುದು. ಮೊದಲನೆಯದಾಗಿ ಧಾರ್ಮಿಕ ಆಚರಣೆಯಿಂದ ಸಾವನ್ನು ಗುರುತಿಸುವುದರಿಂದ ಇದನ್ನು ಧರ್ಮ ಮತ್ತು ಸಾವು ಎಂದು ಚರ್ಚಿಸಲಾಗಿದೆ. ಮೊದಲನೆಯದಾಗಿ ಅವಿಚಿಮರಣ ಅಥವಾ ಕ್ಷಣಿಕವಾದಂತಹ ಸಾವು ಎಂದು ಕೂಡ ಕರೆಯಲಾಗುತ್ತದೆ.ಇದು ಜೈನ ಧರ್ಮದ ಸಾವಿನ ಪ್ರಕಾರಗಳಲ್ಲಿ ಒಂದಾಗಿದೆ, ಇದರ ಒಂದು ವಿವರವು ಯಶೋಧರ ಚರಿತೆಯಲ್ಲಿ ಕಂಡು ಬಂದಿರುವುದನ್ನು ನೋಡಬಹುದು.

**ನರೆಯೆಂಬ ಹೊಱಸು ಮೊಗಮೆಂ**
**ಬರಮನೆಯಂ ಪೊಕ್ಕೊಡಂಗನಾಲೋಕನಮೆಂ**
**ಬರಸೆಂತಿರ್ದಪನೆಂದಾ**
**ನರನಾಥಂ ತೊಱೆದನಖಿಳವಿಷಯಾಮಿಷಮುಂ**

**(ಯಶೋಧರ ಚರಿತೆ. ೨-೧೨)**

ಜೈನಧರ್ಮದಲ್ಲಿರುವ ಒಂದು ನಂಬಿಕೆ ಎಂದರೆ ಮನುಷ್ಯನು ಕ್ಷಣಕ್ಷಣಕ್ಕೂ ಆಯುಷ್ಯ ಕಳೆದುಕೊಳ್ಳುತ್ತಾನೆ. ಅದು ಕೂಡ ಸಾವನ್ನು ಹೊಂದಿದಂತೆ, ಏಕೆಂದರೆ ಕ್ಷಣಕ್ಷಣಕ್ಕೂ ಅವನ ರೂಪ, ಯವ್ವನ ಕಳೆದುಕೊಳ್ಳುತ್ತಾನೆ. ಹಾಗಾಗಿ ಇದೊಂದು ಸಾವು ಎಂಬುದನ್ನು ನಂಬುತ್ತಾರೆ. ಇಲ್ಲಿ ಯಶೋಘನು ಒಂದು ದಿನ ರಾಜಸಭೆಯಲ್ಲಿ ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡಾಗ ತನ್ನ ಕೂದಲುಗಳು ನರೆತದು

ಕಂಡು ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿ ಎಲ್ಲಾ ಇಂದ್ರಿಯ ಆಕರ್ಷಣೆಗಳನ್ನು ಪರಿತ್ಯಾಗ ಮಾಡಿ ರಾಜ್ಯವನ್ನು ಬಿಟ್ಟು ಹೊರಟು ಹೋಗುತ್ತಾನೆ. ಹಾಗೇಯೇ ಇದೆ ಕೃತಿಯಲ್ಲಿ ಇನ್ನೊಂದು ಪ್ರಕಾರದ ಸಾವಿನ ಕುರಿತ ಚಿತ್ರಣ ಬರುತ್ತದೆ. ಚಂದ್ರಮತಿ ಯಶೋಧರ ಇಬ್ಬರು ತಾಯಿ ಮಕ್ಕಳು ಸಂಕಲ್ಪ ಹಿಂಸೆಯ ಫಲದಿಂದ ಹಲವಾರು ಭವಾವಳಿಗಳನ್ನು ಪಡೆದು, ಪರಿಣಾಮವನ್ನು ಎದುರಿಸಿ ಕೊನೆಗೆ ಅಭಯಮತಿ ಮತ್ತು ಅಭಯರುಚಿ ಎಂದು ಅಣ್ಣ ತಂಗಿಯಾಗಿ ಜನಿಸಿ ಕೊನೆಗೆ ಅವರು ಸುದತ್ತರ ಶಿಷ್ಯ ಸಮುದಾಯದಲ್ಲಿದ್ದು ಕೊನೆಗೆ ತಪಸ್ಸಿನ ಮೂಲಕ ಮರಣವನ್ನು ಹೊಂದಿರುವುದು, ಹೀಗೆ ಕಾವ್ಯದಲ್ಲಿ ತರಲಾಗಿದೆ.

**ಅಮಳ್ಗಳ್ ಬಟಿಕ ಸುದತ್ತರ**
**ಸಮುದಾಯದೊಳಾಗಮೋಕ್ತಿಯಂ ನಡೆದು**
**ತಪಂತಮಗಮರೆ ನೋನ್ತು ಮುಡಿಪಿದ**
**ಸಮಯದೊಳೀಶಾನಕಲ್ಪದೊಳ್ ಜನಿಯಿಸಿದರ್**

**(ಯಶೋಧರ ಚರಿತೆ. ೪-೭೮)**

ಇದೊಂದು ಪ್ರಕಾರದ ಸಾವನ್ನು ಕೂಡ ಪಡೆಯುತ್ತಿರುವುದು ಕಂಡು ಬರುತ್ತದೆ. ಇದೆ ಬಗೆಯಾಗಿ ಅಭಯರುಚಿ ಮತ್ತು ಅಭಯಮತಿಯ ಮಾತುಗಳು ಕೇಳಿದ ಮಾರಿದತ್ತ ಅವನ ಹಿಂಸೆಯ ಕುರಿತು ಅವನಿಗೆ ಒಂದು ಬಗೆಯಾದ ಜಿಗುಪ್ಸೆಯನ್ನು ತಾಳಿ ಆತನು ಕೂಡ ತಪಿಸ್ಸಿನ ಮೂಲಕ ಸಾವನ್ನು ಹೊಂದಿ ಸ್ವರ್ಗದಲ್ಲಿ ಜನಿಸಿರುವುದಂತಹದ್ದು ಕೂಡ ಕೃತಿಯುಲ್ಲಿ ಕಾಣಬಹುದು ಇದು ಸಮಾಧಿಮರಣವೆಂದು ಈ ಕೆಳಗಿನ ಪದ್ಯದಲ್ಲಿ ಬಂದಿದೆ.

**ಕೆಲಕಾಲಮುಗ್ರತಪಮಂ**
**ಸಲಿಸಿ ಸಮಾಧಿಯೊಳೆ ಮುಡಿಪಿ ಮೂಜಿನೆಯ**
**ದಿವಂನೆಲೆಯಾಗೆ ಮಾರಿದತ್ತಂ**
**ಕಲಿಯಂ ಮೂದಲಿಸಿದಂತೆ ದೇವನೆ ಆದಂ**

**(ಯಶೋಧರ ಚರಿತೆ. ೪-೭೭)**

ಇಲ್ಲಿ ಸಮಾಧಿಮರಣವೆಂಬುದು ಜೈನ ಧರ್ಮದಲ್ಲಿ ಪ್ರಸಿದ್ಧಿಯನ್ನು ಪಡೆದಿರುವಂತಹದ್ದಾಗಿದೆ. ಇಂತಹದ್ದೆ ಒಂದು ಪ್ರಸಂಗ ಜನ್ನನ ಇನ್ನೊಂದು ಕೃತಿಯಾದ ಅನಂತನಾಥ ಪುರಾಣದಲ್ಲಿಯು ಬರುತ್ತದೆ. ಪದ್ಮರಥನು ಕೋಸಲ ದೇಶವನ್ನು ಆಳುತ್ತಿದ್ದನು. ಈತನ ಹೆಂಡತಿ ಲಕ್ಷ್ಮೀಮತಿ ಈ ದಂಪತಿಗಳ ಪುತ್ರ ಮೇಘರಥ, ಸ್ವಯಂಪ್ರಭು ಮುನಿಗಳ ಧರ್ಮ ಪ್ರಭಾವದಿಂದಾಗಿ ವಿರಕ್ತನಾಗಿ ನಂತರದಲ್ಲಿ ತನ್ನ ಮಗನಿಗೆ ರಾಜ್ಯಕೊಟ್ಟು ದಿಗಂಬರಮುನಿಯಾಗಿ ತಪಸ್ಸನ್ನು

ಕೈಕೊಂಡು ಸಮಾಧಿಮರಣಹೊಂದಿದ್ದು ಕಾವ್ಯದಲ್ಲಿ ಬರುತ್ತದೆ. ಇಲ್ಲಿ ಜೈನ ಸಮಾಧಿಮರಣವನ್ನು ಕುರಿತು ಪ್ರಾಚೀನ ಕರ್ನಾಟಕ ಜೀವನ ಮೌಲ್ಯಗಳು ಎಂಬ ಪುಸ್ತಕದಲ್ಲಿ ಹೀಗೆ ಗುರುತಿಸಲಾಗಿದೆ. ಇದು ಧಾರ್ಮಿಕ ಆತ್ಮ ಬಲಿದಾನವಾಗಿದೆ.ಜೈನಧರ್ಮದ ಪ್ರಕಾರ 'ಆತ್ಮ' ಅಮರ ಆ ಆತ್ಮಕ್ಕೆ ಪಾಪರೂಪದ ಕರ್ಮ, ಪುಣ್ಯರೂಪದ ಕರ್ಮ ಜನ್ಮಾಂತರಗಳಲ್ಲಿ ಅಂಟುತ್ತ ಇರುತ್ತದೆ. ಸೂಕ್ಷ್ಮರೂಪದ ಮತ್ತು ಪುಣ್ಯರೂಪದ ಕರ್ಮವನ್ನು ಕ್ಷಯಮಾಡಿಕೊಂಡು ಮೋಕ್ಷ ಇಲ್ಲವೆ ಸೌಗಂಧಕಲ್ಪವನ್ನು ಪಡೆಯಬೇಕು. ಇದಕ್ಕಾಗಿ ತಪಸ್ಸು ಮಾಡುತ್ತ ಸಮಾಧಿಮರಣವನ್ನು ಹೊಂದಬೇಕು. ಇಲ್ಲಿ ಆತ್ಮನು ಅಮರನಾಗಿರುವುದರಿಂದ ಸಾಧನೆ ಮಾಡುವವರು ಮರಣಕ್ಕೆ ಹೆದರುವುದಿಲ್ಲ. ಅತ್ಯಂತ ಸಂತೋಷದಿಂದ ಸಮಾಧಿಮರಣವನ್ನು ಸ್ವೀಕರಿಸುತ್ತಾರೆ. (ಪ್ರಾಚೀನ ಕರ್ನಾಟಕ ಜೀವನ ಮೌಲ್ಯಗಳು. ೭೨)

ಹೀಗೆ ಜೈನಧರ್ಮದ ಸಮಾಧಿಮರಣ ಕುರಿತು ಹೇಳಲಾಗಿದೆ. ಇದಲ್ಲದೆ ವಸುಸೇಣನು ಈತನು ಪೌದನಪುರದ ರಾಜನಾಗಿದ್ದ. ಈತನ ಮಿತ್ರನಾದ ಚಂಡಶಾಸನ, ವಸುಸೇಣನ ಹೆಂಡತಿಯಾದ ಸುನಂದೆಯನ್ನು ಅಪಹರಿಸಿಕೊಂಡು ಹೋಗಿ ಅವಳನ್ನು ಒಲಿಸಿಕೊಳ್ಳಲು ವಸುಸೇಣನನ ಮಾಯ ಶಿರವನ್ನು ಸುನಂದೆಯ ಮುಂದೆ ಇಟ್ಟಾಗ ಇದು ನಿಜವಾಗಿಯು ತನ್ನ ಗಂಡನ ತಲೆಯೆಂದು ಗಂಡ ಸತ್ತಿದ್ದಾನೆಂದು ತಿಳಿದು ಗಾಬರಿಗೊಂಡು ಸಾವನ್ನು ಹೊಂದುತ್ತಾಳೆ. ಇದು ಕನ್ನಡ ಸಾಹಿತ್ಯದಲ್ಲಿಯೇ ಅಪರೂಪದ ದಾಖಲೆಯಾಗಿದೆ. ಇಲ್ಲಿ ರಾಮಾಯಣದಲ್ಲಿ ಸೀತೆಯು ಮೂರ್ಚೆಯನ್ನು ಹೋಗುವ ಸಂದರ್ಭ ಕಾಣುತ್ತೇವೆ. ಆದರೆ ಇಲ್ಲಿ ಸುನಂದೆಯು ಮರಣವನ್ನು ಹೊಂದಿರುವುದನ್ನು ಕಂಡರೆ ಸೀತೆಯನ್ನು ಮೀರಿಸುವ ಪಾತ್ರವಾಗಿ ಕಂಡುಬರುತ್ತಾಳೆ. ಇದು ಸುನಂದೆಯ ಒಂದು ಬಗೆ ಸಾವು ಇದು ಧಾರ್ಮಿಕವಲ್ಲ. ಈ ಕಡೆ ಹೆಂಡತಿಯಾದ ಸುನಂದೆಯ ಸಾವನ್ನು ಸಹಿಸಿಕೊಳ್ಳಲಾರದೆ ವಸುಸೇಣನು ತನ್ನ ರಾಜ್ಯದ ಆಸ್ತಿಯನ್ನು ಅರ್ಧ ಮಗನಿಗೆ ನೀಡಿ, ಅರ್ಧ ಧರ್ಮಕಾರ್ಯಕ್ಕೆ ದಾನವಾಗಿ ನೀಡಿ ವಿರಕ್ತನಾಗಿ ತಪವನ್ನು ಕೈಗೊಂಡು ಮುಡಪಿ ಮರುಭವದಲ್ಲಿ ಸಹಸ್ರಾರರು ಕಲ್ಪದಲ್ಲಿ ದೇವನಾಗಿ ಜನಿಸಿದನು ಎಂಬ ವಿವರ ಬರುತ್ತದೆ. ಇದು ಕೂಡ ಧಾರ್ಮಿಕವಾದಂತಹ ಆಚರಣೆಯ ಹಿನ್ನೆಲೆಯಲ್ಲಿಯೇ ಪಡೆದ ಸಾವಾಗಿದೆ. ಹೀಗೆ ಜೈನ ಧರ್ಮದಲ್ಲಿರುವ ಅನೇಕ ಸಾವಿನ ವಿವರಗಳು ಜನ್ನನ ಕೃತಿಗಳಲ್ಲಿ ತಂದಿರುವುದನ್ನು ಧರ್ಮ ಮತ್ತು ಸಾವು ಎಂಬುದಾಗಿ ಗುರುತಿಸಲಾಗಿದೆ.

**ಕಾಮ ಮತ್ತು ಸಾವು:**

ಎರಡು ಕಾವ್ಯಗಳಲ್ಲಿಯೂ ಕಾಮ ಮತ್ತು ಸಾವಿಗೆ ಸಂಬಂಧಿಸಿದಂತ ಅಂಶಗಳನ್ನು ಗಮನಿಸಬಹುದು. ಯಶೋಧರ ಚರಿತೆಯಲ್ಲಿ ಅಮೃತಮತಿಯ

ಮನಸ್ಸಿನ ತೋಳಲಾಟವು ಬಂದರೇ, ಅನಂತನಾಥ ಪುರಾಣದಲ್ಲಿ ಚಂಡಶಾಸನನ ಕಾಮವ್ಯಾಮೋಹದಿಂದ ನಡೆದ ದುರಂತ ಚಿತ್ರಣವು ಕಂಡುಬರುತ್ತದೆ. ಈ ಕಾರಣಕ್ಕಾಗಿ ಕೊನೆಗೆ ಅವರು ಸಾವನ್ನು ಹೊಂದುವ ಪರಿಸ್ಥಿತಿ ಬರುವುದು ಕೃತಿಯಲ್ಲಿ ಕಾಣುತ್ತೆವೆ. ಅಮೃತಮತಿಯು ಅಷ್ಟವಾಂಕನನ್ನು ಮೋಹಿಸಿರುವ ಕಾರಣಕ್ಕೆ ಆಗುವ ಪರಿಣಾಮವನ್ನು ಗಮನಿಸಬಹದು. ಇಲ್ಲಿ ಅಮೃತಮತಿಯು ಮನಸ್ಸಿನ ತೋಳಲಾಟದಿಂದ ಕೂಡಿದಳು ಎಂಬುದಕ್ಕೆ ಒಂದು ಪದ್ಯವನ್ನು ಗಮನಿಸಬಹುದು.

**ಕರಿದಾದೊಡೆ ಕತ್ತುರಿಯಂ**
**ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ**
**ಸ್ಮರಚಾಪಮನಿಳಿಕಯ್ವರೆ**
**ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮಯ್ಯೊಳ್**

**(ಯಶೋಧರ ಚರಿತೆ ೨-೪೨)**

ಈ ಪದ್ಯವು ಅವಳ ಮನಸ್ಥಿತಿಯನ್ನು ಹೇಳುವುದಲ್ಲದೆ, ತನ್ನ ಗಂಡನನ್ನು ಬಿಟ್ಟು ಅನ್ಯವ್ಯಕ್ತಿಯನ್ನು ಬಯಸುವುದು ಸರಿಯಾದ ಮಾರ್ಗವಲ್ಲವೆಂಬುದನ್ನು ವಿಚಾರ ಮಾಡಲಾರದಂತ ಮನಸ್ಥಿತಿಗೆ ಬಂದು ತಲುಪಿರುವ ಅವಳ ಮನಸ್ಸಿನ ದುರ್ಬಲತೆಯನ್ನು ಹೇಳುತ್ತದೆ. ಇದಕ್ಕೆ ಪೂರಕವಾಗಿ ಇನ್ನೊಂದು ಪದ್ಯವನ್ನು ಗಮನಿಸಬಹುದು.

**ಒಲವಾದೊಡೆ ರೂಪಿನ ಕೋ**
**ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ**
**ಫಲಮೇನಿಂದೆನಗಾತನೆ**
**ಕುಲದೈವಂ ಕಾಮದೇವನಿಂದ್ರಂ ಚಂದ್ರಂ (ಯಶೋಧರ ಚರಿತೆ. ೨-೪೩)**

ಈ ಪದ್ಯವು ಅವಳ ಕಾವ್ಯವ್ಯಾವೋಹ ಮನಸ್ಥಿತಿಯುನ್ನು ಹೇಳುವಂತಹದ್ದಾಗಿದೆ. ಅಮೃತಮತಿಯು ತನ್ನ ಮತ್ತು ಅಷ್ಟಾವಂಕನ ವಿಷಯ ತಿಳಿದಿದೆ ಎಂದು ಚಂದ್ರಮತಿ ಮತ್ತು ಯಶೋಧರನನ್ನು ವಿಷವಿಕ್ಕಿ ಕೊಲ್ಲುವುದು ಕೂಡ ವಿಚಿತ್ರವಾದ ಅವಳ ಮನಸ್ಸನ್ನು ಹೇಳುತ್ತದೆ. ಆದರೆ ಈ ಕಾರಣದಿಂದ ಅವಳ ಸಾವು ಎಷ್ಟು ಭಯಾನಕವಾಗಿರುತ್ತದೆ ಎಂಬುದನ್ನು ಗಮನಿಸಿದರೆ ಅದು ಅವಳಿಗೆ ಶಿಕ್ಷೆಯಾಗಿರುವಂತೆ ಕಾಣುತ್ತದೆ.

**ಅಮೃತಮತಿ ಅಷ್ಟಾವಂಕಂ**
**ಗೆ ಮರುಳ್ಗೊಂಡತ್ತೆ ಗಂಡನಂ ವಿಷದಿಂ ಕೊ**
**ಂದು ಮುದಿರ್ತು ಕುಷ್ಠಿಕೊಳೆ ಪಂ**
**ಚಮ ನರಕದೊಳಟ್ಟಳರಸ ಧೂಮಪ್ರಭೆಯೊಳ್**

**(ಯಶೋಧರ ಚರಿತೆ. ೫೪-೫೯)**

ಇದು ಅಮೃತಮತಿಯ ಸಾವನ್ನು ಚಿತ್ರಿಸುತ್ತದೆ. ಅನಂತನಾಥಪುರಾಣದಲ್ಲಿ ಇದಕ್ಕೆ ತದ್ವಿರುದ್ಧವೆಂಬಂತೆ ಪುರುಷ ಮನಸ್ಸಿನ ಕಾಮ ವ್ಯಾಮೋಹವನ್ನು ಕಂಡುಬರುತ್ತದೆ.ಇಲ್ಲಿ ಸುನಂದೆ ಮತ್ತು ವಸುಸೇಣನ ಜೀವನ ಸುಖವಾಗಿ ಸಾಗುತ್ತಿರುವಾಗ ಗೆಳೆಯನಾದ ಚಂಡಶಾಸನನು ಸುನಂದೆಯನ್ನು ನೋಡಿ ಮನಸೋತು ಎಂತಹ ಸ್ಥಿತಿಗೆ ಒಯ್ಯುತ್ತಾನೆಂದರೇ ಕೊನೆಗೆ ಸಾವು ತಂದುಕೊಳ್ಳುವುದೆ ಆಗುತ್ತದೆ. ಇಲ್ಲಿ ಚಂಡಶಾಸನನು ಸುನಂದೆಯನ್ನು ಅಪಹರಿಸಿಕೊಂಡು ಹೋಗಬೇಕೆಂಬ ಕಾರಣಕ್ಕೆ ಬಂದ ವ್ಯಕ್ತಿಯಲ್ಲ, ಆದರೆ ಅವನು ಬಂದ ನಂತರ ಸುನಂದೆಯ ರೂಪವನ್ನು ನೋಡಿ ಕಾಮವ್ಯಾಮೋಹದಿಂದ ಇಂತಹ ಸ್ಥಿತಿಗೆ ಸಿಲುಕಿಬಿಟ್ಟಿರುವುದನ್ನು ಕಾವ್ಯದಲ್ಲಿ ಗಮನಿಸಬಹುದು. ಕೊನೆಗೆ ಅವನು ಎಂತಹ ಸ್ಥಿತಿಗೆ ಬಂದು ಬಿಡುತ್ತಾನೆ ಎಂದರೆ ಅವಳನ್ನು ಪಡೆಯದೆ ಇರುವ ನೋವು ಕೂಡ ಸಾವು. ಸಾವು ಬಂದರೂ ಚಿಂತೆಯಿಲ್ಲ ಅವಳನ್ನು ಪಡೆಯಬೇಕೆಂಬ ನಿರ್ಧಾರಕ್ಕೆ ಬರುತ್ತಾನೆ.ಅವನ ಈ ತಳಮಳವನ್ನು ಈ ಕೆಳಗಿನ ಪದ್ಯದಲ್ಲಿ ನು ಸೂಕ್ಷ್ಮವಾಗಿ ಹಿಡಿದಿಟ್ಟಿರುವುದು ಕಂಡುಬರುತ್ತದೆ.

**ಹರಿಣೀಲೋಚನೆ ದೀವಮಾಂ ಹರಿಣನೇಂ ಪೆರ್ಗಾಡಿದಿ ಬೀಡು ಬಿ**
**ಣ್ಬರಿಗಳ್ನೇಣ್ಬರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮ**
**ದ್ವಿರಹಾವಸ್ಥಿತಿ ಗೋರಿಗೋರಗೆಯೆನಿಪ್ಪಂತಾದುದೆಂತಾಗಿಯುಂ**
**ನೆರೆಯಲ್ತೀರದು ಗೋರಿ ಸಾಯದೆನವೇಡೀ ನೋವೇ ಸಾವಲ್ಲವೆ'**

**(ಜನ್ನ ಸಂಪುಟ. ೧೧-೪೨)**

ಕೊನೆಗೆ ಈ ಸಾವು ನಿಜ ಕೂಡ ಆಗುತ್ತದೆ. ಅದಲ್ಲದೆ ಚಂಡಶಾಸನನು ಸುನಂದೆಯನ್ನು ನೋಡಿ ಕಾಮಜ್ವರದಿಂದ ಬಳಲುವ ಆತನ ಮನಸ್ಸಿನ ಸ್ಥಿತಿಯ ಒಂದು ಪದ್ಯವನ್ನು ಗಮನಿಸಬಹುದು.

**ಕಳೆಯನ ಪಂಜ್ತೆಭೋಜನದೊಳೊರ್ಮೆವಿಳಾಸದೆ ಬಡ್ಡಿಸುತ್ತುಮಿ**
**ರ್ಪೆಳೆಯಳ ತೋಳಮೂಲದ ಪೊಗರ್ಮಣಿ ಬಂಧದ ಚೆಲ್ವುಕೋಮಲಾಂ**
**ಗುಳಿಗಳ ಕೊಂಕು ಕಣ್ಗೆ ಕುಡೆ ಕೌತುಕಮಂ ಭ್ರಮೆಗೊಂಡು ಕಾಮುಕಂ**
**ವಳಿಗೆಯನೆತ್ತಿ ಬೊಟ್ಟಿಡಲೊಡರ್ಚಿ ಬಟಿಕ್ಕೆ ಪೊಗಟಿಗಿಕಿದಂ'**

**(ಜನ್ನ ಸಂಪುಟ. ೧೧-೨೮)**

ಇದನ್ನು ಗಮನಿಸಿದ್ದಾಗ ಚಂಡಶಾಸನನು ಸುನಂದೆಯನ್ನು ನೋಡಿದ ನಂತರ ಆತನಲ್ಲಿ ಆದ ಮನಸ್ಸಿನ ಬದಲಾವಣೆಯ ಸ್ಥಿತಿಯನ್ನು ಬಿಂಬಿಸುತ್ತದೆ. ಚಂಡಶಾಸನ ಯಾವದೇ ಪ್ರಯತ್ನದಿಂದಲೂ ಸಿಗದೇ ಕೊನೆಗೆ ಚಂಡಶಾಸನ ವಸುಸೇಣನ ಮಾಯದ ಶಿರವನ್ನು ನೋಡಿದ ತಕ್ಷಣ ಗಾಬರಿಗೊಂಡು ಮರಣಹೊಂದುವಳು.

ಇದಕ್ಕೆ ವಿಚಲಿತಗೊಂಡ ಚಂಡಶಾಸನನು ಅಗ್ನಿ ಪ್ರವೇಶವನ್ನು ಮಾಡಿ ಮರಣಹೊಂದುವ ಪರಿಸ್ಥಿತಿಗೆ ಬಂದು ನಿಲ್ಲುತ್ತಾನೆ.

**ಎನಗಿನ್ನೋಲಗಶಾಲೆಯೇಕಿದು ವಿಮಾನಂ ನಂದೆಯಂ ಲೋಲಲೋ**
**ಚನೆಯಂ ಕುಳ್ಳಿರಿಸಿಲ್ಲಿ ಕೂಡೆ ಬಜಿಸಲ್ವಂತಃ ಪುರಸ್ತ್ರೀಯರಾ**
**ಳ್ತನಮಂ ತೋಱುರ ಲೆಂಕಕೊಳ್ಳುಡಿಯವೇಳ್ವಿದ್ಯಾಜನಂಬರ್ಕೆ ಚಂ**
**ದನಗಂಧಾವಿಧದಿಂದಮೆನ್ನ ವಿರಹ ಜ್ವಾಲಾಗ್ನಿಯಂ ನೆಂದಿಪೆಂ (೧೦)**

**(ಎರಡು ಜೈನ ಪುರಾಣಗಳು. ಪು. ೨೯೩)**

ಇಲ್ಲಿ ಚಂಡಶಾಸನ ಕೊನೆಗೆ ಅಗ್ನಿಗೆ ಆಹುತಿಯಾಗಿದ್ದನ್ನು ಒಂದು ಬಗೆಯಾದ ಅನುಕಂಪ ಹುಟ್ಟಿಸುವಂತೆ ಮಾಡುತ್ತದೆ. ಅಲ್ಲದೇ ಕನ್ನಡ ಸಾಹಿತ್ಯದಲ್ಲಿ ಪುರಷ ಚಿತೆಗೆ ಹಾರಿ ಮರಣವನ್ನು ಹೊಂದಿದ್ದು ಹೊಸದಾಗಿ ಕಂಡಿರುವುದಲ್ಲದೆ, ಇದೊಂದು ರೀತಿ ವಿಚಿತ್ರವಾದಂತ ಘಟನೆಯೆಂಬತೆ ಕಂಡುಬರುತ್ತದೆ. ಹೀಗೆ ಎರಡು ಕೃತಿಯಲ್ಲಿ ಬಂದ ಕೆಲವು ಅಂಶಗಳನ್ನು ಕಾಮ ಮತ್ತು ಸಾವು ಎಂದು ಚರ್ಚಿಸಬಹುದು. ಇದಲ್ಲದೆ ಇನ್ನಿತರ ಸಾವಿನ ಕುರಿತ ಚಿತ್ರಣಗಳು ಕಂಡುಬರುತ್ತವೆ. ಇಲ್ಲಿ ಸಿಂಹಚೂಡನ ಸಾವು ಗಮನಿಸಿದರೆ ಈತನ ಸಾವನ್ನು ನಾವು ಎರಡು ರೀತಿಯಲ್ಲಿ ಗುರುತಿಸಬಹುದು. ಒಂದು ಜೋಳವಾಳಿ. ಏಕೆಂದರೆ ವಸುಸೇಣನ ಹೆಂಡತಿ ಸುನಂದೆಯನ್ನು ಅಪಹರಿಸಿಕೊಂಡು ಹೋಗುವಾಗ ಹೋರಾಟ ಮಾಡಿ ಮರಣ ಹೊಂದುತ್ತಾನೆ. ಇದನ್ನು ಪೆಣ್ಬುಯ್ಯಲ್ ಎಂದು ಕೂಡ ಹೇಳಬಹುದು. ಮಹಿಳೆಯನ್ನು ಅಪಹರಿಸಿಕೊಂಡು ಹೋಗುವಾಗ ಎದುರುಗೊಂಡು ಹೋರಾಡಿ ಮರಣ ಹೊಂದುವುದನ್ನು ಬಹುತೇಕ ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಬಂದಿರುವುದರಿಂದ ಇದನ್ನು ಪೆಣ್ಬುಯ್ಯಲ್ ಎಂದು ಕೂಡ ಹೇಳಬಹುದು. ಇದಕ್ಕೆ ಪೂರಕವಾಗುವಂತೆ ಸುನಂದೆಗೆ ಸಿಂಹಚೂಡನು ಹೇಳುವ ಮಾತಿನ ಪದ್ಯವನ್ನು ನೋಡಬಹುದು.

**ಅಂಜದೆ ನಿಂದವಧರಿಸೆಲೆ**
**ಕಂಜದಳಾಯತ ವಿಲೋಲಲೋಚನೆ ಪಗೆಯಂ**
**ಮುಂ ಜವನೆಡೆಗೊಪ್ಪಿಸಿ ಬಟಿ**
**ಯಂ ಜನಪತಿಯೆಡೆಗೆ ನಿನ್ನನೊಯ್ದೊಪ್ಪಿಸುವೆಂ**

**(ಅನಂತನಾಥಪುರಾಣ. ೧೧-೫೭)**

ಎಂದು ಹೇಳಿ ಸುನಂದೆಗೆ ಭರವಸೆಯನ್ನು ನೀಡಿರುವುದು ನೋಡಿದರೆ ಸಿಂಹಚೂಡನ ಕುರಿತು ಒಳ್ಳೆಯ ಅಭಿಪ್ರಾಯವನ್ನು ಹುಟ್ಟುತ್ತದೆ. ಆದರೆ ಸಿಂಹಚೂಡ ಚಂಡಶಾಸನನಿಂದ ಶಿರವನ್ನು ಕಡಿಸಿಕೊಂಡು ಮರಣಹೊಂದುತ್ತಾನೆ. ತಲೆಯನ್ನು

ಕಳೆದುಕೊಂಡ ಸಿಂಹಚೂಡನ ಆ ತಲೆಯ ವೀರಚಿತ್ರವನ್ನು ಹೇಳುವ ಒಂದು ಪದ್ಯವನ್ನು ಗಮನಿಸಬಹುದು.

**ಮುರಿದಣ್ಪೆಕ್ಕಿದ ಗಡ್ಡಮೀಸೆ ಮುಡಿಕಟ್ಟಂ ತಳ್ತಕೆಂಬಟ್ಟೆ ಕ**
**ತ್ತುರಿಯಂ ತೂಱುವ ಚುಂಚುಮೀಸೆ ಸುಲಿಪಲ್ದ ಪ್ಪಾಧರಂ ಭೂಕುಟಿ**
**ಸ್ಫುರಿತಂ ಕೈಮಿಗೆ ಭೂತಳಕ್ಕೆ ಪರಿವೇಷಂಗೊಂಡು ಬೀಟಳ್ತಿಂದ ಭಾ**
**ಸ್ಕರನಂತಿರ್ದುದು ಸಿಂಹಚೂಡನ ಶಿರಂ ಪೊಂಬಟ್ಟಿನಾಳ್ವಟ್ಟೆಯೊಳ್**

**(ಅನಂತನಾಥಪುರಾಣ. ೧೧-೭೫)**

ಈ ಪದ್ಯದಲ್ಲಿ ಸಿಂಹಚೂಡನ ವೀರತನ, ಪರಾಕ್ರಮ, ಶೌರ್ಯ ಜೊತೆಗೆ ಆತನ ಸಾವನ್ನು ಹೇಳುತ್ತದೆ. ಹೀಗೆ ಈತನನ್ನು ವಿವರಿಸಲಾಗಿದೆ. ಸಿಂಹಚೂಡನ ಸಾವು ಜೋಳವಾಳಿಯ ಪ್ರಕಾರವೆಂದು ಹೇಳಬಹುದು. ಇದಲ್ಲದೆ ಚಂಡಶಾಸನನು ಸಾವನ್ನು ಪಡೆದುಕೊಳ್ಳುವಾಗ, ಲೆಂಕರು ಮತ್ತು ಅಂತಪುರದ ಸ್ತ್ರೀಯರು ಕೂಡ ಅವನ ಜೊತೆಗೆ ಪ್ರಾಣವನ್ನು ಬಿಡುತ್ತಾರೆ.

ಸ್ತ್ರೀಯರು ಕೂಡ ಸಹಗಮನ ಹೊಂದುವುದರಿಂದ ಸಹಗಮನದ ಸಾವಿನ ಪ್ರಕಾರವು ಕೂಡ ಗುರುತಿಸಬಹುದು. ಹಾಗೆಯೇ ಲೆಂಕರು ಕೂಡ ಅಗ್ನಿಗೆ ಹಾರಿ ಪ್ರಾಣ ಕಳೆದುಕೊಳ್ಳುತ್ತಾರೆ. ಇಲ್ಲಿ ಲೆಂಕರು ಅಂದರೆ ಲೆಂಕವಾಳಿ ಎಂದು ಕರೆಯುವುದು ಕೂಡ ಇದೆ. 'ಲೆಂಕ'ವೆಂದರೆ ಶೂರ, ವೀರಸೈನಿಕ ಎಂದು ಕೂಡ ಅರ್ಥವಿದೆ. ಇವರು ರಾಜನ ಸಲುವಾಗಿ ಹೋರಾಡುವುದು ಇವರ ಕಾರ್ಯವಾಗಿತ್ತು ನಂತರದಲ್ಲಿ ಹೊಯ್ಸಳರ ಕಾಲದಲ್ಲಿ ಈ ಲೆಂಕರು ಅರಸನಿಗಾಗಿ ಹೋರಾಡುವುದರ ಜೊತೆಗೆ ಅರಸ ಸತ್ತರೆ ತಾವೂ ಕೂಡ ಪ್ರಾಣಾರ್ಪಣೆ ಮಾಡಿಕೊಳ್ಳುವ ವೇಳವಾಳಿ ಸಂಪ್ರದಾಯವನ್ನು ಆಚರಿಸತೊಡಗಿದ್ದರು. ಇಂತಹ ಎರಡು ಆಚರಣೆಗಳನ್ನು ಮಾಡುವವರನ್ನು ಲೆಂಕರೆಂದೇ ಕರೆಯಲಾಗುತಿತ್ತು. ಅಂತಹ ಲೆಂಕರ ವಿವರ ಕೂಡ ಬಂದಿರುವುದು ಕಂಡುಬರುತ್ತದೆ. ಇಲ್ಲಿ ಚಂಡಶಾಸನನ ಸಾವು ವೈಯಕ್ತಿಕ ಸಾವು ಆಗಿರದೇ ಸಾಮೂಹಿಕ ಸಾವಿನಂತೆ ಕಂಡುಬರುತ್ತದೆ. ಚಂಡಶಾಸನನ ಜೊತೆಗೆ ಅನೇಕ ಲೆಂಕರು ಅಂತಃಪುರದ ಸ್ತ್ರೀಯರು ಕೂಡ ಅಗ್ನಿಗೆ ಆಹುತಿಯಾಗಿರುವುದು ಕಂಡುಬರುತ್ತದೆ. ಸಹಜವಾಗಿ ಇಂತಹ ಹಲವು ಸಾವಿನ ಪ್ರಕಾರಗಳು ಜೈನ ಧಾರ್ಮಿಕ ಕಾವ್ಯಗಳಲ್ಲಿ ಕಂಡುಬರುವುದಿಲ್ಲ ಆದರೆ ಅನಂತನಾಥಪುರಾಣದಲ್ಲಿ ಬಂದಿವೆ. ಹೀಗೆ ಜನ್ನನ ಕಾವ್ಯಗಳಲ್ಲಿ ಬಂದ ಹಲವು ಸಾವಿನ ಚಿತ್ರಣವನ್ನು ಗುರುತಿಸಲಾಗಿದೆ. ಇದೆಲ್ಲವೂ ಗಮನಿಸಿದಾಗ ಲೆಂಕವಾಳಿ, ಜೋಳವಾಳಿ, ಸಹಗಮನ, ಈ ಮೂರು ರೀತಿಯ ಸಾವಿನ ಚಿತ್ರಣವನ್ನು ಕಂಡುಬರುತ್ತವೆ.

ಕನ್ನಡ ಸಾಹಿತ್ಯದಲ್ಲಿ ಅದರಲ್ಲಿಯೂ ಪ್ರಾಚೀನ ಕನ್ನಡ ಸಾಹಿತ್ಯ ಕಾವ್ಯಗಳಲ್ಲಿ ಸ್ವರ್ಗ ಮತ್ತು ನರಕದ ಕುರಿತ ವಿವರ ದಟ್ಟವಾಗಿ ಹರಿದು ಬಂದಿದೆ. ಭಾರತೀಯ ನೆಲೆಯಲ್ಲಿ ಗುರುತಿಸುವುದಾದರೆ ಇಲ್ಲಿ ಜೀವಿಸುತ್ತಿರುವ ಬಹುತೇಕ ಧರ್ಮಗಳಲ್ಲಿ ಇದರ ಕುರಿತು ಆಳವಾದ ನಂಬಿಕೆಯನ್ನು ಹೊಂದಿರುವುದು ನಮಗೆ ಸಿಗುತ್ತದೆ. ಹಾಗೆಯೇ ಇದಕ್ಕೆ ತದ್ವಿರುದ್ಧವಾದಂತ ನಿಲುವುಗಳು ಇಲ್ಲವೆಂತಲ್ಲ, ಇದನ್ನು ಒಂದು ಬಗೆಯಾದ ಮೌಢ್ಯವೆಂದು ಹೇಳುವ ವಿಚಾರಗಳು ಕೂಡ ಒಂದೇ ಧರ್ಮದಲ್ಲಿರುವ ಭಿನ್ನ ಆಲೋಚನೆಗಳಾಗಿವೆ. ಅಷ್ಟೇ ಅಲ್ಲದೆ ಇನ್ನೂ ಮುಂದುವರೆದು ಇದನ್ನು ನಂಬುವವರಲ್ಲಿಯೇ ಮೇಲ್ವರ್ಗದವರು ನಂಬುವಷ್ಟು ಕೆಳವರ್ಗದವರು ಇದನ್ನ ಅಷ್ಟರ ಮಟ್ಟದಲ್ಲಿ ನಂಬಲಾರದಂತಹದ್ದು ಎಂಬ ಚರ್ಚೆಯು ಕೂಡ ಇದೆ. ಹೀಗೆ ಇದರ ಕುರಿತ ಹಲವಾರು ಚರ್ಚೆಗಳು ಬಂದಿವೆ. ನಾವು ಇಲ್ಲಿ ಪ್ರಾಚೀನ ಕನ್ನಡದ ಕಾವ್ಯಗಳು ಗಮನಿಸುವುದರಿಂದ ಅದರಲ್ಲಿ ಬಂದ ಸ್ವರ್ಗ ನರಕದ ಕುರಿತ ಅಂಶವನ್ನು ಗಮನಿಸಬಹುದು. ಇಲ್ಲಿ ಆಯ್ಕೆ ಮಾಡಿಕೊಂಡಿರುವ ಎರಡು ಜನ್ನನ ಪಠ್ಯಗಳು ಅದರಲ್ಲಿಯೂ ಅವೂ ಜೈನ ಪಠ್ಯಗಳೇ ಆಗಿವೆ. ನಮ್ಮ ಪ್ರಾಚೀನ ಕನ್ನಡ ಸಾಹಿತ್ಯವೆಂದರೆ ಹೆಚ್ಚು ಜೈನ ಸಾಹಿತ್ಯವೆಂದೇ ಹೇಳಬಹುದು. ಈ ಜೈನ ಪಠ್ಯಗಳಾದ ವಡ್ಡರಾಧನೆ ಮತ್ತು ಧರ್ಮಾಮೃತ ಕೃತಿಯಲ್ಲಿ ಸ್ವರ್ಗ ಮತ್ತು ನರಕದ ಕುರಿತ ವಿವರ ಹೆಚ್ಚು ಬಂದಿರುವುದು ಕಾಣುತ್ತೇವೆ. ಇದು ಜೈನಧರ್ಮದ ಒಂದು ನಂಬಿಕೆಯು ಆಗಿರುವುದರಿಂದ ಸಹಜವಾಗಿ ಅವರ ಕೃತಿಗಳಲ್ಲಿ ಧರ್ಮವನ್ನು ಹೇಳುವ ಹೊತ್ತಿನಲ್ಲಿ ತಂದಿರುವುದು ಕಾಣುತ್ತೇವೆ. ಪ್ರಮುಖವಾಗಿ ಮೊದಲು ಯಶೋಧರ ಚರಿತೆಯಲ್ಲಿ ಬಂದ ಇದರ ಪ್ರಸ್ತಾಪವನ್ನು ಗಮನಿಸಬಹುದು.

ಮಾರಿದತ್ತನು ಎಷ್ಟು ಕ್ರೂರವಾಗಿ ಪ್ರಾಣಿಗಳ ಬಲಿಯನ್ನು ನೀಡುತ್ತಿರುವ ವ್ಯಕ್ತಿ ಒಂದು ದಿನ ಅಭಯರುಚಿ ಮತ್ತು ಅಭಯಮತಿಯನ್ನು ಬಲಿಕೊಡಲು ಕರೆದುಕೊಂಡು ಹೋದಾಗ ಅವರ ಮಾತನ್ನು ಆಲಿಸಿದ ವ್ಯಕ್ತಿಯು ತಾನು ಮಾಡುತ್ತಿರುವ ಹಿಂಸೆಯಿಂದ ತನ್ನ ಮೇಲೆ ಜಿಗುಪ್ಸೆಗೊಂಡು ತಪಸ್ಸನ್ನು ಮಾಡಿ ಸಮಾಧಿ ಮರಣವನ್ನು ಪಡೆದು ಮೂರನೆಯ ಸ್ವರ್ಗದಲ್ಲಿ ದೇವನಾಗಿದ್ದು ಕಾವ್ಯದಲ್ಲಿ ಕಂಡುಬರುತ್ತದೆ. ಇದು ಮೂರನೆಯ ಸ್ವರ್ಗ ಎಂದು ಹೇಳಲಾಗಿದೆ. ಇದೇ ರೀತಿಯಾಗಿ ಸಂಕಲ್ಪ ಹಿಂಸೆಯಿಂದ ಯಶೋಧರ ಮತ್ತು ಚಂದ್ರಮತಿ ಹಲವು ಜನ್ಮಾಂತರದ ನಂತರ ಅಭಯರುಚಿ ಮತ್ತು ಅಭಯಮತಿಯಾಗಿ ಜನಿಸಿ ನಂತರ ಗುರುವಿನ ಮಾತಿನಂತೆ ತಪಸ್ಸು ಮಾಡಿ ಮರಣದ ನಂತರ ಈಶಾನ್ಯ ಕಲ್ಪದಲ್ಲಿ ಜನಿಸುತ್ತಾರೆ. ಈಶಾನ್ಯ ಕಲ್ಪವು ಜೈನರ ಪ್ರಕಾರ ಹದಿನಾಲ್ಕು ಸ್ವರ್ಗಗಳಲ್ಲಿ ಎರಡನೆಯ ಸ್ವರ್ಗ ಆಗಿದೆ.ಇಲ್ಲಿ ಮಾರಿದತ್ತ ಜನ್ಮಾಂತರಗಳಿಲ್ಲದೆ ಮೂರನೆಯ ಸ್ವರ್ಗಕ್ಕೆ ಹೋದರೆ ಇವರು ಹಲವು ಜನ್ಮಾಂತರಗಳ ನಂತರ ಎರಡನೇ ಸ್ವರ್ಗಕ್ಕೆ ಹೋಗುವುದನ್ನು ಗಮನಿಸಿದರೆ, ಸಂಕಲ್ಪ ಹಿಂಸೆಯು ಮಾರಿದತ್ತನ ಹಿಂಸೆಗಿಂತಲೂ ದೊಡ್ಡದು

ಎನ್ನುವುದನ್ನು ಹೇಳುತ್ತದೆ. ಇದೇ ರೀತಿಯಾಗಿ ಅನಂತನಾಥಪುರಾಣದಲ್ಲಿ ವಸುಸೇಣನು ತನ್ನ ಹೆಂಡತಿಯಾದ ಸುನಂದೆಯ ಸಾವನ್ನು ಅರಗಿಸಿಕೊಳ್ಳದೆ ವಿರಕ್ತನಾಗಿ ತಪವನ್ನೆಸಗಿ ಮರುಜನ್ಮದಲ್ಲಿ ಸಹಸ್ರಾರು ಕಲ್ಪದಲ್ಲಿ ದೇವನಾಗಿ ಜನಿಸಿರುವುದು ಕಂಡುಬರುತ್ತದೆ. ಅಲ್ಲದೆ, ಪದ್ಮರಥನು ಅಚ್ಯುತ ಕಲ್ಪದಲ್ಲಿ ಇಂದ್ರನಾದ ವಿವರ ಬರುತ್ತದೆ. ಇದು ಸ್ವರ್ಗದ ಕುರಿತ ವಿಚಾರವಾದರೆ ಯಶೋಧರ ಚರಿತೆಯಲ್ಲಿ ಅಮೃತಮತಿಯು ತನ್ನ ಕರ್ಮದ ಫಲವಾಗಿ ಧೂಮಪ್ರಭೆಯೆಂಬ ಪಂಚಮ ನರಕಕ್ಕೆ ಹೋಗುವುದನ್ನು ಕಂಡುಬರುತ್ತದೆ. ಹೀಗೆ ಸಾವಿನ ನಂತರದ ಸ್ವರ್ಗ ನರಕ ಕುರಿತ ವಿವರ ಬಹಳಷ್ಟು ಬರುತ್ತದೆ, ಇದೊಂದು ಬಗೆಯ ಜೈನ ಧರ್ಮದಲ್ಲಿರುವ ಸ್ವರ್ಗ ನರಕದ ಕುರಿತು ನಿಲುವನ್ನು ಸೂಚಿಸುತ್ತದೆ. ಇದೆಲ್ಲವೂ ಧರ್ಮದಲ್ಲಿರುವ ಒಂದು ನಂಬಿಕೆಯನ್ನು ಅಥವಾ ಜೈನ ಧರ್ಮದ ಕುರಿತು ತಾತ್ವಿಕತೆಯನ್ನು ಹೇಳುವುದಾಗಿದೆ. ಅಲ್ಲದೆ ವ್ಯಕ್ತಿಗಳಲ್ಲಿ ಯಾವುದು ಉಚಿತ ಯಾವುದು ಅನುಚಿತವಾದದ್ದು, ಈ ರೀತಿಯಾದ ನಡಿಗೆಯಿಂದ ಎದುರಿಸುವ ಪರಿಣಾಮ ಯಾವ ಬಗೆಯಾಗಿರುತ್ತದೆ, ಎಂಬುದನ್ನು ಹೇಳಲು ಇಂತಹ ಸ್ವರ್ಗ ಮತ್ತು ನರಕದ ಅಂಶಗಳನ್ನು ಕಾವ್ಯಗಳಲ್ಲಿ ತಂದಿರುವ ಸಾದ್ಯತೆಗಳು ಇರುತ್ತವೆ. ಇಂತಹ ಹಲವು ಅಂಶಗಳನ್ನು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ತಂದಿರುವುದು ಕಂಡುಬರುತ್ತದೆ. ಹೀಗೆ ಜನ್ನನ ಕೃತಿಗಳಾದ ಯಶೋಧರಚರಿತೆ ಮತ್ತು ಅನಂತನಾಥ ಪುರಾಣದಲ್ಲಿ ಬಂದಿರುವ ಸಾವು ಮತ್ತು ಸ್ವರ್ಗ ನರಕದ ಚಿತ್ರಣವನ್ನು ಈ ಲೇಖನದಲ್ಲಿ ಸ್ಥೂಲವಾಗಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

**ಆಕರ ಗ್ರಂಥಗಳು**

೧. ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ. ೨೦೧೩. ಯಶೋಧರ ಚರಿತೆ. ಗದ್ಯಾನುವಾದ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. ಶೆಟ್ಟರ್ ಷ. ೨೦೧೫. ಸಾವನ್ನು ಅರಸಿ. ಅಭಿನವ ಪ್ರಕಾಶನ, ಬೆಂಗಳೂರು.

೩. ಶೆಟ್ಟರ್ ಷ. ೨೦೧೫. ಸಾವನ್ನು ಸ್ವಾಗತಿಸಿ. ಅಭಿನವ ಪ್ರಕಾಶನ, ಬೆಂಗಳೂರು.

೪. ಭಟ್ಟ ಜಿ.ಎಸ್. ೧೯೯೫. ಒಂದು ಅವಲೋಕನ. ಸಂಪಾದನೆ. ಚೇತನ ಬುಕ್ ಹೌಸ್, ಬೆಂಗಳೂರು.

೫. ಸಿ.ಪಿ.ಕೆ ೧೯೯೬. ಎರಡು ಜೈನ ಪುರಾಣಗಳು. ಶ್ರೀ ಚಕ್ರ ಎಂಟರ್ ಪ್ರೈಸಸ್.

೬. ಪುಟ್ಟಯ್ಯ ಬಿ.ಎಂ. ೨೦೦೧. ಸಾವು ಒಂದು ಚಿಂತನೆ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೭. ಪರಮಶಿವಮೂರ್ತಿ ಡಿ.ವಿ. ೨೦೧೧.ತುಬುಗೊಳ್ ಸಂಕಥನ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಪರಮಶಿವಮೂರ್ತಿ ಡಿ.ವಿ. ೨೦೧೦.ಪೆಣ್ಬುಯ್ಯಲ್. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಪುಟ್ಟಯ್ಯ ಬಿ.ಎಂ. (ಸಂ). ೨೦೧೫. ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ನಾಗಯ್ಯ ಜೆ.ಎಂ. ೨೦೧೪. ಪ್ರಾಚೀನ ಕರ್ನಾಟಕದ ಜೀವನ ಮೌಲ್ಯಗಳು. ವಿಜಯ ವಿಕ್ರಮ ಪ್ರಕಾಶನ.

೧೧. ಕೃಷ್ಣಕುಮಾರ ಸಿ.ಪಿ. (ಸಂ). ೨೦೧೭. ಸಂಪುಟ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ಚೋಳರ ಮಸ್ಕಿಯ ಶಾಸನ



ಡಾ.ಚನ್ನಬಸಪ್ಪ ಮಲ್ಕಂದಿನ್ನಿ

**ಪ್ರಸ್ತಾವನೆ :**

ಚೋಳರು ಭಾರತವನ್ನಾಳಿದ ಹಲವು ರಾಜಮನೆತನಗಳಲ್ಲಿ ಅತ್ಯಂತ ಪ್ರಾಚೀನ ಹಾಗೂ ಪ್ರಮುಖ ರಾಜವಂಶವಾಗಿದೆ. ರಾಷ್ಟ್ರಕೂಟರ ಕೊನೆಯ ಅರಸರೊಂದಿಗೆ ಸ್ವಲ್ಪ ಮಟ್ಟಿನ ಸಂಘರ್ಷವನ್ನು ಬೆಳೆಸಿಕೊಂಡ ಚೋಳರು ಕಲ್ಯಾಣ ಚಾಳುಕ್ಯರ ರಾಜರೊಂದಿಗೆ ನಿರಂತರವಾಗಿ ಹೋರಾಡಿ ಯಶಸ್ಸು ಸಾಧಿಸಿ ಉತ್ತರದವರೆಗೂ ತಮ್ಮ ಅಧಿಪತ್ಯ ಸ್ಥಾಪಿಸಿಕೊಂಡಿದ್ದರು.

**ಆಧಾರಗಳು :**

ಮೌರ್ಯ ಸಾಮ್ರಾಟ ಅಶೋಕನ ಶಾಸನಗಳು, ಗ್ರೀಸ್ ದೇಶದ ಅನಾಮದೇಯನ ಗ್ರಂಥ ಟಾಲೆಮಿಯ ಭೂಗೋಳ ವಿಜ್ಞಾನದ ಕೈಪಿಡಿ, ಮೆಗಸ್ತನೀಸನ ಇಂಡಿಕಾ, ಬುದಮಿತ್ರನ ವೀರಶೂರಸೋಳಿಯಂ, ಜಯಗೊಂಡರನ ಕಳಿಂಗ ತುಪ್ಪರಣಿ, ಸಂಘಂ ಸಾಹಿತ್ಯ, ಸೆಕ್ಕಿಲಾರನಪೆರಿಯಾ ಪುರಾಣ, ಉತ್ತರ ಮೇರೂರು, ಕರಂಡೈ [ಕರಂದೈ], ತಿರುವಾಂಗಲಾಡು ಶಾಸನಗಳು, ನಾಣ್ಯಗಳು, ಸ್ಮಾರಕಗಳು ಚೋಳರ ಚರಿತ್ರೆಗೆ ಪ್ರಮುಖ ಮೂಲಾಧಾರಗಳಾಗಿವೆ.

**ಪೂರ್ವೇತಿಹಾಸ :**

ಚೋಳರ ಇತಿಹಾಸವು ಸಂಘಯುಗದಿಂದ ಆರಂಭವಾಗುತ್ತದೆ. ಇಳೈಯಾನ್ ಚೋಳನು ಈ ಸಂತತಿಯ ಪ್ರಥಮ ಅರಸನಾಗಿದ್ದಾನೆ. ಈತನು ಕ್ರಿ.ಶ. ೧ನೇ

ಶತಮಾನದ ಮಧ್ಯ ಭಾಗದಲ್ಲಿ ಉರೈಯೂರನ್ನು [ಉರಗಪುರ] ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದನು. ಇಳೈಯಾನ್ ಚೋಳನ ನಂತರ ಕ್ರಿ.ಶ. ೨ನೇ ಶತಮಾನದಲ್ಲಿ ಆಳಿದ ಕರಿಕಾಲ ಚೋಳನೇ ಚೋಳ ವಂಶದ ಮೊದಲ ಐತಿಹಾಸಿಕ ದೊರೆಯಾಗಿದ್ದಾನೆ. ಈತನು ವೀರಯೋಧನಾಗಿದ್ದು, ಚೇರ [ಕೇರಳರು] ಮತ್ತು ಪಾಂಡ್ಯರನ್ನು ಸೋಲಿಸಿದನು. ಚೇರ ಅರಸನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟಿದ್ದನು. ಹಾಗೆಯೇ ಈತನು ಸಿಂಹಳ [ಸಿಲೋನ್, ಶ್ರೀಲಂಕಾ]ದ ಮೇಲೆ ನೌಕಾ ದಂಡಯಾತ್ರೆ ಕೈಗೊಂಡು ಅಲ್ಲಿ ಸೆರೆಸಿಕ್ಕ ೧೨೦೦ ಜನರಿಂದ ಕಾವೇರಿ ನದಿಗೆ ೧೦೮೦ ಅಡಿ ಉದ್ದದ ಕಲ್ಲಣ್ಣೆ ಆಣೆಕಟ್ಟನ್ನು ನಿರ್ಮಿಸಿದನು. ತನ್ನ ರಾಜಧಾನಿಯನ್ನು ಉರೈಯೂರಿನಿಂದ ಪೂಂಪುಹಾರ್‌ಗೆ [ಕಾವೇರಿ ಪಟ್ಟಣಂ] ವರ್ಗಾಯಿಸಿದನು. ಈತನ ನಂತರ ಸೆಂಗಣ್ಣನು ಆಳ್ವಿಕೆ ಮಾಡಿದನು. ಆನಂತರ ಹಲವು ಶತಮಾನಗಳ ಕಾಲ ಚೋಳ ಅರಸರು ಅಪ್ರಮುಖರಾಗಿಯೇ ಉಳಿದುಕೊಂಡರು.

**ರಾಜಕೀಯ ಚರಿತ್ರೆ:**

ಸೆಂಗಣ್ಣನ ನಂತರ ಚೋಳರು ಎಲ್ಲಿಂದ ಆಡಳಿತ ಮಾಡುತ್ತಿದ್ದರೆಂಬುದಕ್ಕೆ ಆಧಾರಗಳು ದೊರಕುವುದಿಲ್ಲ. ಚೋಳರು ಕೆಲವು ಕಾಲ ಪಲ್ಲವರ ಸಾಮಂತರರಾಗಿ ಆಡಳಿತ ಮಾಡಿ ಗಂಗರ ಸಹಾಯದಿಂದ ಪಲ್ಲವರ ಕೊನೆಯ ಅಸಮರ್ಥ ಅರಸ ಅಪರಾಜಿತವರ್ಮನನ್ನು ಚೋಳವಂಶದ ವಿಜಯಾಲಯನು ಕೊಲೆಗೈದು, ಹಿಂದಿನ ಚೋಳ ರಾಜ ಮನೆತನದ ಅಧಿಕಾರವನ್ನು ಪುನರ್ ಸ್ಥಾಪಿಸಿದವನಾಗಿದ್ದಾನೆ. ಆದುದರಿಂದ ಚೋಳ ವಂಶಾವಳಿಯನ್ನು ಸಂಕ್ಷಿಪ್ತವಾಗಿ ಈ ಮುಂದಿನಂತೆ ನೀಡಲಾಗಿದೆ. ಏಕೆಂದರೆ ಈ ಲೇಖನದಲ್ಲಿ ಚೋಳ ಅರಸ ೧ನೇ ರಾಜೇಂದ್ರ ಚೋಳನ ಶಾಸನವು ರಾಯಚೂರು ಜಿಲ್ಲೆಯ ಮಸ್ಕಿ ಪಟ್ಟಣದಲ್ಲಿ ಇತ್ತೀಚೆಗೆ ದೊರಕಿದ್ದು ಅದರ ಬಗ್ಗೆ ಹೆಚ್ಚಿನ ಗಮನಹರಿಸಲಾಗುವುದು. ಇವರ ವಂಶಾವಳಿಯಲ್ಲಿ ಈ ಮುಂದಿನವರು ಆಳ್ವಿಕೆ ನಡೆಸಿದರು. ವಿಜಯಾಲಯ [ಕ್ರಿ.ಶ. ೮೫೦-೮೭೧], ಒಂದನೇ ಆದಿತ್ಯ [ಕ್ರಿ.ಶ. ೮೭೧-೯೦೭], ಒಂದನೇ ಪರಾಂತಕ [ಕ್ರಿ.ಶ. ೯೦೭-೯೫೫], ಒಂದನೇ ರಾಜ ರಾಜಚೋಳ [ಕ್ರಿ.ಶ. ೯೫೫-೧೦೧೫], ಒಂದನೇ ರಾಜೇಂದ್ರ ಚೋಳ [ಕ್ರಿ.ಶ. ೧೦೧೫-೧೦೪೪], ಒಂದನೇ ರಾಜಾಧಿರಾಜ [ಕ್ರಿ.ಶ. ೧೦೪೪-೧೦೫೪], ಎರಡನೆಯ ರಾಜೇಂದ್ರ [ಕ್ರಿ.ಶ. ೧೦೫೪-೧೦೬೪], ವೀರ ರಾಜೇಂದ್ರ [ಕ್ರಿ.ಶ. ೧೦೬೪-೧೦೬೯, ಅಧಿರಾಜೇಂದ್ರ [ಕ್ರಿ.ಶ. ೧೦೬೯-೧೦೭೦], ಒಂದನೇ ಕುಲೋತ್ತುಂಗ [ಕ್ರಿ.ಶ. ೧೦೭೦-೧೧೨೦], ವಿಕ್ರಮ ಚೋಳ [ಕ್ರಿ.ಶ. ೧೧೨೦-೧೧೩೫], ಎರಡನೆಯ ಕುಲೋತ್ತುಂಗ ಚೋಳ [ಕ್ರಿ.ಶ. ೧೧೩೫-೧೧೫೦], ಎರಡನೆಯ ರಾಜರಾಜ [ಕ್ರಿ.ಶ. ೧೧೫೦-೧೧೭೩], ಎರಡನೇಯ ರಾಜಾಧಿರಾಜ [ಕ್ರಿ.ಶ. ೧೧೭೩-೧೧೭೮], ಮೂರನೆಯ ಕುಲೋತ್ತುಂಗ [ಕ್ರಿ.ಶ.

೧೧೭೮-೧೨೧೬], ಮೂರನೆಯ ರಾಜರಾಜ [ಕ್ರಿ.ಶ. ೧೨೧೬-೧೨೪೬] ಮತ್ತು ಮೂರನೆಯ ರಾಜೇಂದ್ರ ಚೋಳನು ಚೋಳಸಂತತಿಯ ಕೊನೆಯ ಅರಸನಾಗಿ ಕ್ರಿ.ಶ. ೧೨೪೬ ರಿಂದ ೧೨೭೯ರ ವರೆಗೆ ರಾಜ್ಯಭಾರ ಮಾಡಿದನು. ಈ ಸಮಯದಲ್ಲಿ ಪ್ರಾಬಲ್ಯಕ್ಕೆ ಬಂದ ಪಾಂಡ್ಯರು, ಕಾಕತೀಯರು ಮತ್ತು ಹೊಯ್ಸಳರಲ್ಲಿ ಚೋಳ ಸಾಮ್ರಾಜ್ಯವು ಹರಿದು ಹಂಚಿಹೋಯಿತು.

**ಒಂದನೆಯ ರಾಜೇಂದ್ರ ಚೋಳ [ಕ್ರಿ.ಶ. ೧೦೧೪-೧೦೪೪]:**

ಒಂದನೇ ರಾಜರಾಜ ಚೋಳನ ಜೀವಿತಾವಧಿಯಲ್ಲಿ ತನ್ನ ಪುತ್ರನಾದ ಒಂದನೇ ರಾಜೇಂದ್ರನನ್ನು ಯುವ ರಾಜನಾಗಿ ಕ್ರಿ.ಶ. ೧೦೧೨ರಲ್ಲಿ ನೇಮಿಸಿದ್ದನು ಕ್ರಿ.ಶ. ೧೦೧೪ರಲ್ಲಿ ರಾಜರಾಜನ ಮರಣದ ನಂತರ ಉತ್ತರಾಧಿಕಾರಿಯಾಗಿ ಒಂದನೇ ರಾಜೇಂದ್ರ ಚೋಳನು ಅಧಿಕಾರರೂಡನಾದನು. ಈತನು ತನ್ನ ತಂದೆಯ ಕಾಲದಲ್ಲಿ ಆಡಳಿತ ಪೂರ್ಣ ಜವಾಬ್ದಾರಿ ವಹಿಸಿಕೊಂಡು ಸಮರ್ಥ ಆಡಳಿತಗಾರನೆನಿಸಿಕೊಂಡಿದ್ದನು. ಈತನು ತಂದೆಗೆ ತಕ್ಕ ಮಗನಾಗಿ ತಂದೆಯಂತೆಯೇ ಮಹಾ ವಿಜೇತನೂ ದಕ್ಷ ಆಡಳಿತಗಾರನೂ, ಕಲೆ, ಸಾಹಿತ್ಯ, ಧರ್ಮ ಮತ್ತು ವಾಸ್ತು ಶಿಲ್ಪದ ಮಹಾಪೋಷಕನಾಗಿದ್ದನು. ತಂದೆಯಿಂದ ಪಡೆದ ಚೋಳರಾಜ್ಯ ಅಥವಾ ಚೋಳ ಮಂಡಲವನ್ನು ತನ್ನ ಸ್ವಸಾಮರ್ಥ್ಯದಿಂದ ಮತ್ತಷ್ಟು ವಿಸ್ತರಿಸಿದನು. ರಾಜರಾಜ ಚೋಳ ಹಾಕಿದ ಭದ್ರ ಬುನಾದಿಗೆ ಕಿಂಚಿತ್ತು ಲೋಪತಾರದೆ ಚೋಳರ ಕೀರ್ತಿಯನ್ನು ಎತ್ತಿಹಿಡಿದ ಬಗ್ಗೆ ರಾಜೇಂದ್ರ ಚೋಳನ ಶಾಸನಗಳು ಆತನ ದಿಗ್ವಿಜಯಗಳಿಗೆ ಸಂಬಂಧಿಸಿದ ವಿವರಣೆಯನ್ನು ನೀಡುತ್ತವೆ. ಆದುದರಿಂದ ಒಂದನೇ ರಾಜೇಂದ್ರನು ದಕ್ಷಿಣ ಭಾರತ ಕಂಡ ಸಮರ್ಥ ಅರಸರಲ್ಲಿ ಎದ್ದು ಕಾಣುವ ವ್ಯಕ್ತಿಯಾಗಿದ್ದಾನೆ.

**ದಿಗ್ವಿಜಯಗಳು :**

ಈತನು ದಖನ್, ಉತ್ತರ ಭಾರತ ಮತ್ತು ಹೊರದೇಶಗಳಲ್ಲಿ ಯುದ್ಧ ಮಾಡಿ ಗೆಲುವು ಸಾಧಿಸಿದವನಾಗಿದ್ದಾನೆ. ಅಂತಹ ಕೆಲವು ಯುದ್ಧಗಳ ವಿವರಣೆ ಈ ಮುಂದಿನಂತಿದೆ.

**ದಖನ್ ದಂಡಯಾತ್ರೆಗಳು :**

ಒಂದನೇ ರಾಜೇಂದ್ರ ಚೋಳನು ದಕ್ಷಿಣ ಭಾರತ ಭೂ ಪ್ರದೇಶದ ಅನೇಕ ಅರಸರನ್ನು ಸೋಲಿಸಿದನು.

**ತುಂಗಭದ್ರಾ ನದಿಯ ಉತ್ತರದ ಭೂ ಪ್ರದೇಶ :**

ರಾಜೇಂದ್ರ ಚೋಳನು ಅಧಿಕಾರಕ್ಕೆ ಬಂದ ಕೂಡಲೇ ಸಾಮ್ರಾಜ್ಯ ವಿಸ್ತರಿಸಲು ಅನುವು ಮಾಡಿಕೊಂಡನು. ಅವುಗಳಲ್ಲಿ ಬನವಾಸಿ [ವೈಜಯಂತಿಪುರ,

ಜಯಂತಿಪುರ], ಎಡೆದೊರೆ ನಾಡು [ಪ್ರಸ್ತುತ ರಾಯಚೂರು, ಕೊಪ್ಪಳ ಜಿಲ್ಲೆಗಳ ಭೂ ಪ್ರದೇಶ], ಮಾನ್ಯಖೇಟ [ಮಳಖೇಡ] ಮೊದಲಾದವುಗಳನ್ನು ಗೆದ್ದುಕೊಂಡು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಆದರೆ ಎಡೆದೊರೆನಾಡು ಪ್ರದೇಶ ಅತ್ಯಲ್ಪ ಕಾಲದಲ್ಲಿಯೇ ಕಲ್ಯಾಣ ಚಾಳುಕ್ಯರಿಗೆ ಮರಳಿ ಸೇರಿತು.

**ಪಾಂಡ್ಯರ ದಮನ :**

ಚೋಳ ಅರಸರು ಪ್ರಾರಂಭದಿಂದಲೂ ಪಾಂಡ್ಯ ಅರಸರ ಮೇಲೆ ಮೇಲಿಂದ ಮೇಲೆ ಆಕ್ರಮಣ ಮಾಡುತ್ತಿದ್ದರು. ಈ ಹಿಂದೆ ಒಂದನೇ ರಾಜೇಂದ್ರ ಚೋಳನು ಪಾಂಡ್ಯರ ಮಧುರೈ ಪ್ರಾಂತಾಧಿಕಾರಿಯಾಗಿದ್ದಾಗ ಪಾಂಡ್ಯರಿಂದ ಸಾಕಷ್ಟು ಹಿಂಸೆ ಅನುಭವಿಸಿದ್ದನು. ಈ ಸಂದರ್ಭದಲ್ಲಿ ರಾಜೇಂದ್ರ ಚೋಳನು ಸಿಂಹಳದ ದೊರೆಯ ಅಧೀನದಲ್ಲಿದ್ದ ಪಾಂಡ್ಯರನ್ನು ಕ್ರಿ.ಶ. ೧೦೧೮ರಲ್ಲಿ ಸೋಲಿಸಿ ಅಲ್ಲಿನ ಸಂಪತ್ತನ್ನು ಲೂಟಿಮಾಡಿ ತದನಂತರ ಮಧುರೈನಲ್ಲಿ ಬೃಹತ್ ಅರಮನೆಯೊಂದನ್ನು ಕಟ್ಟಿಸಿದನು. ಇದು ಭೂಮಿಗಿಂತ ಭಾರವಾದ ಅರಮನೆ ಎಂದು ಶಾಸನವೊಂದು ಬಣ್ಣಿಸುತ್ತದೆ. ನಂತರ ಅಲ್ಲಿನ ಅಧಿಕಾರವನ್ನು ನೋಡಿಕೊಳ್ಳಲು ಜಟಾವರ್ಮಸುಂದರನನ್ನು ಪ್ರಾಂತಾಧಿಪತಿಯನ್ನಾಗಿ ನೇಮಿಸಿದನು.

**ಚೇರರ ದಮನ :**

ಪಾಂಡ್ಯರನ್ನು ಸೋಲಿಸಿದ ಮೇಲೆ ಒಂದನೇ ರಾಜೇಂದ್ರ ಚೋಳನು ಚೇರರ ರಾಜ್ಯ [ಕೇರಳ]ವನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು.

**ಸಿಲೋನ್‌ನ [ಸಿಂಹಳ, ಶ್ರೀಲಂಕಾ] ದಿಗ್ವಿಜಯ :**

ರಾಜರಾಜಚೋಳನ ಆಳ್ವಿಕೆಯಲ್ಲಿ ಚೋಳರು, ಸಿಂಹಳದ ಮೇಲೆ ದಂಡೆತ್ತಿಹೋಗಿ ಸೋತು ಹಿಂದಿರುಗಿದ್ದರು. ಇದರಿಂದ ಅವಮಾನ ಗೊಂಡ ನೋವನ್ನು ಚೋಳರು ಮರೆತಿರಲಿಲ್ಲ. ಒಂದನೇ ರಾಜೇಂದ್ರ ಚೋಳ ಅಧಿಕಾರಕ್ಕೆ ಬಂದ ನಂತರ ಸಿಂಹಳದ ಮೇಲೆ ದಂಡಯಾತ್ರೆ ಕೈಗೊಂಡನು. ಈ ಸಮಯದಲ್ಲಿ ಸಿಂಹಳವನ್ನು ಆಳ್ವಿಕೆ ಮಾಡುತ್ತಿದ್ದ ೫ನೇ ಮಹಿಂದ್ರನು ಚೋಳರ ಆಕ್ರಮಣದಿಂದ ಪಾರಾಗಲು ಪ್ರಯತ್ನಿಸಿದನು. ಆದರೆ ರಾಜೇಂದ್ರನ ಸೈನ್ಯ ಕ್ರಿ.ಶ. ೧೦೧೮ರಲ್ಲಿ ಸಿಂಹಳವನ್ನು ಮುತ್ತಿ ಮಹೇಂದ್ರನನ್ನು ಸೋಲಿಸಿದುದಲ್ಲದೆ, ಆತನನ್ನು ಚೋಳನಾಡಿಗೆ ಸಾಗಿಸಿ ಸುಮಾರು ೧೨ ವರ್ಷಗಳ ಕಾಲ ತಂಜಾವೂರಿನಲ್ಲಿ ಗೃಹ ಬಂಧನದಲ್ಲಿರಿಸಿದ್ದರಿಂದ, ಆತನು ಇಲ್ಲಿಯೇ ಸಾವನಪ್ಪಿದನು. ಇದರಿಂದಾಗಿ ಸಿಂಹಳವನ್ನು ಸಂಪೂರ್ಣವಾಗಿ ಚೋಳ ಸಾವಮ್ರಾಜ್ಯದ ಅಧೀನಕ್ಕೊಳಪಡಿಸಿಕೊಂಡನು. ರಾಜೇಂದ್ರ ಚೋಳನು ಸಿಂಹಳದ ರಾಜನ ವಶದಲ್ಲಿದ್ದ ಪಾಂಡ್ಯ ರಾಜನ ಕಿರೀಟ ಮತ್ತು ರಾಜ ಮುದ್ರೆಗಳನ್ನು ವಶಪಡಿಸಿಕೊಂಡು

ತನ್ನ ಪೂರ್ವಜನಾದ ಒಂದನೇ ಪರಾಂತಕನ ಆಸೆಯನ್ನು ಪೂರೈಸಿದನು. ಅಷ್ಟೇ ಅಲ್ಲದೆ ಸಿಂಹಳದ ರಾಜರಾಣಿಯರ ಕಿರೀಟಗಳನ್ನು ತನ್ನ ಕೈ ವಶಪಡಿಸಿಕೊಂಡನು. ಹಾಗೆಯೇ ರಾಜೇಂದ್ರ ಚೋಳನು ಸಿಂಹಳದ ಆಡಳಿತ ನಿರ್ವಹಣೆಗಾಗಿ ತನ್ನ ನಂಬಿಗಸ್ಥ ಅಧಿಕಾರಿಗಳನ್ನು ನೇಮಿಸಿ ಅಲ್ಲಿ ಅನೇಕ ಶಿವ ಮತ್ತು ವಿಷ್ಣು ದೇವಾಲಯಗಳನ್ನು ನಿರ್ಮಿಸಿದನು.

**ಕಲ್ಯಾಣ ಚಾಳುಕ್ಯರೊಡನೆ ಕಲಹ :**

ಕಲ್ಯಾಣದ ಚಾಳುಕ್ಯರು ಮತ್ತು ಚೋಳರೊಂದಿಗೆ ಹಲವಾರು ವರ್ಷಗಳ ಕಾಲ ಸಾಮ್ರಾಜ್ಯದ ವಿಸ್ತರಣೆಗೆ ಕಲಹಗಳು ಜರುಗುತ್ತಿದ್ದವು. ಚೋಳ ಅರಸ ಒಂದನೇ ರಾಜೇಂದ್ರ ಚೋಳ ಅಧಿಕಾರಕ್ಕೆ ಬಂದ ಮೇಲೆ ಕಲ್ಯಾಣ ಚಾಳುಕ್ಯರ ಹಲವು ಪ್ರದೇಶಗಳು ಚೋಳರ ಪಾಲಾಗಿದ್ದವು. ಅವುಗಳನ್ನು ಮರಳಿ ಪಡೆಯಲು ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿ ಜಯಸಿಂಹನು ಪ್ರಯತ್ನ ನಡೆಸಿದಾಗ ಚೋಳ ಅರಸ ಒಂದನೇ ರಾಜೇಂದ್ರನು ಪಾಂಡ್ಯರು, ಚೇರರೊಡನೆ ಒಕ್ಕೂಟ ಮಾಡಿಕೊಂಡು ಚಾಳುಕ್ಯ ಸಾಮ್ರಾಜ್ಯದ ಭಾಗವಾಗಿದ್ದ ಮುಸಂಗಿ [ಮಸ್ಕಿ]ಯಲ್ಲಿ ಕ್ರಿ.ಶ. ೧೦೨೦ರಲ್ಲಿ ಯುದ್ಧ ಮಾಡಿ ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿ ಜಯಸಿಂಹನನ್ನು ಸೋಲಿಸಿ ರಟ್ಟವಾಡಿಯನ್ನು ಹಿಂದಕ್ಕೆ ಪಡೆದನು.

**ಚೋಳರ ಅಪ್ರಕಟಿತ ಶಾಸನ :**

ಈ ಶಾಸನವು ರಾಯಚೂರು ಜಿಲ್ಲೆ ಮಸ್ಕಿ ಪಟ್ಟಣದ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಿಂದುಗಡೆ ಇರುವ ಸುಳಿ ದಿಬ್ಬದ ದೊಡ್ಡದಾದ ಕಣಶಿಲೆಯ ಬಂಡೆಗಲ್ಲಿಗೆ ಶಾಸನ ಹಾಕಿಸಲ್ಪಟ್ಟಿದೆ. ಈ ಬಂಡೆಗಲ್ಲಿನ ಎಡಬದಿ [ದಕ್ಷಿಣ]ಯಲ್ಲಿ ಎರಡು ಮೀನುಗಳು, ಧನಸ್ಸು, ಹುಲಿ, ವರಾಹ ಲಾಂಛನಗಳಿದ್ದು, ಇವುಗಳು ಕ್ರಮವಾಗಿ ಪಾಂಡ್ಯರು, ಚೇರರು, ಚೋಳರು, ಕಲ್ಯಾಣ ಚಾಳುಕ್ಯ ಅರಸರ ರಾಜ ಲಾಂಛನಗಳಾಗಿವೆ. ಇವುಗಳ ಹತ್ತಿರದಲ್ಲಿಯೇ ಶಾಸನ ಬರೆಯಲು ಬಂಡೆಗಲ್ಲನ್ನು ನುಣುಪಾಗಿ ಕೆತ್ತಲಾಗಿದೆ. ಆದರೆ ರೂವಾರಿ ಇಲ್ಲಿ ಶಾಸನ ಬರೆಯಲಿಲ್ಲ. ಏಕೆಂದರೆ ಆತನಿಗೆ ಶಾಸನ ಬರೆಯುವಷ್ಟು ಸ್ಥಳಾವಕಾಶಸಿಗದೇ ಇರುವುದರಿಂದ ಶಾಸನ ಈ ಭಾಗದಲ್ಲಿ ಕೆತ್ತನೆಯಾಗಲಿಲ್ಲ. ಇದರ ಹತ್ತಿರದ ಮೇಲ್ಬದಿಯಲ್ಲಿ [ಪಶ್ಚಿಮ] ಈ ಮೇಲೆ ಹೇಳಿದ ಅರಸರ ರಾಜ ಲಾಂಛನಗಳನ್ನು ಮತ್ತೊಮ್ಮೆ ಇಲ್ಲಿ ಕೆತ್ತಲಾಗಿದೆ. ಇವುಗಳ ಹತ್ತಿರದ [ಉತ್ತರ] ಬಂಡೆಗಲ್ಲಿನ ತಮಿಳು ಗ್ರಂಥಲಿಪಿ, ಸಂಸ್ಕೃತ ಭಾಷೆಯಲ್ಲಿ ಬರೆಸಲ್ಪಟ್ಟ ಏಳು ಸಾಲಿನ ಶಾಸನವಿದೆ.

**ಅದರ ಮೂಲ ಪಾಠ ಇಂತಿದೆ :**

೧, ರಾಜಶ್ರೀ ರಾ

೨. ಜನ್ಯ ಮಕುಟ ಶ್ರೇಣಿ

೩. ರತ್ನೇಷು ಶಾಸ

೪. ನಂ ಏತತ್ ರಾ

೫. ಜೇಂದ್ರ ಚೋಳ

೬. ಸ್ಯ ಪರಕೇಸ

೭. ರಿವರ್ಮನ:

ಇದು ಉತ್ತರ ಕರ್ನಾಟಕದಲ್ಲಿಯೇ [ತುಂಗಭದ್ರಾ ನದಿಯ ಉತ್ತರ ದಿಕ್ಕಿನ ಕರ್ನಾಟಕದ ಭೂ ಪ್ರದೇಶ] ಪ್ರಪ್ರಥಮವಾಗಿ ಶೋಧಗೊಂಡ ಚೋಳ ಅರಸರ ಶಾಸನವಾಗಿದೆ. ಇಲ್ಲಿಯವರೆಗೆ ಚರಿತ್ರೆಯಲ್ಲಿ ಕಲ್ಯಾಣ ಚಾಳುಕ್ಯರನ್ನು ತುಂಜಾವೂರಿನ ಚೋಳ ಅರಸನಾದ ಒಂದನೇ ರಾಜೇಂದ್ರ ಚೋಳನು ಮೊಸಗೆ [ಪಿರಿಯ ಮೊಸಂಗಿ, ಮೊಸಂಗಿ, ಮಸಗಿ] ಯುದ್ಧದಲ್ಲಿ ಕ್ರಿ.ಶ. ೧೦೧೯-೧೦೨೧ರ ಅವಧಿಯಲ್ಲಿ ಸೋಲಿಸಿದನೆಂದು ಹಲವು ಇತಿಹಾಸಕಾರರು ತಾವು ರಚಿಸಿದ ಗ್ರಂಥಗಳಲ್ಲಿ ಹೇಳಿಕೊಂಡಿದ್ದಾರೆ. ಈ ಶಾಸನದಿಂದ ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿ ಜಯಸಿಂಹ ಮೊಸಗೆ ಯುದ್ಧದಲ್ಲಿ ಪರಾಭವ ಹೊಂದಿದ್ದಾನೆಂದು ತಿಳಿದು ಬರುತ್ತದೆ. ಈ ಶಾಸನದಿಂದ ತಿಳಿದು ಬರುವುದೇನೆಂದರೆ ಕಲ್ಯಾಣ ಚಾಳುಕ್ಯ ಅರಸ ಜಯಸಿಂಹನೊಂದಿಗೆ ಚೋಳರ ಒಕ್ಕೂಟ ಸೈನ್ಯವು ಮೊಸಗೆ [ಪ್ರಸ್ತುತ ಮಸ್ಕಿ] ಭೂ ಪ್ರದೇಶದಲ್ಲಿ ಘೋರವಾದ ಯುದ್ಧ ಮಾಡಿದವು. ಈ ಯುದ್ಧದಲ್ಲಿ ಕಲ್ಯಾಣ ಚಾಳುಕ್ಯರ ಸೈನ್ಯಕ್ಕೆ ಹಿನ್ನೆಡೆಯಾಗಿ ಸೋತು ಹೋದರು. ಹಾಗೆಯೇ ಚೋಳರ ಒಕ್ಕೂಟ ಸೈನ್ಯಕ್ಕೆ ಜಯವಾಯಿತು. ಈ ಸಂದರ್ಭದಲ್ಲಿ ಎರಡು ಕಡೆಯಿಂದ ಭಾಗವಹಿಸಿದ ವಿವಿಧ ಅರಸು ಮನೆತನಗಳು ಒಂದು ಒಪ್ಪಂದಕ್ಕೆ ಬಂದವು. ಹಾಗೆಯೇ ತಾವು ಗೆಲುವು ಸಾಧಿಸಿದ ಕುರುಹಾಗಿ ಮಸ್ಕಿ ಪಟ್ಟಣದ ಸುಳಿದಿಬ್ಬದ ಬಂಡೆಗಲ್ಲಿಗೆ ನಾಲ್ಕು ಅರಸು ಮನೆತನಗಳ ರಾಜ ಲಾಂಛನದೊಂದಿಗೆ ಈ ಶಾಸನವನ್ನು ಬರೆಸಿದರು.

ಈ ಶಾಸನದಂತೆ ರಾಜಾಧಿ ರಾಜರಲ್ಲಿ ಪ್ರಸಿದ್ಧನಾದ ರಾಜೇಂದ್ರ ಚೋಳನು ತಾನು ಹಿಂದೆ ಪಡೆದುಕೊಂಡ ಬಿರುದುಗಳನ್ನು ಇಲ್ಲಿ ಮತ್ತೊಮ್ಮೆ ಹಾಕಿಸದೆ, ಹೊಸ ಬಿರುದಾದ ಪರ ಕೇಸರಿವರ್ಮನ ಎಂಬ ಬಿರುದಿನಿಂದ ಕಂಗೊಳಿಸಿದ್ದಾನೆ. ಹಾಗೆಯೇ ತಿರುಮಲೈ ಬಂಡೆಗಲ್ಲು ಶಾಸನವು ರಾಜೇಂದ್ರನ ಇನ್ನೊಂದು ಮುಖ್ಯ

ಶಾಸನವಾಗಿದ್ದು, ಅದನ್ನು ಆತನ ಪಟ್ಟಾಭಿಷೇಕದ ೧೩ನೇ ವರ್ಷದಲ್ಲಿ (ಕ್ರಿ.ಶ. ೧೦೨೪) ಹೊರಡಿಸಿದ್ದಾನೆ. ಈ ಶಾಸನ ರಾಜೇಂದ್ರ ಚೋಳನ ಖಂಡಾಂತರ ವಿಜಯಾಗಳ ಪೂರ್ಣಪಟ್ಟಿಯನ್ನು ನೀಡುತ್ತಿದೆ. ಪರಕೇಸರಿ ವರ್ಮಯಾನೇಶ್ರೀ ರಾಜೇಂದ್ರ ಚೋಳ ದೇವನು . . . . . ತನ್ನ ಯುದ್ಧೋತ್ಸಾಹಿ ಸೈನ್ಯದಿಂದ ಇಡೈತುರೈನಾಡು [ಎಡೆದೊರೆನಾಡು], ವನವಾಸಿ [ಬನವಾಸಿ], ಕೊಳ್ಳಿಪಾಕ್ಕೈ [ಕೊಲನುಪಾಕ], ಮಣ್ಣೈಕ್ಕಡಕಂ [ಮಾನ್ಯಖೇಟ ಅಥವಾ ಮಳಖೇಡ] ಮೊದಲಾದ ವಿಷಯಗಳನ್ನು ಅರುಹುತ್ತದೆ. [ಆರ್.ಸಿ.ಮಜುಂದಾರ್ ೨೦೦೦, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಸಂಪುಟ-೦೯, ಭಾಗ-೦೧, ಪು-೩೪೧], ಇದರಿಂದ ತಿಳಿದು ಬರುವುದೇನೆಂದರೆ ಮಸ್ಕಿ ಶಾಸನವೇ ಮೊಟ್ಟ ಮೊದಲ ಬಾರಿಗೆ ಒಂದನೇ ರಾಜೇಂದ್ರ ಚೋಳನಿಗೆ ಪರಕೇಸರಿ ವರ್ಮನ: ಎಂಬ ಬಿರುದನ್ನು ಕ್ರಿ.ಶ. ೧೦೨೦ರ ಸುಮಾರಿಗೆ ಉಲ್ಲೇಖಿಸುತ್ತದೆ. ಈ ಶಾಸನದ ನಂತರದಲ್ಲಿ ಕ್ರಿ.ಶ. ೧೦೨೪ರಲ್ಲಿ ತಿರುಮಲೈ ಬಂಡೆಗಲ್ಲು ಶಾಸನದಲ್ಲಿ ಒಂದನೇ ರಾಜೇಂದ್ರ ಚೋಳನಿಗೆ ಪರಕೇಸರಿ ವರ್ಮಯಾನೆ ಎಂದು ತಿಳಿಸುತ್ತದೆ.

**ಮೊಸಗೆ (ಮುಸಂಗಿ) ಯುದ್ಧದಲ್ಲಿ ಭಾಗವಹಿಸಿದ ಅರಸು ಮನೆತನಗಳು :**

ಕ್ರಿ.ಶ. ೧೦೧೮ರ ಸುಮಾರಿಗೆ ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿ ಜಯಸಿಂಹ ಅಧಿಕಾರಕ್ಕೆ ಬಂದನು. ಇದೇ ವೇಳೆಯಲ್ಲಿ ಮಾಳವದ ಪರಮಾರ ದೊರೆ ಬೋಜ(ಕ್ರಿ.ಶ. ೧೦೦೦-೧೦೫೫), ತ್ರಿಪುರಿ [ಮಧ್ಯಪ್ರದೇಶ ರಾಜ್ಯದ ಜಬ್ಬಲ್ ಪುರ ಜಿಲ್ಲೆಯ]ಯ ಕಳಚೂರಿ ಅರಸ ಗಾಂಗೇಯದೇವ (ಕ್ರಿ.ಶ. ೧೦೧೫-೧೦೪೧) ಮತ್ತು ಚೋಳರ ಒಕ್ಕೂಟ ಸೈನ್ಯ [ಚೋಳರು, ಪಾಂಡ್ಯರು, ಚೇರರು]ವು ಕ್ರಿ.ಶ. ೧೦೨೦ರಲ್ಲಿ ಮೊಸಗೆ [ಮುಸಂಗಿ]ಯ ಮೇಲೆ ದಾಳಿ ಮಾಡಿದವು ಚಾಳುಕ್ಯ ಅರಸ ಜಯಸಿಂಹ ಏಕಾಂಗಿಯಾಗಿ ಹೋರಾಟಮಾಡಿ ಸೋತುಹೋದನು. ಗೆಲುವು ಸಾಧಿಸಿದ ಒಂದನೇ ರಾಜೇಂದ್ರ ಚೋಳನು ಕಲ್ಯಾಣ ಚಾಳುಕ್ಯರ ರಾಜಧಾನಿ ಮಾನ್ಯಖೇಟ [ಮಳಖೇಡ]ವನ್ನು ಸುಟ್ಟು ಹಾಕಿದನು.

**ಚೋಳರು ಮತ್ತು ವೆಂಗಿಯ ಚಾಳುಕ್ಯರ ಸಂಬಂಧ :**

ಒಂದನೇ ರಾಜೇಂದ್ರ ಚೋಳನು ಪಾಂಡ್ಯರು, ಚೇರರು ಮತ್ತು ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿ ಜಯಸಿಂಹನನ್ನು ಸೋಲಿಸಿ ಪರಾಕ್ರಮ ಮೆರೆದನು. ಈ ಸಮಯದಲ್ಲಿ ವೆಂಗಿ ಮಂಡಲದಲ್ಲಿ ಒಂದನೇ ರಾಜೇಂದ್ರನ ಭಾವಮೈದುನನು ವೆಂಗಿಯ ಸಾಮಂತ ಅರಸನಾಗಿದ್ದ ವಿಮಲಾದಿತ್ಯನು ಮರಣಹೊಂದಿದ್ದನು. ಇದರಿಂದ ಅಲ್ಲಿಯ ಸಿಂಹಾಸನಕ್ಕಾಗಿ ಗೊಂದಲವುಂಟಾಯಿತು. ವಿಮಲಾದಿತ್ಯನ ದಾಯಾದಿ [ಮಲ ಸಹೋದರ] ಏಳನೇ ವಿಜಯಾದಿತ್ಯನು ಪುನಃ ವೆಂಗಿ

ಮಂಡಲದ ಸಿಂಹಾಸನವನ್ನು ಪಡೆಯಲು ಯತ್ನಿಸಿದನು. ಇದರಿಂದ ವಿಮಲಾದಿತ್ಯನ ಮಗ ರಾಜರಾಜ ನರೇಂದ್ರ [ಕ್ರಿ.ಶ. ೧೦೨೨-೧೦೬೩]ನು ರಾಜೇಂದ್ರ ಚೋಳನ ನೆರವನ್ನು ಕೋರಿದನು. ರಾಜೇಂದ್ರನು ನರೇಂದ್ರನ ಸಹಾಯಕ್ಕಾಗಿ ಚೋಳ ಸೈನ್ಯವನ್ನು ಕಳುಹಿಸಿ ಆತನಿಗೆ ವೆಂಗಿಯ ಸಿಂಹಾಸನವನ್ನು ದೊರಕಿಸಿಕೊಟ್ಟನು. ಅಷ್ಟೇ ಅಲ್ಲದೆ ರಾಜೇಂದ್ರನು ತನ್ನ ಮಗಳಾದ ಕುಮಾರಿ ಅಮ್ಮಂಗದೇವಿಯನ್ನು ರಾಜ ರಾಜ ನರೇಂದ್ರನಿಗೆ ವಿವಾಹ ಮಾಡಿಕೊಟ್ಟನು. ಇದಾದ ಸ್ವಲ್ಪ ಸಮಯದಲ್ಲಿಯೇ ಕಲ್ಯಾಣ ಚಾಳುಕ್ಯರು ಚೋಳರ ಹಗೆತನದಿಂದ ವೆಂಗಿಯ ಸಿಂಹಾಸನವು ರಾಜ ರಾಜ ನರೇಂದ್ರನಿಂದ ಕೈಬಿಟ್ಟು ಹೋಯಿತು. ಕಲ್ಯಾಣ ಚಾಳುಕ್ಯ ಅರಸ ಒಂದನೇ ಸೋಮೇಶ್ವರ [ಕ್ರಿ.ಶ. ೧೦೪೨-೧೦೬೮] ವಿಜಯಾದಿತ್ಯನ ಪರವಹಿಸಿ ಆತನನ್ನು ವೆಂಗಿಯ ಸಿಂಹಾಸನದ ಮೇಲೆ ಕೂಡಿಸಿ ರಾಜನೆಂದು ಘೋಷಿಸಿದನು. ಇದರಿಂದ ಕ್ರೋಧಗೊಂಡ ಒಂದನೇ ರಾಜೇಂದ್ರ ಚೋಳನು ಬೃಹತ್ ಸೈನ್ಯದೊಡನೆ ವೆಂಗಿಗೆ ಧಾವಿಸಿ, ಶತೃಗಳನ್ನು ಸೋಲಿಸಿ ತನ್ನ ಅಳಿಯನಾದ ರಾಜ ರಾಜ ನರೇಂದ್ರನಿಗೆ ಪುನಃ ಸಿಂಹಾಸನವನ್ನು ದೊರಕಿಸಿ ಕೊಟ್ಟನು.

**ಉತ್ತರದ ದಂಡಯಾತ್ರೆಗಳು :**

ದಕ್ಷಿಣದಲ್ಲಿ ತನ್ನ ಅಸ್ತಿತ್ವ ಭದ್ರಪಡಿಸಿಕೊಂಡ ಮೇಲೆ ಒಂದನೇ ರಾಜೇಂದ್ರ ಚೋಳನು ಉತ್ತರದ ಕಡೆಗೆ ದಿಗ್ವಿಜಯ ಆರಂಭಿಸಿದ. ಈತನು ತನ್ನ ಸಮರ್ಥ ದಂಡ ನಾಯಕರನ್ನು ಯುದ್ಧಕ್ಕೆ ಕಳುಹಿಸಿಕೊಟ್ಟನು. ಇವರು ಮೊದಲಿಗೆ ಚೋಳ ರಾಜ್ಯದ ಉತ್ತರ ಗಡಿಯ ವೆಂಗಿಯನಾಡು ಮತ್ತು ಆಂದ್ರ ರಾಷ್ಟ್ರಗಳನ್ನು ಆಕ್ರಮಿಸಿದರು. ಅಲ್ಲಿಂದ ಮುಂದುವರೆದು ದಕ್ಷಿಣ ಕೋಶಲನಾಡು, ದಂಡಭುಕ್ತಿ [ದಂಡ ಕಾರಣ್ಯ, ಇಂದಿನ ಚತ್ತೀಸ್‌ಗಡ ಪ್ರದೇಶ], ಅಂಗ, ಮಗಧ ಮತ್ತು ಓಡ್ರದೇಶಗಳನ್ನು [ಓರಿಸ್ಸಾ] ಜಯಿಸಿದರು. ಹಾಗೆಯೇ ಮುಂದುವರೆದು ಬಂಗಾಳದ ಒಂದನೇ ಮಹಿಪಾಲನನ್ನು ಸೋಲಿಸಿದರು. ಹೀಗೆ ಯಶಸ್ವಿಯಾಗಿ ಮುಂದುವರೆದ ದಂಡನಾಯಕರು ಗಂಗಾ ನದಿಯವರೆಗೂ ತಮ್ಮ ದಿಗ್ವಿಜಯಗಳನ್ನು ಮೆರೆದರು. ಈ ಸಂದರ್ಭದಲ್ಲಿ ಚೋಳ ಸೈನ್ಯದೊಂದಿಗೆ ಸೋತರಾಜರುಗಳಿಂದ ಅಪಾರ ಪ್ರಮಾಣದ ಕಪ್ಪ ಕಾಣಿಕೆಯನ್ನು ಸಂಗ್ರಹಿಸಿದರು. ಹಾಗೆಯೇ ಪವಿತ್ರ ಗಂಗಾ ಜಲವನ್ನು ತೆಗೆದುಕೊಂಡು ವಿಜಯೋತ್ಸವದೊಂದಿಗೆ ತಮ್ಮ ಸಾಮ್ರಾಜ್ಯಕ್ಕೆ ಹಿಂತಿರುಗುವ ವೇಳೆಯಲ್ಲಿ ರಾಜೇಂದ್ರ ಚೋಳನು ಸಕಲ ಗೌರವಗಳೊಂದಿಗೆ ಗೋದಾವರಿ ನದಿ ತೀರದಲ್ಲಿ ಎದುರುಗೊಂಡು, ದಂಡನಾಯಕರನ್ನು ಮತ್ತು ಸೈನ್ಯದವರನ್ನು ಸತ್ಕರಿಸಿದನು.

**ಸಾಗರಗಳಾಚೆ ದಂಡಯಾತ್ರೆ :**

ರಾಜೇಂದ್ರ ಚೋಳನ ಮತ್ತೊಂದು ಸಾಹಸದಂಡಯಾತ್ರೆಯೆಂದರೆ ಶೈಲೇಂದ್ರದ ಮೇಲೆ ಕೈಗೊಂಡುದುದಾಗಿದೆ. ಆಗ್ನೇಯ ಏಷ್ಯಾದ ಶೈಲೇಂದ್ರ ಸಾಮ್ರಾಜ್ಯದ ತನ್ನ ಪ್ರಭಾವ ನೌಕಬಲ ಸಾಮರ್ಥ್ಯಕ್ಕೆ ಹೆಸರುವಾಸಿಯಾಗಿದುದಲ್ಲದೆ ಬಲಯುತ ಸಾಮ್ರಾಜ್ಯವಾಗಿತ್ತು. ರಾಜೇಂದ್ರನು ತನ್ನ ಬಲವಾದ ಭೂಸೇನೆ ಮತ್ತು ನೌಕಾದಳವನ್ನು ಅಲ್ಲಿಗೆ ಕಳುಹಿಸಿದನು. ಆತನ ನೌಕಾದಳವು ಬಂಗಾಳಕೊಲ್ಲಿಯನ್ನು ದಾಟಿ ಜಾವಾ, ಸುಮಾತ್ರ ಪ್ರದೇಶದ ಅನೇಕ ಸಣ್ಣ ಪುಟ್ಟ ರಾಜರನ್ನು ಸೋಲಿಸಿ ಮಲಯಾ ಪರ್ಯಾಯ ದ್ವೀಪದ ಮೇಲೆ ತನ್ನ ಯಶಸ್ವಿ ದಂಡಯಾತ್ರೆಯನ್ನು ನಡೆಸಿತು. ಪ್ರಾಬಲ್ಯಕ್ಕೆ ಹೆಸರಾಗಿದ್ದ ಶೈಲೇಂದ್ರದ ದೊರೆ ಸಂಗ್ರಾಮ ವಿಜಯೋತ್ತುಂಗವರ್ಮ ಚೋಳರ ಸೈನ್ಯಕ್ಕೆ ಸೋತು ಪಲಾಯನಗೈದನು. ಚೋಳ ಸೈನ್ಯ ಆತನ ರಾಜಧಾನಿಯಾದ ಕೇದಾರಂ ಅನ್ನು ಮುತ್ತಿ ಅಪಾರ ಪ್ರಮಾಣದ ಬೆಲೆ ಬಾಳುವ ಐಶ್ವರ್ಯವನ್ನು ತನ್ನ ಕಪ್ಪು ಕಾಣಿಕೆಯನ್ನಾಗಿ ಪಡೆದುಕೊಂಡಿತು. ಹಾಗೆಯೇ ಇಂಡೋ ಚೀನಾದಲ್ಲಿ ಒಂದು ಪುಟ್ಟ ವಸಾಹತು ನೆಲೆ ಸ್ಥಾಪಿಸಿದನು. ಹೀಗೆ ಒಂದನೇ ರಾಜೇಂದ್ರ ಚೋಳನ ಕಾಲಾವಧಿಯಲ್ಲಿ ಚೋಳ ಸಾಮ್ರಾಜ್ಯದ ವಿಸ್ತಾರ ಅತ್ಯುನ್ನತಿಯನ್ನು ಅದರ ಸೈನಿಕ ಮತ್ತು ನೌಕಾ ಶಕ್ತಿಗಳು ಉತ್ತುಂಗ ಶಿಖರವನ್ನು ಮುಟ್ಟಿದ್ದವು.

**ಅಂತಿಮ ದಂಡಯಾತ್ರೆಗಳು :**

ಒಂದನೇ ರಾಜೇಂದ್ರ ಚೋಳನ ಕೊನೆಯ ಕಾಲದಲ್ಲಿ ಮತ್ತೊಮ್ಮೆ ಪಾಂಡ್ಯರು, ಚೇರರು ದಂಗೆಯೆದ್ದು ಸ್ವತಂತ್ರರಾಗಲು ಹವಣಿಸಿದರು. ಈ ದಂಗೆಯನ್ನು ಯುವರಾಜ ಒಂದನೇ ರಾಜಾಧಿರಾಜನು ಸದೆಬಡಿದನು. ನಂತರದ ದಿನಗಳಲ್ಲಿ ಚೋಳರಿಗೂ ಮತ್ತು ಕಲ್ಯಾಣ ಚಾಳುಕ್ಯ ಅರಸ ಒಂದನೇ ಸೋಮೇಶ್ವರನಿಗೂ ಯುದ್ಧ ನಡೆದು, ಈ ಯುದ್ಧದಲ್ಲಿಯೂ ಕೂಡ ಚೋಳರು ಜಯಶಾಲಿಯಾದರು.

**ವಿದೇಶದೊಂದಿಗೆ ರಾಯಭಾರ ಸಂಬಂಧ :**

ರಾಜೇಂದ್ರ ಚೋಳನು ದಖನ್ ಮತ್ತು ಉತ್ತರ ಭಾರತದ ಯುದ್ಧಗಳನ್ನು ಮಾಡಿ ಜಯಶಾಲಿಯಾಗಿದ್ದನು. ಹಾಗೆಯೇ ಹೊರ ದೇಶದಲ್ಲಿಯು ವಿಜಯೋತ್ಸವ ಆಚರಿಸಿದ್ದನು. ಈ ವೇಳೆಯಲ್ಲಿ ರಾಜೇಂದ್ರ ಚೋಳನು ಚೀನಾದೇಶಕ್ಕೆ ತನ್ನ ಇಬ್ಬರು ರಾಯಭಾರಿಗಳನ್ನು ಕಳುಹಿಸುವುದರೊಂದಿಗೆ ಅಲ್ಲಿ, ಆತನು ಒಂದು ಚಿಕ್ಕವಸಾಹತು ನೆಲೆಯನ್ನು ಸ್ಥಾಪಿಸಿಕೊಂಡಿದ್ದನು.

**ಚೋಳ ಸಾಮ್ರಾಜ್ಯದ ವಿಸ್ತಾರ :**

ಈ ಮೇಲಿನ ದಿಗ್ವಿಜಯಗಳಿಂದಾಗಿ ಚೋಳ ಸಾಮ್ರಾಜ್ಯವು ರಾಜೇಂದ್ರ ಚೋಳನ ಕಾಲದಲ್ಲಿ ಇಡೀ ದಕ್ಷಿಣ ಭಾರತವನ್ನೆಲ್ಲಾ ಆವರಿಸಿಕೊಂಡು ಇದರೊಂದಿಗೆ, ಉತ್ತರ ಭಾರತದ ಗಂಗಾನದಿ ಪ್ರದೇಶವನ್ನು ಗೆದ್ದರೂ, ಅಲ್ಲಿಗೆ ಸಾಮ್ರಾಜ್ಯ ವಿಸ್ತರಣೆಯಾಗಲಿಲ್ಲ. ಹಾಗೆಯೇ ಸಿಲೋನ್ (ಸಿಂಹಳ)ನ ಉತ್ತರಭಾಗ, ಮಾಲ್ಡಿವ್ಸ್ ದ್ವೀಪಗಳು ಒಳಗೊಂಡಂತೆ, ವೆಂಗಿ ಮಂಡಲ ಪ್ರದೇಶವು ಈತನ್ನ ಅದೀನದಲ್ಲಿತ್ತು. ಒಟ್ಟನಲ್ಲಿ ಹೇಳುವುದಾದರೆ ರಾಜೇಂದ್ರ ಚೋಳನು ದಕ್ಷಿಣಭಾರತದ ಗಣ್ಯ ಅರಸರಲ್ಲಿ ಒಬ್ಬನಾಗಿದ್ದನೆಂಬ ಕೀರ್ತಿಗೆ ಭಾಜನನಾಗಿದ್ದನು.

**ಒಂದನೇ ರಾಜೇಂದ್ರ ಚೋಳನ ಬಿರುದುಗಳು :**

ಈತನು ಬಹುಪರಾಕ್ರಮಿಯಾದ ಅರಸನಾಗಿದ್ದು, ತನ್ನ ಪ್ರಭುತ್ವದ ಸಂಕೇತವಾಗಿ ಹಲವಾರು ಬಿರುದುಗಳನ್ನು ಧರಿಸಿಕೊಂಡಿದ್ದನು. ಒಂದನೇ ರಾಜೇಂದ್ರವರ್ಮನ ಉತ್ತರಭಾರತದ ದಿಗ್ವಿಜಯದ ನೆನಪಿಗೆ ಗಂಗೈಕೊಂಡ ಚೋಳ [ಗಂಗೆಯನ್ನು ಗೆದ್ದವನು] ಎಂಬ ಬಿರುದನ್ನು ಧರಿಸುವುದರೊಂದಿಗೆ ಗಂಗೈಕೊಂಡ ಚೋಳಪುರವೆಂಬ ಹೊಸರಾಜಧಾನಿಯನ್ನು ನಿರ್ಮಿಸಿ ಇಲ್ಲಿಗೆ ತಂಜಾವೂರಿನಿಂದ ರಾಜಧಾನಿಯನ್ನು ವರ್ಗಾವಣೆ ಮಾಡಿದನು. ಹಾಗೆಯೇ ಗಂಗೈಕೊಂಡ ಚೋಳಪುರಂ ಎಂಬ ಹದಿನಾರು ಮೈಲಿ ಉದ್ಧದ ಕಲ್ಲಿನ ಕೆರೆಯನ್ನು ನಿರ್ಮಿಸಿ ಅದಕ್ಕೆ ಗಂಗಾ ನದಿಯಿಂದ ತಂದ ನೀರನ್ನು ಹರಿಯಬಿಟ್ಟನು. ಈತನು ನಿರ್ಮಿಸಿದ ಈ ಚೋಳ ಗಂಗೈ ಕೆರೆ ೧೬ ಮೈಲು ಸುತ್ತಳತೆಯನ್ನೊಳಗೊಂಡಿದ್ದು, ಇಂದಿಗೂ ಅತ್ಯಂತ ಉಪಯುಕ್ತ ನೀರಾವರಿ ಕೆರೆಯಾಗಿ ಮುಂದುವರೆದಿದೆ. ಮನ್ಯೈಕ್ಕಡಮ್ [ಮಾನ್ಯಖೇಟ] ದಂಡಯಾತ್ರೆಯಲ್ಲಿ ರಾಜೇಂದ್ರನು ಸ್ವತಃ ಸೈನ್ಯದ ನಾಯಕತ್ವ ವಹಿಸಿ ರಾಜಧಾನಿ ಪಟ್ಟಣವನ್ನು ವಶಪಡಿಸಿಕೊಂಡನು. ಈ ವಿಜಯದ ನೆನಪಿಗಾಗಿ ಮನ್ಯೈಕೊಂಡ ಚೋಳನ್ ಎಂಬ ಬಿರುದು ಧರಿಸಿದನೆಂದು ತಿರುವರಿಯೂರ್ ಶಾಸನ ಉಲ್ಲೇಖಿಸುತ್ತದೆ. ಹಾಗೆಯೇ ಈತನು ಪಂಡಿತಚೋಳ (ಈತನಿಗಿದ್ದ ವಿದ್ಯಾಭಿಮಾನ ಹಾಗೂ ಸಾಹಿತ್ಯಾಸಕ್ತನಾಗಿದ್ದ ಕಾರಣಕ್ಕೆ) ಮುದಿಗೊಂಡ ಚೋಳ, ವೀರ ರಾಜೇಂದ್ರ, ಕದರಮಕೊಂಡ ಚೋಳ ಎಂಬ ಮೊದಲಾದ ಬಿರುದುಗಳಿದ್ದವು. ಇತ್ತೀಚೆಗೆ ಪತ್ತೆಯಾದ ಮಸ್ಕಿ ಶಾಸನದಲ್ಲಿ ಪರಕೇಸರಿವರ್ಮನಃ ಎಂಬ ಬಿರುದಿನಿಂದ ಕರೆಸಿಕೊಂಡಿದ್ದಾನೆ.

**ಕೊನೆಯ ದಿನಗಳು :**

ರಾಜೇಂದ್ರ ಚೋಳನಿಗೆ ವೀರಮಹಾದೇವಿ ಎಂಬ ಹೆಸರಿನ ಪತ್ನಿಯಿದ್ದಳು. ಒಂದನೇ ರಾಜಾಧಿರಾಜ, ಎರಡನೇ ರಾಜೇಂದ್ರ ಮತ್ತು ವೀರರಾಜೇಂದ್ರ ಎಂಬ

ಮೂವರು ಗಂಡು ಮಕ್ಕಳು ಹಾಗೂ ಅರುಳ್ ಮೊಳಿನಂಗಾಯರ್, ಅಮ್ಮಂಗ ದೇವಿಯೆಂಬ ಇಬ್ಬರು ಹೆಣ್ಣು ಮಕ್ಕಳಿದ್ದರು. ಒಂದನೇ ರಾಜೇಂದ್ರ ಚೋಳನು ಕ್ರಿ.ಶ. ೧೦೪೪ರಲ್ಲಿ ಮರಣಹೊಂದಿದನು. ಈತನ ಮರಣದೊಂದಿಗೆ ಆತನ ಪತ್ನಿಯು ಸಹ ಸಹಗಮನವನ್ನು ಅನುಸರಿಸಿದಳು.

**ಸಮಾರೋಪ :**

ಒಂದನೇ ರಾಜೇಂದ್ರ ಚೋಳನು ಮೂವತ್ತು ವರ್ಷಗಳಿಗಿಂತ ಹೆಚ್ಚು ಕಾಲ ಆಳ್ವಿಕೆ ಮಾಡಿದ್ದು ದಕ್ಷಿಣ ಭಾರತದ ಚರಿತ್ರೆಯಲ್ಲಿಯೇ ಮಹತ್ವದ ಸ್ಥಾನ ಅಲಂಕರಿಸಿದವನಾಗಿದ್ದಾನೆ. ಈತನು ಬಲಾಢ್ಯವಾದ ಸೈನ್ಯ ಮತ್ತು ನೌಕಾಪಡೆಯನ್ನು ಹೊಂದಿದ್ದು, ಇಡೀ ದಕ್ಷಿಣ ಭಾರತ ಮತ್ತು ಉತ್ತರದಲ್ಲಿಯೂ ತನ್ನ ವಿಜಯ ಯಾತ್ರೆಯನ್ನು ಆಚರಿಸಿಕೊಂಡವನಾಗಿದ್ದಾನೆ. ಪಾಂಡ್ಯರು, ಚೇರರು ಮೊದಲಾದ ಅರಸರನ್ನು ಧಮನ ಮಾಡಿ ತನ್ನ ಸಾಮಂತರನ್ನಾಗಿಸಿಕೊಂಡಿದ್ದನು. ಕಲ್ಯಾಣ ಚಾಳುಕ್ಯರೊಂದಿಗೆ ನಿರಂತರ ಸಂಘರ್ಷ ಮಾಡಿ ತನ್ನ ಸಾಮ್ರಾಜ್ಯವನ್ನು ತುಂಗಭದ್ರಾ ನದಿಯವರೆಗೂ ವಿಸ್ತರಿಸಿಕೊಂಡಿದ್ದನು. ಈತನು ಸಾಂಸ್ಕೃತಿಕ ರಂಗದಲ್ಲಿಯೂ ತನ್ನ ಪ್ರಾಬಲ್ಯ ಮೆರೆದ ವ್ಯಕ್ತಿಯಾಗಿದ್ದಾನೆ. ಶೈವಧರ್ಮದ ಹಲವು ದೇವಾಲಯಗಳನ್ನು ನಿರ್ಮಿಸುವುದರೊಂದಿಗೆ ಎಲ್ಲಾ ಧರ್ಮದವರನ್ನು ಸಮಾನ ರೀತಿಯಿಂದ ನೋಡಿದ ವ್ಯಕ್ತಿಯಾಗಿದ್ದಾನೆ. ಈತನು ಗಂಗೈಕೊಂಡ ಚೋಳಪುರಂನಲ್ಲಿ ನಿರ್ಮಿಸಿದ ಶಿವಾಲಯ ಚೋಳ ಕಲಾ ವೈಭವದ ಆಗರವಾಗಿದೆ. ಈತನ ಆಸ್ಥಾನದಲ್ಲಿ ಅನೇಕ ಕವಿಪುಂಗವರು ನೆಲೆಸಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಈತನು ಧರಿಸಿದ ಅನೇಕ ಬಿರುದುಗಳಿಂದ ಈತನೊಬ್ಬ ಮಹಾ ಸಾಮ್ರಾಟನೆಂದು, ಭಾರತದ ಪ್ರಖ್ಯಾತ ಆಕ್ರಮಣಕಾರನೆಂದು ಡಿ.ಸಿ.ಸರ್ಕಾರ್ ರವರು ಈತನ ಪರಾಕ್ರಮವನ್ನು ಗುಣಗಾನ ಮಾಡಿದ್ದಾರೆ.

**ಚೋಳರ ಕೊಡುಗೆಗಳು :**

ಕ್ರಿ.ಶ. ೮೫೦ರಲ್ಲಿ ವಿಜಯಾಲಯನಿಂದ ಸ್ಥಾಪಿತವಾದ ಚೋಳವಂಶವು ಕ್ರಿ.ಶ. ೧೦೭೧ರ ವರೆಗೆ ಪ್ರಾಬಲ್ಯವನ್ನು ಮೆರೆಯಿತು. ಒಂದನೇ ಕುಲೋತ್ತುಂಗ ಅಧಿಕಾರಕ್ಕೆ ಬರುವವರೆಗೂ ಚೋಳ ಅಧಿಪತ್ಯ ವಿಜೃಂಭಿಸಿತು. ಎರಡು ಶತಮಾನಗಳಿಗೂ ಹೆಚ್ಚು ಕಾಲದ ಚೋಳರ ಆಳ್ವಿಕೆಯು ದಕ್ಷಿಣ ಭಾರತದಲ್ಲಿಯೇ ಚಿರಸ್ಮರಣೀಯ ಅಧ್ಯಾಯವೆನಿಸಿದೆ. ಇವರ ಕೊಡುಗೆಗಳನ್ನು ಈ ಮುಂದಿನಂತೆ ಹೇಳಲಾಗಿದೆ.

**ಆಡಳಿತ ವ್ಯವಸ್ಥೆ :**

ಚೋಳರು ವಿಸ್ತಾರವಾದ ಸ್ರಾಮ್ರಾಜ್ಯವನ್ನು ನಿರ್ಮಿಸಿ ಶತಮಾನಗಳ ಕಾಲ ಉತ್ತಮವಾದ ಆಡಳಿತ ವ್ಯವಸ್ಥೆಯನ್ನು ಏರ್ಪಡಿಸಿದ್ದರು. ಇವರ ಆಡಳಿತವು

ವಿಕೇಂದ್ರಿಕರಣಕ್ಕೆ ಹೆಸರುವಾಸಿಯಾಗಿದ್ದು, ದಕ್ಷತೆಯಿಂದ ಕೂಡಿತ್ತು. ಕೇಂದ್ರಾಡಳಿತ, ಪ್ರಾಂತೀಯ ಆಡಳೀತ ಮತ್ತು ಸ್ಥಳೀಯ ಆಡಳಿತಗಳಾಗಿದ್ದವು. ವಂಶ ಪಾರಂಪರ್ಯ ರಾಜಪ್ರಭುತ್ವ ಚೋಳ ಸಾಮ್ರಾಜ್ಯದಲ್ಲಿತ್ತು. ಅರಸನಿಂದ ನೇಮಿಸಲ್ಪಡುತ್ತಿದ್ದ ಯುವರಾಜ ಉತ್ತರಾಧಿಕಾರಿಯಾಗಿ ಅಧಿಕಾರವನ್ನು ವಹಿಸಿಕೊಳ್ಳುತ್ತಿದ್ದನು. ಕೆಲವು ಸಂದರ್ಭದಲ್ಲಿ ಅರಸರಾಜ ಕುಮಾರರನ್ನು ರಾಜ್ಯದ ಕೆಲಭಾಗಗಳಲ್ಲಿ ರಾಜಪ್ರತಿನಿಧಿಗಳಾಗಿ ನೇಮಿಸುತ್ತಿದ್ದನು. ಆಡಳಿತದ ಉಸ್ತುವಾರಿಯನ್ನು ಸ್ವತಃ ಅರಸನೇ ನೋಡಿಕೊಳ್ಳಬೇಕಾಗಿತ್ತು. ಆಡಳಿತದ ಅವಶ್ಯಕತೆಗನುಗುಣವಾಗಿ ಅರಸ ಆದೇಶಗಳನ್ನು ಹೊರಡಿಸುತ್ತಿದ್ದನು. ಸಲಹೆಯನ್ನು ಪಡೆಯುವುದಕ್ಕಾಗಿ ಪ್ರಮುಖ ಇಲಾಖೆಗಳ ಮುಖ್ಯಸ್ಥರನ್ನು ಒಳಗೊಂಡ ಮಂತ್ರಿಮಂಡಲವನ್ನು ಅರಸಹೊಂದಿರುತ್ತಿದ್ದನು. ರಾಜ್ಯದಲ್ಲಿ ಆಡಳಿತವನ್ನು ನಿರ್ವಹಿಸುವುದಕ್ಕಾಗಿ ಅರಸ ಮೇಲ್ವರ್ಗದ ಪೆರುಂದನಂ ಹಾಗೂ ಕೆಳವರ್ಗದ ಸಿರುಂದನಂ ಎಂಬ ಅಧಿಕಾರಿ ವರ್ಗವನ್ನು ನೇಮಕ ಮಾಡಿಕೊಳ್ಳುತ್ತಿದ್ದನು.

ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ಮಂಡಲಗಳಾಗಿ [ಪ್ರಾಂತ್ಯ] ವಿಭಜಿಸಲಾಗಿತ್ತು. ಇಡೀ ಚೋಳ ಸಾಮ್ರಾಜ್ಯವನ್ನು ಆರು ಪ್ರಾಂತ್ಯಗಳಾಗಿ ವಿಭಜಿಸಿಲಾಗಿತ್ತು. ಪ್ರತಿ ಪ್ರಾಂತದಲ್ಲಿ ಆಡಳಿತವನ್ನು ನೋಡಿಕೊಳ್ಳುವುದಕ್ಕೆ ರಾಜಪ್ರತಿನಿಧಿಯನ್ನು ನೇಮಿಸುತ್ತಿದ್ದನು. ಈತನು ಸಾಮಾನ್ಯವಾಗಿ ರಾಜ ಕುಟುಂಬಕ್ಕೆ ಸೇರಿದವನಾಗಿರುತ್ತಿದ್ದನು. ಮಂಡಲಗಳನ್ನು ವಿಭಾಗಗಳಾಗಿ [ಒಳನಾಡು ಅಥವಾ ಕೊಟ್ಟಂ], ವಿಭಾಗಗಳನ್ನು ಜಿಲ್ಲೆ [ನಾಡು]ಗಳಾಗಿ ವಿಭಜಿಸಲಾಗಿತ್ತು. ನಂತರದ ಆಡಳಿತಾತ್ಮಕ ಘಟಕವೆಂದರೆ ಕುರ್ರಂ [ಗ್ರಾಮಗಳ ಒಕ್ಕೂಟ], ದೊಡ್ಡ ಗ್ರಾಮಗಳ ಆಡಳಿತ ಘಟಕವನ್ನು ತಣಿಯೂರ್ ಕುರ್ರಂ ಎಂದು ಕರೆಯಲಾಗಿತ್ತು. ಹಾಗೆಯೇ ಗ್ರಾಮಾಡಳಿತದಲ್ಲಿ ಉರ್ ಮತ್ತು ಸಭಾ ಎರಡು ರೀತಿಯ ಸಭೆಗಳಿದ್ದವು.

**ಸಾಮಾಜಿಕ ವ್ಯವಸ್ಥೆ :**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಈ ನಾಲ್ಕು ವರ್ಣಗಳೆಂಬ (ಚತುವರ್ಣ) ಪದ್ಧತಿ ರೂಢಿಯಲ್ಲಿತ್ತು. ಜಾತಿ ಪದ್ಧತಿ ತುಂಬಾ ಕಠಿಣವಾಗಿದ್ದು, ವೇದಾಧ್ಯಯನ, ಅಗ್ರಹಾರ, ಬ್ರಹ್ಮಪುರಿ, ದೇವಾಲಯಗಳ ಆಡಳಿತ, ಒಡೆತನ ಹೊಂದಿದ್ದ ಬ್ರಾಹ್ಮಣರು ಸಮಾಜದ ಎಲ್ಲಾ ರಂಗಗಳಲ್ಲಿ ಪ್ರಾಬಲ್ಯಗಳಿಸಿದ್ದರು. ಚಿದಂಬರಂ ದೇವಾಲಯದಲ್ಲಿ ಮೂರು ಸಾವಿರ ಜನ ಬ್ರಾಹ್ಮಣ ಅರ್ಚಕರಿದ್ದರು. ಇವರ ನಂತರದ ಸ್ಥಾನ ಕ್ಷತ್ರಿಯರದು. ವೈಶ್ಯರು ವ್ಯಾಪಾರ, ಕೃಷಿಯಲ್ಲಿ ನಿರತರಾಗಿರುವ ಜೊತೆಗೆ ಆಡಳಿತ ಹುದ್ದೆಗಳನ್ನು ಪಡೆದುಕೊಂಡಿದ್ದರು. ಈ ಮೇಲಿನ ಮೂರು ವರ್ಗದವರ ಸೇವೆ ಮಾಡುತ್ತಿದ್ದ ಶೂದ್ರರ ಸ್ಥಿತಿ ತುಂಬಾ ಶೋಚನೀಯವಾಗಿತ್ತು. ಇವರಿಗೆ ಆಸ್ತಿ, ವೇದಪಠಣ ಮಾಡುವ ಹಕ್ಕು ಇರಲಿಲ್ಲ.

ಪಂಚಮರೆಂದು ಕರೆಯುವ ಅಸ್ಪೃಶ್ಯರಲ್ಲಿ ಇಡಂಗೈ ಅಂದರೆ ಆಧಿ ಕರ್ನಾಟಕ (ಎಡೆಗೈಯವರು), ವಲಂಗೈ ಅಂದರೆ ಆದಿದ್ರಾವಿಡ ಜಾತಿಗೆ ಸೇರಿದವರು ಎಂಬ ಎರಡು ಜಾತಿಗಳಿದ್ದವು. ಇವರು ಸಮಾಜದಿಂದ ಬಹಿಷ್ಕೃತರಾಗಿದ್ದರು. ಇವರಿಬ್ಬರಲ್ಲಿ ಗುಲಾಮಗಿರಿ ಪದ್ಧತಿ ರೂಢಿಯಲ್ಲಿತ್ತು. ಈ ಮೇಲಿನ ಜಾತಿಗಳ ಜೊತೆಗೆ ಶೇಠಿಗಳು, ಕೈಕೊಳರು, ರಥಕಾರರು, ಚೆಟ್ಟಿಯಾರರೆಂಬ ಮೊದಲಾದ ಉಪ ಜಾತಿಗಳಿದ್ದವು. ಇವರ ನಡುವೆ ಜಾತಿಭೇದ ಬಾವನೆ ಅತಿಯಾಗಿತ್ತು. ಅಂದಿನ ದಿನಮಾನಗಳಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿದ್ದವು.

ವಿವಾಹವು ಪವಿತ್ರ ಬಂಧನವಾಗಿತ್ತೇ ಹೊರತು ವ್ಯವಹಾರಿಕವಾಗಿರಲಿಲ್ಲ. ಬಾಲ್ಯ ವಿವಾಹ, ಬಹುಪತ್ನಿತ್ವ, ಪದ್ಧತಿಗಳು ಮೇಲ್ವರ್ಗದಲ್ಲಿ ರೂಢಿಯಲ್ಲಿದ್ದವು ಏಕಪತ್ನಿತ್ವ ಜನಪ್ರಿಯವಾಗಿದ್ದು, ಪರ್ದಾಪದ್ಧತಿ, ಅಂತರ ಜಾತಿಯ ವಿವಾಹಗಳು, ವಿಧವಾ ವಿವಾಹಗಳು ಇರಲಿಲ್ಲ. ಸತಿ ಸಹಗಮನ ಪದ್ಧತಿ ರೂಢಿಯಲ್ಲಿದ್ದು, ಒಂದನೇ ರಾಜೇಂದ್ರ ಚೋಳನು ತೀರಿಕೊಂಡಾಗ ಆತನ ರಾಣಿ ವೀರಮಹಾದೇವಿ ಸತಿ ಸಹಗಮನ ಆಚರಿಸಿದಳು. ದೇವಾಲಯಗಳಲ್ಲಿ ದೇವರ ಸೇವೆ, ನೃತ್ಯ, ಸಂಗೀತ ಕಾರ್ಯಕ್ರಮಗಳಿಗೆಂದು ದೇವದಾಸಿಯರನ್ನು ಇರಿಸಿಕೊಂಡಿದ್ದರು. ಕೆಳವರ್ಗದ ಸ್ತ್ರೀಯರಿಗೆ ಸಾಮಾಜಿಕವಾಗಿ, ಧಾರ್ಮಿಕವಾಗಿ ಸಮಾನತೆಗಳು ಇರಲಿಲ್ಲ.

**ಆರ್ಥಿಕ ವ್ಯವಸ್ಥೆ :**

ಚೋಳರ ಕಾಲದ ಅರ್ಥವ್ಯವಸ್ಥೆಯು ಸಂಪೂರ್ಣವಾಗಿ ಕೃಷಿಯನ್ನು ಅವಲಂಬಿಸಿತ್ತು. ಈ ಕಾಲದ ಪ್ರಧಾನ ವೃತ್ತಿ ಕೃಷಿಯೇ ಆಗಿತ್ತು. ಕೃಷಿಕರು ಕಾರ್ಮಿಕರನ್ನು ಬಳಸಿಕೊಂಡು ಕಾಡನ್ನು ಕಡಿದು ಅರಣ್ಯವನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸುವ ಕಾರ್ಯದಲ್ಲಿ ನಿರತರಾಗುತ್ತಿದ್ದರು. ಇದರ ಪರಿಣಾಮವಾಗಿ ಪಶುಪಾಲನೆ ಮೊದಲಿದ್ದ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಧಾರ್ಮಿಕ ಸಂಸ್ಥೆಗಳು, ಅಧಿಕಾರಿಗಳು, ಶ್ರೀಮಂತರೂ ಭೂಮಾಲಿಕರಾಗಿದ್ದು ರೈತರಿಂದ ಸಾಗುವಳಿಯನ್ನು ಮಾಡಿಸುತ್ತಿದ್ದರು. ಭೂಮಿಯನ್ನು ಸಾಗುವಳಿ ಮಾಡಲು ಎತ್ತು ಮತ್ತು ಕೋಣಗಳನ್ನು ಬಳಸಿಕೊಳ್ಳುತ್ತಿದ್ದರು. ಇದಕ್ಕೆ ಹಾರೆ, ಪಿಕಾಸು, ಗುದ್ದಲಿ, ಕತ್ತಿ ಹಾಗೂ ಕಬ್ಬಿಣದ ಹಿಡಿ ಮತ್ತು ಕೊಂಡಿಯಿರುವ ನೊಗ್ಗ, ನೇಗಿಲನ್ನು ಉಪಯೋಗಿಸುತ್ತಿದ್ದರು. ಭತ್ತ, ಕಬ್ಬು ಪ್ರಧಾನ ಬೆಳೆಗಳಾಗಿದ್ದು, ದ್ವಿದಳ ಧಾನ್ಯಗಳನ್ನು ಬೆಳೆಯುತ್ತಿದ್ದರು.

ಚೋಳ ಅರಸರು ಕೃಷಿ, ನೀರಾವರಿಗೆ ವಿಶೇಷ ಪ್ರೋತ್ಸಾಹ ನೀಡಿದರು. ಭೂಮಿಯ ಒಡೆಯನನ್ನು ವೆಲ್ಲಾಳರು ಎಂದು ಕರೆಯುತ್ತಿದ್ದರು. ಭೂಕಂದಾಯ ಉತ್ಪನ್ನದ ೨/೩ ಮತ್ತು ೧/೬ ಭಾಗದವರೆಗೆ ರಾಜ್ಯ ಖಜಾನೆಗೆ ಸಲ್ಲಿಸಬೇಕಿತ್ತು. ಇರೈ

ಮತ್ತು ಕರೈ ಎಂಬ ಎರಡು ಬಗೆಯ ವಾರ್ಷಿಕ ಭೂಕಂದಾಯವನ್ನು ಕೃಷಿಕರು ಸಲ್ಲಿಸಬೇಕಿತ್ತು. ರಾಜನ ಆದೇಶದಂತೆ ಕೃಷಿಕರಿಂದ ತೆರಿಗೆ ವಸೂಲಿ ಮಾಡುವವರು ಜನರನ್ನು ಯಾವುದೇ ರೀತಿಯಲ್ಲಿ ಹಿಂಸಿಸಬಾರದಿತ್ತು. ಕಂದಾಯವನ್ನು ಧಾನ್ಯ ಅಥವಾ ಹಣದ ರೂಪದಲ್ಲಿ ವಸೂಲಿ ಮಾಡಲಾಗುತ್ತಿತ್ತು. ಭೂಕಂದಾಯದ ಜೊತೆಗೆ ಗಣಿ ತೆರಿಗೆ, ವೃತ್ತಿ ತೆರಿಗೆ ಸುಂಕ ಮತ್ತು ಜಾತಿ ಶುಲ್ಕಗಳು, ನ್ಯಾಯಾಲಯದ ದಂಡ ಮೊದಲಾದ ಮೂಲಗಳಿಂದ ಸರ್ಕಾರಕ್ಕೆ ಆದಾಯ ಸಂದಾಯವಾಗುತ್ತಿತ್ತು.

ಚೋಳರ ಕಾಲದಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಸಮೃದ್ಧಿಯಾಗಿ ಬೆಳೆವಣಿಗೆಯಾಯಿತು. ದೇಶಿಯ ಮತ್ತು ವಿದೇಶಿಯ ವ್ಯಾಪಾರ ಬಿರುಸಾಗಿ ನಡೆಯುತ್ತಿತ್ತು. ಆಂಧ್ರದ ವೆಂಗಿಮಂಡಲ, ಮತ್ತು ಕ್ವಿಲಾನ್‌ಗಳು ಮಲಬಾರ್ ಕರಾವಳಿಯಲ್ಲಿದ್ದವು. ಹಾಗೆಯೇ ಪೂರ್ವಕರಾವಳಿಯಲ್ಲಿ ಮಹಾಬಲಿಪುರಂ, ಕಾವೇರಿ ಪಟ್ಟಣಂ, ಶಾಲಿಮಾರ್‌ಗಳಾಗಿದ್ದವು. ಈ ದಖನ್ ಪ್ರಸ್ಥಭೂಮಿಯಿಂದಲೇ ಚೀನಾಕ್ಕೆ ಬಟ್ಟೆ, ಮಸಾಲೆಗಳು, ಔಷಧಗಳು, ರತ್ನಗಳು, ಹಸ್ತಿದಂತ, ಕೋಡು ಮತ್ತು ಕರ್ಪೂರಗಳನ್ನು ರಫ್ತು ಮಾಡಲಾಗುತ್ತಿತ್ತು. ಸಮುದ್ರ ತೀರದ ಜನರಿಂದ ಉಪ್ಪು ಮತ್ತು ಮೀನಿಗೆ ವಿಶೇಷ ಬೇಡಿಕೆಯಿತ್ತು. ಉಪ್ಪನ್ನು ತಯಾರಿಸುವವರಿಗೆ ಉಮಾನ್‌ಚಟ್ಟು ಎಂದು, ಕಾಳು ಮಾರುವವರನ್ನು ಕೂಲಮಕ್ಕಾಮ್ ಎಂದು, ಬಟ್ಟೆ ಮಾರುವವರಿಗೆ ಅರುವೈವನಿಕ್ಕಾಮ್ ಎಂದು, ಚಿನ್ನದ ವ್ಯಾಪಾರಿಗಳಿಗೆ ಪೊನುವನಿಕ್ಕಾಮ್ ಎಂದು, ಸಕ್ಕರೆ ವ್ಯಾಪಾರಿಗಳಿಗೆ ಪನಿತವನಿಕ್ಕಾಮ್ ಎಂದು ಕರೆಯುತ್ತಿದ್ದರು. ರೋಮ್, ಈಜಿಪ್ತ್, ಅಲೆಕ್ಸಾಂಡ್ರಿಯಾ, ಚೀನಾ, ಸುಮಾತ್ರ, ಜಾವಾ, ಅರೇಬಿಯಾ ಹಾಗೂ ಪರ್ಶಿಯನ್ ಸಮುದ್ರದ ಸುತ್ತ ಮುತ್ತಲಿನ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಚೋಳರು ಹೊಂದಿದ್ದರೆಂದು ತಿಳಿದುಬರುತ್ತದೆ.

ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಸಂಘಗಳು ಪ್ರಧಾನ ಪಾತ್ರವಹಿಸಿದ್ದವು ಮಣಿ ಗ್ರಾಮಮ್ ಹಾಗೂ ವಾಲಂಜಿಯಾರ್ ಎಂಬ ವರ್ತಕ ಸಂಘಗಳಾಗಿದ್ದು, ನೇಕಾರ, ಅಕ್ಕಸಾಲಿಗ, ಕಲ್ಲುಕುಟಿಗ, ಕಮ್ಮಾರ ಮೊದಲಾದ ವಿವಿಧ ವೃತ್ತಿ ಸಂಘಗಳಿದ್ದವು.

ದೇಶೀಯ ವ್ಯಾಪಾರದಲ್ಲಿ ಭತ್ತವನ್ನು ಆಧಾರವಾಗಿಟ್ಟುಕೊಂಡು ವಸ್ತುವಿನಿಮಯ ಪದ್ಧತಿ ಆಚರಣೆಯಲ್ಲಿದ್ದರೂ ಕೂಡ ದೂರದ ಹಾಗೂ ಹೆಚ್ಚು ಬೆಲೆ ಬಾಳುವ ವಸ್ತುಗಳನ್ನು ಕೊಳ್ಳಲು ನಾಣ್ಯಗಳನ್ನು ಬಳಸುತ್ತಿದ್ದರು. ಮಡೈ ಅಥವಾ ಪೊನ್ ನಾಣ್ಯವೇ ಪ್ರಧಾನವಾದ ಸುವರ್ಣ ನಾಣ್ಯವಾಗಿತ್ತು. ಇವುಗಳಲ್ಲದೇ ಕಾಸು, . . . . . ಮೊದಲಾದ ನಾಣ್ಯಗಳು ಚಲಾವಣೆಯಲ್ಲಿದ್ದವು.

**ಧಾರ್ಮಿಕ ವ್ಯವಸ್ಥೆ :**

ಚೋಳ ಅರಸರು ಜನತೆಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಕೊಟ್ಟಿದ್ದರು. ಇದರಿಂದ ಜನರಲ್ಲಿ ದೇವರು ಬಗ್ಗೆ ವೈಯಕ್ತಿಕ ಅಭಿಪ್ರಾಯ ಮೂಡುವಂತಾಯಿತು. ಇದರಿಂದ ಮೋಕ್ಷಕ್ಕೆ ಭಕ್ತಿ ಮಾರ್ಗವೇ ಮೂಲವೆಂಬುದನ್ನರಿತು ಅದಕ್ಕೆ ಹೆಚ್ಚಿನ ಆಧ್ಯತೆ ನೀಡಿದರು. ಆರ್ಯರು ಭಾರತಕ್ಕೆ ಬರುವುದಕ್ಕಿಂತ ಮುನ್ನವೇ ದಕ್ಷಿಣದಲ್ಲಿ ಶಿವ ಮತ್ತು ವಿಷ್ಣುವಿನ ಆರಾಧನೆ ರೂಢಿಯಲ್ಲಿತ್ತು.

ಚೋಳರು ಶೈವಮತದ ಅನುಯಾಯಿಗಳಾಗಿದ್ದರೂ ಕೂಡ, ವೈಷ್ಣವ, ಜೈನ ಹಾಗೂ ವೀರಶೈವ ಪಂಥಗಳು ಪ್ರಾಮುಖ್ಯತೆ ಪಡೆದಿದ್ದವು. ಹಾಗೆಯೇ ಇವರ ಕಾಲದಲ್ಲಿಯೇ ಕಾಳಾಮುಖ, ಕಾಪಾಲಿಕ ಮತ್ತು ಪಾಶುಪತ ಶೈವ ಪಂಥಗಳು ಹುಟ್ಟಿಕೊಂಡವು. ಒಂದನೇ ರಾಜೇಂದ್ರ ಚೋಳನ ಕಾಲಾವಧಿಯಲ್ಲಿ ಅನೇಕ ಶೈವ ಮತ್ತು ವಿಷ್ಣು ದೇವಾಲಯಗಳು ನಿರ್ಮಿತವಾದವು. ಅಂತಹವುಗಳಲ್ಲಿ ತಂಜಾವೂರು [ರಾಜ ರಾಜಚೋಳ ಕ್ರಿ.ಶ. ೯೮೫–೧೦೧೪] ಮತ್ತು ಗಂಗೈ ಕೊಂಡ ಚೋಳಪುರಂಗಳ ದೇವಾಲಯಗಳು ಪ್ರಮುಖವಾಗಿವೆ.

**ಸಾಹಿತ್ಯ ಮತ್ತು ಶಿಕ್ಷಣ :**

ಚೋಳ ಅರಸರ ಕಾಲದಲ್ಲಿ ಅನೇಕ ಕೃತಿಗಳು ರಚನೆಯಾದವು. ಕಂಬನ ರಾಮಾಯಣ (ತಮಿಳು), ಒಟ್ಟು ಕುಟ್ಟನ್‌ನ ಉತ್ತರಕಾಂಡದ ಕವಿತೆಗಳು, ಪುಗಳೆಂದಿಯ ನಳದಮಯಂತಿ ಕಥಾನಕವನ್ನು ರಚಿಸಿದರು. ಈ ಮೂವರನ್ನು ತಮಿಳು ಸಾಹಿತ್ಯದ ತ್ರಿರತ್ನಗಳೆಂದು ಕರೆಯುತ್ತಾರೆ. ಇವರಲ್ಲದೆ ಜಯಗೊಂಡರನ ಕಳಿಂಗ ತುಪ್ಪರಣಿ, ತಿರುಕ್ಕ ದೇವರನ [ಜೈನ ಕವಿ] ಜೀವಕ ಚಿಂತಾಮಣಿ, ರಾಮಾನುಜಾಚಾರ್ಯನ ವೇದಭಾಷ್ಯಗಳು (ಸಂಸ್ಕೃತ), ಗುಣವೀರನ ನೇಮಿನಂದಂ, ಶಂಕರಾಚಾರ್ಯರ ಬ್ರಹ್ಮಸೂತ್ರ ಭಾಷ್ಯ ಮೊದಲಾದವರ ಕೃತಿಗಳು ರಚನೆಗೊಂಡವು.

ಇದರೊಂದಿಗೆ ಚೋಳ ಅರಸರು ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದರು. ದೇವಾಲಯಗಳು ಮತ್ತು ಅವುಗಳಿಗೆ ಹೊಂದಿಕೊಂಡ ಮಠಗಳಲ್ಲಿ ವೇದಗಳು, ತತ್ವ ಶಾಸ್ತ್ರ, ವ್ಯಾಕರಣ, ಕಾವ್ಯಮೀಮಾಂಸೆ ಮತ್ತು ಧರ್ಮ ಶಾಸ್ತ್ರಗಳನ್ನು ಕುರಿತು ಸಂಸ್ಕೃತದಲ್ಲಿ ಬ್ರಾಹ್ಮಣರು ಬೋಧಿಸುತ್ತಿದ್ದರು. ಒಂದನೇ ರಾಜೇಂದ್ರ ಚೋಳನು ಎನ್ನಾಯಿರಂ ಎಂಬ ಸ್ಥಳದಲ್ಲಿ ವೈದಿಕ ಕಾಲೇಜನ್ನು ಸ್ಥಾಪಿಸಿದ್ದನು. ಅಲ್ಲಿ ೩೪೦ ವಿದ್ಯಾರ್ಥಿಗಳು, ೧೪ ಶಿಕ್ಷಕರಿದ್ದರು. ಹಾಗೆಯೇ ತ್ರಿಭುವನಿ, ತಿರಮುಕ್ಕುಡಲ್, ತಿರುವಡುತುರೈಗಳಲ್ಲಿ ವಿದ್ಯಾಶಾಲೆಗಳಿದ್ದವು.

**ಕಲೆ ಮತ್ತು ವಾಸ್ತು ಶಿಲ್ಪ :**

ರಾಜೇಂದ್ರ ಚೋಳನು ತನ್ನ ಅಧಿಕಾರಾವಧಿಯಲ್ಲಿ ಅನೇಕ ಭವ್ಯ ಮಂದಿರಗಳನ್ನು ನಿರ್ಮಿಸಿದ್ದನು. ಅವುಗಳಲ್ಲಿ ಗಂಗೈಕೊಂಡ ಚೋಳಪುರಂನಲ್ಲಿ ನಿರ್ಮಿಸಿದ ಶಿವ ದೇವಾಲಯ (ಕ್ರಿ.ಶ. ೧೦೩೦) ಸುಂದರವಾಗಿ ನಿರ್ಮಾಣಗೊಂಡಿದೆ. ಇದು ದ್ರಾವಿಡ ಶೈಲಿಯಲ್ಲಿದ್ದು, ೧೮೦ ಅಡಿ ಎತ್ತರವಿದೆ. ಇದರ ಒಳಭಾಗದಲ್ಲಿ ಲಕ್ಷ್ಮಿ, ಸರಸ್ವತಿ, ಗಣೇಶ, ಅರ್ಧನಾರೀಶ್ವರ, ನಂದಿ, ಹರಿಹರ, ನಟರಾಜ ಕಾರ್ತಿಕೇಯ, ಉಮಾಮಹೇಶ್ವರ, ವಿಷ್ಣು, ಮಾರ್ಕಂಡೇಯ, ಮಹೀಷಮರ್ದಿನಿ, ಬ್ರಹ್ಮ ಮೊದಲಾದ ವಿಗ್ರಹಗಳನ್ನು ಕಲಾತ್ಮಕವಾಗಿ ನಿರ್ಮಿಸಲಾಗಿದೆ. ದೇವಾಲಯದ ಮುಖಮಂಟಪದಲ್ಲಿ ಇಬ್ಬರು ದ್ವಾರಪಾಲಕರನ್ನು ಕೂಡ ಅತ್ಯಂತ ಸುಂದರವಾಗಿ ನಿರ್ಮಿಸಿ ಜೋಡಿಸಲಾಗಿದೆ. ಹಾಗೆಯೇ ದೇವಾಲಯದ ಪ್ರಾಕಾರದಲ್ಲಿ ಪುಷ್ಕರಣಿಯನ್ನು ನಿರ್ಮಿಸಿ, ಅದಕ್ಕೆ ಗಂಗಾನದಿಯಿಂದ ತಂದ ಜಲವನ್ನು ಸುರಿದು ಅದನ್ನು ಪವಿತ್ರಗೊಳಿಸಲಾಗಿತ್ತಂತೆ.

ಈ ದೇವಾಲಯದಲ್ಲಿ ವಿವಿಧ ಕಂಚಿನ ವಿಗ್ರಹಗಳನ್ನು ಸ್ಥಾಪಿಸಲಾಗಿದ್ದು, ಅವುಗಳಲ್ಲಿ ಸೋಮಸ್ಕಂದ ಮತ್ತು ಆತನ ಪತ್ನಿ ದೇವಯಾನಿ (ಸೇನಾವತಿ), ಚಂಡೇಶ್ವರ, ನವಗ್ರಹ ಮೂರ್ತಿಗಳು ಮೊದಲಾದವುಗಳಿವೆ. ಈ ದೇವಾಲಯದ ಸಭಾಮಂಟಪ ೧೭೦ ಕಂಬಗಳನ್ನೊಳಗೊಂಡಿದ್ದರೂ ಎತ್ತರದಲ್ಲಿ ಕಿರಿದಾಗಿರುವುದು ಇದರ ವಿಶೇಷವಾಗಿದೆ.

ಖ್ಯಾತ ಕಲಾ ವಿಮರ್ಶಕ ಪರ್ಸಿಬ್ರೌನ್ ಹೇಳುವಂತೆ ತಂಜಾವೂರಿನ ರಾಜರಾಜೇಶ್ವರ ದೇವಾಲಯ ಮತ್ತು ಗಂಗೈಕೊಂಡ ಚೋಳಪುರಂನಲ್ಲಿರುವ ಶಿವ ದೇವಾಲಯಗಳು ಚೋಳರ ಕಲಾಭವ್ಯತೆಯ ಹಿರಿಮೆಗೆ ಸಾದೃಶ್ಯವಾಗಿ ನಿಂತಿವೆ. ಇವೆರಡು ಚೋಳರ ಮೇರು ಕೃತಿಗಳಾಗಿದ್ದು, ತಂಜಾವೂರಿನ ರಾಜ ರಾಜೇಶ್ವರ ದೇವಾಲಯ ಶಕ್ತಿಯ ಸಂಕೇತವಾದರೆ, ಗಂಗೈಕೊಂಡ ಚೋಳಪುರಂನ ಶಿವ ದೇವಾಲಯ ಸೌಂದರ್ಯ ಮತ್ತು ಸೊಬಗಿನ ನಿಧಿಯಾಗಿದೆಯೆಂದು ಪ್ರತಿಕ್ರಿಸಿದ್ದಾರೆ.

**ಕೃತಜ್ಞತೆಗಳು :**

ಈ ಲೇಖನ ರಚಿಸಲು ಹಲವು ಇತಿಹಾಸ ಕೃತಿಗಳನ್ನು ಬಳಸಿಕೊಂಡಿದ್ದೇನೆ. ಆದುದರಿಂದ ಆಯಾ ಗ್ರಂಥಗಳ ಲೇಖಕರಿಗೆ ಕೃತಜ್ಞತೆಗಳು. ಹಾಗೆಯೇ ಮಸ್ಕಿಯ ಪಟ್ಟಣದ ಸುಳಿದಿಬ್ಬದ ಬಂಡೆಗಲ್ಲಿನ ಚೋಳರ ಶಾಸನ ಪ್ರತಿ ತೆಗೆಯುವಾಗ ನೆರವಾದ ಶ್ರೀ ದಿ.ದಾವಲಸಾಬ್ ನದಾಫ್ ಪ್ರಾಂಶುಪಾಲರು ಹಾಗೂ ಶ್ರೀ ಚನ್ನಬಸವ ವಸ್ತ್ರದ ಪಾಮನಕಲ್ಲೂರುರವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಆಕರಸೂಚಿ:**

೧. ಡಾ.ಚನ್ನಬಸಪ್ಪ ಮಲ್ಕಂದಿನ್ನಿ, ಮಸ್ಕಿ ಬಳಿ ಚೋಳರ ಶಾಸನ ಪತ್ತೆ, ವಿಜಯ ಕರ್ನಾಟಕ ದಿನ ಪತ್ರಿಕೆ, ದಿನಾಂಕ: ೧೬-೦೪-೨೦೧೩, ಪು-೦೫

೨. ಡಾ.ಚನ್ನಬಸಪ್ಪ ಮಲ್ಕಂದಿನ್ನಿ, ಮಸ್ಕಿ ಸುಳಿದಿಬ್ಬದಲ್ಲಿ ಚೋಳರ ಕಾಲದ ಶಾಸನ ಪತ್ತೆ, ಸಂಯುಕ್ತ ಕನಾಟಕ ದಿನಪತ್ರಿಕೆ, ದಿನಾಂಕ: ೨೦-೦೪-೨೦೧೩, ಪು-೦೯

೩. ಡಾ.ಚನ್ನಬಸಪ್ಪ ಮಲ್ಕಂದಿನ್ನಿ (ಲೇಖಕರು), ಮತ್ತೆ ಕರೆಯುತಿದೆ ಐತಿಹಾಸಿಕ ಮಸ್ಕಿ, ಕಲ್ಯಾಣ ನಾಡು [ಮಾಸ ಪತ್ರಿಕೆ], ೨೦೧೪, ಪು-೦೮-೦೯.

೪. ಡಾ.ಚನ್ನಬಸಪ್ಪ ಮಲ್ಕಂದಿನ್ನಿ (ಲೇಖಕರು), ಮಸ್ಕಿಯ ಪ್ರಾಚ್ಯಾವ ಶೇಷಗಳು, ಕರ್ನಾಟಕ ಲೋಚನ, ಸಂಪುಟ-೨೯, ಸಂಚಿಕೆ-೦೧, ಜನವರಿ-ಜೂನ್-೨೦೧೫, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ನರಸಿಂಹರಾಜ ಕಾಲೋನಿ, ಬೆಂಗಳೂರು.

೫. ಡಾ.ಚನ್ನಬಸಪ್ಪ ಮಲ್ಕಂದಿನ್ನಿ (ಲೇಖಕರು), ಮಸ್ಕಿಯ ಪ್ರಾಚ್ಯಾವಶೇಷಗಳು, ಸುದ್ಧಿಮೂಲ, (ದೀಪಾವಳಿ ವಿಶೇಷಾಂಕ)-೨೦೧೭, ಪು-೨೬ ಮತ್ತು ೪೭-೪೮.

೬. Prof. K.A. Nilakantasastri, The cholas, 2013, University of Madras, P-224.



# "ಪಾರ್ವರ ಪಿಳ್ಳೆಯ ಪೋದ ಜೀವಮಂ" ಪಂಪನ ಪ್ರಯೋಗಕ್ಕೆ ಒಂದು ವಿವರಣೆ



**ಚಂದ್ರಶೇಖರ್**

ಕನ್ನಡ ಕಾವ್ಯಪರಂಪರೆಗೆ ಮುನ್ನುಡಿ ಬರೆದ ಕವಿತಾ ಗುಣಾರ್ಣವ ಸರಸ್ವತೀ ಮಣಿಹಾರನಾದ ಆದಿಕವಿ ಮಹಾಕವಿ ಪಂಪ "ಮುನ್ನಿನ ಕಬ್ಬಮನೆಲ್ಲಮನಿಕ್ಕಿ ಮೆಟ್ಟಿ"- ಸಮಸ್ತ ಭಾರತವನ್ನು, ಆದಿಪುರಾಣ ಮಹಾಪ್ರಬಂಧವನ್ನು ರಚಿಸಿ "ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ" ಎಂಬ ಪ್ರಶಸ್ತಿಗೆ ಭಾಜನನಾದವನು .

ಕನ್ನಡದ ಹಿರಿಮೆಯ ಕವಿಯಾದ ಪಂಪನು ಅದ್ಭುತವಾದ ಪ್ರತಿಭಾಸಂಪನ್ನನಾಗಿದ್ದನು .ಅವನ ಪ್ರತಿಭೆಗೆ ಪೋಷಕವಾಗಿ ಅಗಾಧ ವ್ಯುತ್ಪತ್ತಿಯು ಇತ್ತು .ವೈದಿಕ –ಜೈನ, ಕನ್ನಡ –ಸಂಸ್ಕೃತ, ಜಾನಪದ –ಶಿಷ್ಟ, ಲೌಕಿಕ– ಧಾರ್ಮಿಕ, ಹೀಗೆ ವಿಭಿನ್ನ ಅನುಭವಗಳಿಂದ ರೂಪುಗೊಂಡ ಕವಿಯಾಗಿದ್ದವನು ಪಂಪ .

ಲೌಕಿಕ ಕಾವ್ಯವಾದ ವಿಕ್ರಮಾರ್ಜುನ ವಿಜಯ ಅವನಿಗೆ ಪ್ರಿಯವಾದ ಕಾವ್ಯ ."ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ" ಎಂದು ಹೇಳಿ ಕಥೆಯ "ಮೆಯ್ಗಿಡಲೀಯದೆ" ಸಮಸ್ತ ಭಾರತವನ್ನು ರಚಿಸಿದ್ದಾನೆ . ವ್ಯಾಸಭಾರತದ ಕಥಾಚೌಕಟ್ಟಿಗೆ ಭಂಗ ಬಾರದಂತೆ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ .ಸಂಸ್ಕೃತ ನಾಟಕಗಳು, ಭಾಗವತ ಪುರಾಣ, ಜನಪದ ಕತೆಗಳು –ಇವನ ಕಾವ್ಯಕ್ಕೆ ಪೋಷಣೆ ನೀಡಿವೆ .ಮಹಾಭಾರತವನ್ನು ವಿಕ್ರಮಾರ್ಜುನ ವಿಜಯ ಮಾಡಹೊರಟ ಪಂಪನು ಅರ್ಜುನನ ವೀರ ಪರಾಕ್ರಮಗಳನ್ನು ಹೊಗಳಲು ಅನೇಕ ಕಥಾನಕಗಳನ್ನು ಪೂರಕವಾಗಿ ಬಳಸಿದ್ದಾನೆ. ಪಂಪನು ಬಳಸಿರುವ ಅನೇಕ ಪ್ರಸಂಗಗಳು

ಮೂಲಭಾರತದಲ್ಲಿ ಇಲ್ಲ .ಕೃಷ್ಣನು ಕರ್ಣನ ಜನ್ಮ ವೃತ್ತಾಂತವನ್ನು ಅವನಿಗೆ ತಿಳಿಸುತ್ತಾ ದುರ್ಯೋಧನನಿಗೂ ಈ ವಿಚಾರ ಮೊದಲೇ ತಿಳಿದಿತ್ತು ಎಂದು ಹೇಳುವ 'ಸತ್ಯಂತಪರ ಪ್ರಸಂಗ' ವ್ಯಾಸ ಭಾರತದಲ್ಲಿ ಇಲ್ಲ .

ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಕಾವ್ಯದ ನಾಯಕನಾದ ಅರ್ಜುನನೊಡನೆ ಮೇಳಯಿಸಿ ಬರೆದದ್ದರಿಂದ ಅರ್ಜುನನ ಶೌರ್ಯ ಪರಾಕ್ರಮಗಳನ್ನು ಹೊಗಳಲು ಅನೇಕ ಪ್ರಸಂಗಗಳನ್ನು ಹೇಳುತ್ತಾನೆ .

'ವಿಕ್ರಮಾರ್ಜುನ ವಿಜಯ'ದ ಆರನೆಯ ಆಶ್ವಾಸದ ಎರಡನೆಯ ಪದ್ಯವು ಅರ್ಜುನನ ಶೌರ್ಯ ಪರಾಕ್ರಮಗಳನ್ನು ತಿಳಿಸುವ ಪ್ರಸಂಗವನ್ನು ಒಳಗೊಂಡಿದೆ .

ಖಾಂಡವ ವನ ದಹನ ನಂತರ ಅರ್ಜುನನ ಕೀರ್ತಿ ಎಲ್ಲೆಡೆ ಪಸರಿಸುತ್ತದೆ .ಈ ಸಂದರ್ಭದಲ್ಲಿ ಕವಿ ಅರ್ಜುನನ ಪರಾಕ್ರಮವನ್ನು ವರ್ಣಿಸುತ್ತಾ ಈ ಮಾತನ್ನು ಹೇಳಿದ್ದಾನೆ .

**"ತುಂಗ ತರಂಗ ಭಂಗುರಪಯೋಧಿಪರೀತಮಹಾಮಹೀತಳಾ**

**ಲಿಂಗಿತ ಕೀರ್ತಿಕೇಳ್ದು ಬಡ ಪಾರ್ವನ ಪುಯ್ಯಲೊರ್ಮೆ ಕೇಳ್ದನಾ**

**ವಂಗಮುಗುರ್ವು ಪರ್ವೆ ಜವನೊಳ್ ಸೆರಗಿಲ್ಲದೆ ಪೋಗಿತಾಗಿ ತಂ**

**ದಂ ಗಡ ವಿಕ್ರಮಾರ್ಜುನನೆ ಪಾರ್ವರ ಪಿಳ್ಳೆಯ ಪೋದ ಜೀವಮಂ."**

(ಮಹಾಸಾಗರದಿಂದ ಆವರಿಸಲ್ಪಟ್ಟ ಮಹಾಮಹಿಮ ಸ್ಥಳದಲ್ಲೆಲ್ಲ ಹಬ್ಬಿದ ಕೀರ್ತಿ ಹೊಂದಿದವನಾದ ಅರ್ಜುನನು ಒಮ್ಮೆ ಬಡ ಬ್ರಾಹ್ಮಣನೊಬ್ಬನ ಮೊರೆಯನ್ನು ಕೇಳಿ ವಿಕ್ರಮಾರ್ಜುನನು ಯಾರ ಸಹಾಯವೂ ಇಲ್ಲದೆ ಹೋಗಿ ಯಮನನ್ನು ಎದುರಿಸಿ ಆ ಬ್ರಾಹ್ಮಣನ ಮಗನ ಹೋದ ಜೀವವನ್ನು ಮರಳಿ ತಂದನಲ್ಲವೇ ?-

ಹೀಗೆ ಅರ್ಜುನನ ಶೌರ್ಯ ಪರಾಕ್ರಮವನ್ನು ತಿಳಿಸಲು ಈ ಪ್ರಸಂಗವನ್ನು ಕವಿ ಹೇಳಿದ್ದಾನೆ. ಹಂ.ಪ.ನಾಗರಾಜಯ್ಯನವರು ದ್ರಾವಿಡ ಭಾಷಾವಿಜ್ಞಾನದ ಪಾಠ ಮಾಡುತ್ತಿದ್ದ ಸಂದರ್ಭದಲ್ಲಿ ಹಳಗನ್ನಡದ ಪದಾದಿಯ 'ಪ'ಕಾರ ಕ್ರಮೇಣ 'ಹ'ಕಾರವಾಯಿತು ಎಂದು ಹೇಳುವ ಸಂದರ್ಭದಲ್ಲಿ "ಪಾರ್ವರ ಪಿಳ್ಳೆಯ ಪೋದ ಜೀವಮಂ"-ಎಂಬ ಸಾಲನ್ನು ಉದಾಹರಣೆ ನೀಡಿದ್ದರು. ಆದರೆ "ಪಂಪ ಭಾರತ" ವನ್ನು ಓದುವ ಸಂದರ್ಭದಲ್ಲೆಲ್ಲ ಈ ಭಾಗ ಬಂದಾಗ..

ಈ ಪಾರ್ವರ ಪಿಳ್ಳೆ"-ಯಾರು?.ಅವನ ಜೀವವನ್ನು ಅರ್ಜುನ ಉಳಿಸಿದ್ದು ಯಾವಾಗ? ಎಂಬುದು ಪ್ರಶ್ನೆಯಾಗಿತ್ತು.

ಅದಕ್ಕೆ ಸಮಾಧಾನಕರ ಉತ್ತರ ಸಿಕ್ಕಿರಲಿಲ್ಲ.

ಇದಕ್ಕೆ ಕಾವ್ಯದಲ್ಲಿ ಎಲ್ಲಿಯೂ ಹಿನ್ನೆಲೆಯನ್ನು ಕೊಟ್ಟಿಲ್ಲ .ವ್ಯಾಸ ಭಾರತದಲ್ಲೂ ಈ ಪ್ರಸಂಗವಿಲ್ಲ .

ಡಿ ಎಲ್ ನರಸಿಂಹಾಚಾರ್ ಅವರು ತಮ್ಮ 'ಪಂಪಭಾರತ ದೀಪಿಕೆ'ಯಲ್ಲಿ ಪ್ರತಿಪದಾರ್ಥವನ್ನು ಕೊಟ್ಟಿದ್ದಾರೇ ಹೊರತು ವಿವರಣೆಯನ್ನು ನೀಡಿಲ್ಲ . ಕನ್ನಡ ಸಂಸ್ಕೃತಿ ಇಲಾಖೆಯ ಪ್ರಕಟಣೆಯಾದ "ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ" ಕಾವ್ಯದ ಉಪೋದ್ಘಾತದಲ್ಲಿ ಬೆಳ್ಳಾವೆ ವೆಂಕಟನಾರಣಪ್ಪನವರು 'ಕಥಾವಸ್ತುವಿನಲ್ಲಿಯೂ ಪಾತ್ರ ರಚನೆಯಲ್ಲಿಯೂ ಕವಿಯೂ ಮಾಡಿರುವ ಮಾರ್ಪಾಟುಗಳು " ಎಂಬ ಉಪಶೀರ್ಷಿಕೆಯಡಿಯಲ್ಲಿ ಅನೇಕ ವಿಚಾರಗಳನ್ನು ಚರ್ಚಿಸಿದ್ದಾರೆ . ಅದರಲ್ಲಿ " ಜವನೊಳ್ ಸೆರಗಿಲ್ಲದೆ ಪೋಗಿ ತಾಗಿ ತಂದಂ ಗಡ ವಿಕ್ರಮಾರ್ಜುನನೆ ಪಾರ್ವರ ಪಿಳ್ಳೆಯ ಪೋದ ಜೀವಮಂ "-ಎಂಬ ಕಥೆಯು ವ್ಯಾಸಭಾರತದಲ್ಲಿ ಇಲ್ಲ ಎಂದು ಹೇಳಿ -ರಾಮನು ಶಂಭೂಕನೆಂಬ ತಪಸ್ವಿಯನ್ನು ಕಾರಣಾಂತರದಿಂದ ಕೊಂದು ಬ್ರಾಹ್ಮಣನೊಬ್ಬನ ಸತ್ತ ಮಗನನ್ನು ಬದುಕಿಸಿದ ಕತೆಯು ರಾಮಾಯಣದ ಉತ್ತರಕಾಂಡದ ಎಪ್ಪತ್ತಾರನೆಯ ಸರ್ಗದಲ್ಲಿ ಇದೆ ಎಂದು ಹೇಳಿದ್ದಾರೆ .

ಹಾಗೆಯೇ ವ್ಯಾಸಭಾರತದ ಶಾಂತಿ ಪರ್ವದ ೧೫೨ ನೆಯ ಅಧ್ಯಾಯದಲ್ಲಿಯೂ ಬ್ರಾಹ್ಮಣ ಬಾಲಕನ ಸಾವಿನ ಕತೆ ಇದೆ ಎಂದು ಹೇಳಿದ್ದಾರೆ.

ರಾಮಾಯಣದಲ್ಲಿ ಬರುವ ಶಂಭೂಕನ ಕತೆ ಅರ್ಜುನನ ಈ ಪ್ರಸಂಗಕ್ಕೆ ಹೊಂದಿಕೆಯಾಗುವುದಿಲ್ಲ. ಇನ್ನು ವ್ಯಾಸಭಾರತದ ಶಾಂತಿ ಪರ್ವದಲ್ಲಿ ಬರುವ ಬ್ರಾಹ್ಮಣ ಬಾಲಕನ ಕಥೆಗೂ ಅರ್ಜುನನಿಗೂ ಸಂಬಂಧ ಕಲ್ಪಿಸಲು ಆಗುವುದಿಲ್ಲ. ೨೦೧೮ ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿರುವ ಪ್ರೊ.ಶಿವರಾಮಯ್ಯನವರ 'ಪಂಪ ಭಾರತ' ಗದ್ಯಾನುವಾದದಲ್ಲೂ ಈ ಬಗ್ಗೆ ವಿವರಣೆ ಇಲ್ಲ.

ರನ್ನ ಕವಿಯೂ ಸಹ 'ಸಾಹಸ ಭೀಮ ವಿಜಯಂ'-ಕಾವ್ಯದಲ್ಲಿ ಅರ್ಜುನನ ಪರಾಕ್ರಮ ತಿಳಿಸಲು ಇದೇ ಘಟನೆಯನ್ನು ಹೇಳಿದ್ದಾನೆ.

**ಪರಿದಿಱಿದಂತಕನೊಳ್ ಪಾ**

**ರ್ವರ ಪಿಳ್ಳೆಯ ಪೋದ ಜೀವಮಂ ತಂದಂ ಬಂ**

**ದೆರೆಯೆ ಶಿಬಿಗಿತ್ತನಾ ಸ**

**ಸಚ್ಚರಿತಂ ಭುಜಬಲದೆ ಪಾಂಡವಂ ಖಾಂಡವಮಂ**

**(ರನ್ನನ ಗದಾಯುದ್ಧ, ದ್ವಿತೀಯಾಶ್ವಾಸ, ೩ ನೇ ಪದ್ಯ)**

ಪಂಪನ ಎಷ್ಟೋ ಪದ್ಯಗಳನ್ನು ಹಾಗೆಯೇ ಎತ್ತಿಕೊಂಡಿರುವ ರನ್ನನಲ್ಲಿ ಅದಕ್ಕೆ ಹಿನ್ನೆಲೆಯನ್ನು ನೋಡಲಾಗದು .ತೀ ನಂ ಶ್ರೀಯವರು ಗದಾಯುದ್ಧ ಸಂಗ್ರಹದಲ್ಲಿ ಈ ಪದ್ಯವನ್ನು ಬಿಟ್ಟಿದ್ದಾರೆ.

ಪಾರ್ವರ ಪಿಳ್ಳೆಯ ಪೋದ ಜೀವಮಂ- ಹಿನ್ನೆಲೆ ಏನು ಎಂದು ಹುಡುಕ ಹೊರಟಾಗ ಭಾಗವತದ ದಶಮಸ್ಕಂಧದ ಎಂಬತ್ತೊಂಬತ್ತನೇ ಅಧ್ಯಾಯದಲ್ಲಿ ಬ್ರಾಹ್ಮಣನೊಬ್ಬನ ಮಗನನ್ನು ರಕ್ಷಿಸಲು ಅರ್ಜುನನು ಪ್ರತಿಜ್ಞೆ ಮಾಡಿದ ಪ್ರಸಂಗವಿದೆ .ವಿಷ್ಣುವಿನ ಮಹಿಮೆಯನ್ನು ಸಾರುವ ಕಥೆಗಳ ಭಾಗವಾಗಿ ಈ ಕಥೆ ಬಂದಿದೆ.

(ಶ್ರೀ ಭಾಗವತ ಮಹಾಪುರಾಣ,ಮೂಲಶ್ಲೋಕ, ಪ್ರತಿಪದಾರ್ಥ ಸಹಿತ- ಸಂಪುಟ ೫, ಪುಟ ಸಂಖ್ಯೆ-೨೭೮ ಬರೆದವರು ಆಸ್ಥಾನ ವಿದ್ವಾನ್ ಮೋಟಗಾನಹಳ್ಳಿ ರಾಮಶೇಷ ಶಾಸ್ತ್ರಿಗಳು)

**ಆ ಕಥೆ ಹೀಗಿದೆ .**

ಕೃಷ್ಣನು ಒಮ್ಮೆ ದ್ವಾರಕೆಯಲ್ಲಿ ಅಶ್ವಮೇಧ ಮಾಡುತ್ತಾನೆ . ಪಾಂಡವರ ಆದಿಯಾಗಿ ರಾಜ ಮಹಾರಾಜರೆಲ್ಲ ಸೇರಿರುತ್ತಾರೆ .ಆಗ ಯಾಗಶಾಲೆಯ ಬಾಗಿಲಲ್ಲಿ ಬ್ರಾಹ್ಮಣನೊಬ್ಬ ನೃಪಕುಲ ದೋಷದಿಂದ ತನ್ನ ಪುತ್ರರು ಸತ್ತರು ಎಂದು ಗೋಳಿಡುತ್ತಿರುತ್ತಾನೆ. ಅರ್ಜುನನು ಕಾರಣ ಕೇಳಿದಾಗ ಬ್ರಾಹ್ಮಣನು" ನನ್ನ ಮಕ್ಕಳು ಹುಟ್ಟಿದೊಡನೆಯೇ ಸೂತಿಕಾಗೃಹದಿಂದ ಮಾಯವಾಗುತ್ತಿದ್ದಾರೆ, ಕಾರಣ ತಿಳಿಯುತ್ತಿಲ್ಲ "ಎನಲು ಅರ್ಜುನನು ಅವನ ಹುಟ್ಟುವ ಮಕ್ಕಳನ್ನು ರಕ್ಷಿಸುವುದಾಗಿ ಹೇಳುತ್ತಾನೆ. ತನ್ನಿಂದ ಆಗದಿದ್ದರೆ ಪ್ರಾಣತ್ಯಾಗ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾನೆ.ಬ್ರಾಹ್ಮಣನ ಪತ್ನಿಯ ಪ್ರಸವದ ದಿನ ಬರಲು ಅರ್ಜುನನು ಬಾಣಗಳಿಂದ ದಶದಿಕ್ಕುಗಳನ್ನು ಬಂಧಿಸುತ್ತಾನೆ. ಆದರೆ ಈ ಬಾರಿಯೂ ಮಗುವು ಮಾಯವಾಗುತ್ತದೆ. ಬ್ರಾಹ್ಮಣನು ದುಃಖಿಸಲು ಅವನಿಗೆ ಧೈರ್ಯ ಹೇಳಿದ ಅರ್ಜುನನು "ಯಮನ ಪಟ್ಟಣವನ್ನು ನಾಶ ಮಾಡಿ ನಿನ್ನ ಮಗನನ್ನು ತರುತ್ತೇನೆ"- ಎಂದು ಹೇಳಿ ಯಮಲೋಕ ಇಂದ್ರಲೋಕದಲ್ಲಿ ಹುಡುಕಲು, ಮಗುವು ಕಾಣದಿರಲು ಪ್ರತಿಜ್ಞೆಗೆ ಭಂಗವಾಯಿತೆಂದು ಅಗ್ನಿಪ್ರವೇಶಕ್ಕೆ ಸಿದ್ಧನಾದನು. ಆಗ ಕೃಷ್ಣನು ಅರ್ಜುನನಿಗೆ ಧೈರ್ಯ ಹೇಳಿ ಅವನನ್ನು ಆಕಾಶಮಾರ್ಗದಲ್ಲಿ ಕರೆದುಕೊಂಡು ವೈಕುಂಠ ಸೇರುತ್ತಾನೆ.

ಆಗ ವಿಷ್ಣುವು ನರ ನಾರಾಯಣರನ್ನು (ಅರ್ಜುನ ಕೃಷ್ಣರನ್ನು)

ನೋಡುವ ಕಾರಣದಿಂದ ಆ ಬ್ರಾಹ್ಮಣನ ಮಕ್ಕಳನ್ನು ತಾನೇ ಅಪಹರಿಸಿದೆನೆಂದು ಹೇಳುತ್ತಾನೆ. ಬ್ರಾಹ್ಮಣನ ಎಲ್ಲ ಮಕ್ಕಳನ್ನು ಹಿಂತಿರುಗಿಸುತ್ತಾನೆ

.ಬ್ರಾಹ್ಮಣನಿಗೆ ಆ ಮಕ್ಕಳನ್ನು ತಲುಪಿಸುತ್ತಾರೆ .ಯಜ್ಞ ಕಾರ್ಯವು ಮುಂದುವರಿಯುತ್ತದೆ.

ಬ್ರಾಹ್ಮಣನು ಸಂತುಷ್ಟನಾಗುತ್ತಾನೆ.

ಈ ಕಥೆಯನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಪಂಪನ ಅರ್ಜುನನ ಶೌರ್ಯ-ಪರಾಕ್ರಮ ತಿಳಿಸಲು ಬಳಸಿಕೊಳ್ಳುತ್ತಾನೆ.

ಯಕ್ಷಗಾನ ಪ್ರಸಂಗಗಳಲ್ಲಿ "ಶ್ರೀಕೃಷ್ಣ ದಿನಾಶ್ವಮೇದ ಪ್ರಸಂಗ".

ಹಾಗೆಯೇ "ಆದಿ ನಾರಾಯಣ ಪ್ರಸಂಗ"ಗಳು ಈ ಕಥೆಯನ್ನು ಒಳಗೊಂಡಿದೆ.

ಪಂಪ ಕವಿಯು ತನ್ನ ನಾಯಕನ ಪಾತ್ರಪೋಷಣೆಗಾಗಿ ಈ ಪ್ರಸಂಗವನ್ನು ಬಳಸಿಕೊಂಡಿದ್ದಾನೆ.



# ನಿತ್ಯೋಪಯೋಗಿ ನ್ಯಾಯಗಳು



ಡಾ. ಎಚ್. ಎಸ್. ಅನಂತನಾರಾಯಣ

ಸಂಸ್ಕೃತದ 'ನ್ಯಾಯ' ಎಂಬ ಶಬ್ದಕ್ಕೆ ಕೋಶದಲ್ಲಿ ಹಲವು ಅರ್ಥಗಳನ್ನು ಕೊಟ್ಟಿದೆ: ಉಚಿತ, ಸಮಂಜಸ, ಯೋಗ್ಯ, ತಕ್ಕ, ಯುಕ್ತಿ, ಕಟ್ಟು, ಕಟ್ಟಳೆ, ಸಂಪ್ರದಾಯ, ಸಿದ್ಧಾಂತ. ಇಲ್ಲಿ ನ್ಯಾಯ ಶಬ್ದವನ್ನು ಒಂದು ವಿಶಿಷ್ಟ ರೀತಿಯಲ್ಲಿ ಉಪಯೋಗಿಸಿದೆ. ಇವು ಮನುಷ್ಯನು ಜೀವನದಲ್ಲಿ ಕಂಡುಕೊಂಡ ಪಾಠಗಳು. ಇವನ್ನು 'ಯುಕ್ತಿ', 'ತತ್ತ್ವ' ಎನ್ನಬಹುದು. ಗಾದೆಯ ಮಾತಿನಂತೆ, ಇವೂ ಸಹ ಸೂತ್ರರೂಪದ ಪುಟ್ಟ ಮಾತುಗಳು. ಚರ್ಚಾತ್ಮಕ ವಿಷಯಗಳಲ್ಲಿ 'ಉದಾಹರಿಸಲು' ಇವನ್ನು ಉಪಯೋಗಿಸುತ್ತಾರೆ. ಇದರಿಂದ ಮಾತಿಗೊಂದು 'ಬಣ್ಣ' ಬಂದಂತಾಗುತ್ತದೆ. ಇವುಗಳಲ್ಲಿ ವ್ಯಾಕರಣ ಸೂತ್ರಗಳಂತೆ ಕ್ರಿಯಾಪದವಿರುವುದಿಲ್ಲ. ಕೇವಲ ಎರಡು ನಾಮಪದಗಳ ಜೋಡಣೆ ಇರುತ್ತದೆ. ಇವುಗಳಲ್ಲಿ ಆರಿಸಿದ ಕೆಲವನ್ನು ವಿವರಿಸುವ ಪ್ರಯತ್ನ ಮಾಡಿದೆ.

೧. ಅಂಧಚಟಕನ್ಯಾಯ 'ಕುರುಡನು ಗುಬ್ಬಿಯನ್ನು ಹಿಡಿದ ನ್ಯಾಯ': ಈ ನ್ಯಾಯವು ಕಾರ್ಯಕಾರಣ ಸಂಬಂಧವಿಲ್ಲದೆ, ಅಪ್ರಯತ್ನ ಸಾಧ್ಯವಾದ ಕಾರ್ಯವನ್ನು ನಿರೂಪಿಸುತ್ತದೆ. ಗುಬ್ಬಿಯೊಂದು ತನ್ನಷ್ಟಕ್ಕೆ ತಾನು ಹಾರಿಹೋಗುತ್ತಿತ್ತು. ಅದೇ ಸಮಯದಲ್ಲಿ ಒಬ್ಬ ಕುರುಡನು ಕೈಯನ್ನು ಮೇಲೆತ್ತಲು ಅವನ ಕೈಗೆ ಆಗುಬ್ಬಿ ಸಿಕ್ಕಿಬಿತ್ತು. ಇದರಲ್ಲಿ ಕುರುಡನ ಪ್ರಯತ್ನವೇನೂ ಇಲ್ಲ. ಆಕಸ್ಮಿಕವಾಗಿ ಜರುಗಿದ ಕಾರ್ಯವೊಂದನ್ನು ನಿರೂಪಿಸುವಲ್ಲಿ ಈನ್ಯಾಯವನ್ನು ಉಪಯೋಗಿಸುತ್ತಾರೆ.

'ಕುರುಡನ ಏಟು ತರುಡಿಗೆ ಬಿತ್ತು' ಎಂಬ ಇನ್ನೊಂದು ವಾಕ್ಯ ಈನ್ಯಾಯವನ್ನೇ ಸೂಚಿಸುತ್ತದೆ.

೨. ಅಂಧಪರಂಪರಾನ್ಯಾಯ 'ಕುರುಡನನ್ನು ಅನುಸರಿಸಿ ಹೋದ ಕುರುಡರ ನ್ಯಾಯ': ಮುಂದೆ ಹೋಗುವ ಕುರಿಯನ್ನು ಹಿಂಬಾಲಿಸುತ್ತ ಹೋಗುವ ಕುರಿಯ ಮಂದೆಯಂತೆ, ಆಲೋಚಿಸದೆ ಒಬ್ಬರ ಹಿಂದೆ ಇನ್ನೊಬ್ಬರು ಕಣ್ಣು ಮುಚ್ಚಿಕೊಂಡು ಹೋಗುವ ಸಂದರ್ಭದಲ್ಲಿ ಈಮಾತಿನ ಉಪಯೋಗವಾಗುತ್ತದೆ. 'ಅಂಧೇನೈವ ನೀಯಮಾನಾ ಯಥಾಂಧಾಃ' ಎಂಬ ವಾಕ್ಯವೂ ಇದೇ ಅರ್ಥವನ್ನು ಸೂಚಿಸುತ್ತದೆ. ಇಂದಿನ ಸಮಾಜದಲ್ಲಿ ಸರ್ಕಾರದ ವಿರುದ್ಧ ಜರಗುವ ಜನರ ಪ್ರತಿಭಟನೆ ಹೆಚ್ಚಾಗಿ ಇದೇ ರೀತಿಯದು. ಅದರಲ್ಲಿ ಭಾಗವಹಿಸುವ ಅನೇಕ ಜನರಿಗೆ ತಾವು ಏತಕ್ಕೆ ಪ್ರತಿಭಟನೆ ಮಾಡುತ್ತಿದ್ದೇವೆ ಎಂಬುದೇ ತಿಳಿದಿರುವುದಿಲ್ಲ.

೩. ಅಂಧಗಜನ್ಯಾಯ 'ಕುರುಡರು ಆನೆಯನ್ನು ತಿಳಿದ ನ್ಯಾಯ': ಕೆಲವು ಕುರುಡರು ಆನೆ ಎಂದರೇನೆಂಬುವುದನ್ನು ತಿಳಿಯಲು ಹೋದರು. ಅವರಲ್ಲಿ ಒಬ್ಬನು ಅದರ ಕಾಲನ್ನು ಸ್ಪರ್ಶಿಸಿ ಆನೆ ಕಂಭದಂತಿದೆ ಎಂದು ತಿಳಿದನು. ಇನ್ನೊಬ್ಬನು ಅದರ ಬಾಲವನ್ನು ಹಿಡಿದು ಆನೆ ಹಗ್ಗದಂತಿದೆ ಎಂದನು. ಮೂರನೆಯವನು ಅದರ ಕಿವಿಯನ್ನು ಮುಟ್ಟಿ ಆನೆ ಮೊರದಾಕಾರದ್ದೆಂದನು. ಹೀಗೆ ಪ್ರತಿಯೊಬ್ಬರೂ ಆನೆಯ ಒಂದು ಅಂಗವನ್ನು ಮಾತ್ರ ಮುಟ್ಟಿದ್ದರಿಂದ ಅದರ ಪಾಕ್ಷಿಕ ಜ್ಞಾನವನ್ನೇ ಪೂರ್ಣರೂಪವೆಂದು ತಿಳಿದರು. ಹೀಗೆಯೇ, ದಾರ್ಶನಿಕರ ಪರಮಾತ್ಮನ ಬಗೆಗಿನ ಬೇರೆಬೇರೆ ಅಭಿಪ್ರಾಯಗಳನ್ನು ಈನ್ಯಾಯದಂತೆ ನಿರ್ದೇಶಿಸುತ್ತಾರೆ.

೪. ಅರುಂಧತೀದರ್ಶನನ್ಯಾಯ 'ಅರುಂಧತೀ ನಕ್ಷತ್ರವನ್ನು ತೋರಿಸುವನ್ಯಾಯ': ಅರುಂಧತೀ ನಕ್ಷತ್ರವನ್ನು ನೋಡುವವರಿಗೆ ಮೊದಲು ಅದಕ್ಕೆ ಹತ್ತಿರದಲ್ಲಿರುವ ಮುಖ್ಯವಲ್ಲದ ಆದರೆ ದೊಡ್ಡದಾಗಿರುವ ಬೇರೊಂದು ನಕ್ಷತ್ರವನ್ನು ಅದೇ ಅರುಂಧತೀನಕ್ಷತ್ರ ಎಂದು ಹೇಳಿ ನಂತರ, ಅದಲ್ಲ ಎಂದು ಅದರ ಹತ್ತಿರದ ನಿಜವಾದ ಅರುಂಧತೀ ನಕ್ಷತ್ರವನ್ನು ತೋರಿಸುತ್ತಾರೆ. ಮೊದಲಿಗೇ ಸೂಕ್ಷ್ಮವಾದದ್ದನ್ನು ನೋಡಲು ಕಷ್ಟವಾಗುತ್ತದೆ; ಸ್ಥೂಲವಾದದ್ದನ್ನು ನೋಡುವುದು ಸುಲಭ. ಹಾಗಾಗಿ, ಅದು ಮುಖ್ಯವಲ್ಲದ್ದಾದರೂ ದೊಡ್ಡದಾಗಿರುವುದರಿಂದ ಗ್ರಹಣೆಗೆ ಸಾಧ್ಯ. ನಂತರ, ಅದರ ಹತ್ತಿರದ ಸೂಕ್ಷ್ಮವಾದ, ಮುಖ್ಯವಾದದ್ದನ್ನು ಕಾಣಿಸುವುದು ಸುಲಭ.

೫. ಅಶೋಕವನಿಕಾನ್ಯಾಯ 'ಅಶೋಕವೃಕ್ಷಗಳ ತೋಪಿನ ನ್ಯಾಯ': ವಾಲ್ಮೀಕಿ ರಾಮಾಯಣದಲ್ಲಿ, ಮಾರೀಚನ ಸಹಾಯದಿಂದ ರಾಮಲಕ್ಷ್ಮಣರನ್ನು ಪಂಚವಟಿಯ ಆಶ್ರಮದಿಂದ ದೂರಮಾಡಿ, ರಾವಣನು ಮೋಸದಿಂದ ಸನ್ಯಾಸಿವೇಷದಲ್ಲಿ ಬಂದು ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗಿ ತನ್ನ ಲಂಕೆಯ ಅಶೋಕವೃಕ್ಷಗಳ ತೋಪಿನಲ್ಲಿ ಇರಿಸಿದ್ದ. ಅವಳನ್ನು ಗುಟ್ಟಾಗಿ ಬಚ್ಚಿಡುವ ಉದ್ದೇಶವಿತ್ತೆಂದರೆ ಲಂಕೆಯಲ್ಲಿ ಇನ್ನೂ ಅನೇಕ ಗುಪ್ತವಾದ ಪ್ರದೇಶಗಳಿದ್ದವು. ಈಪ್ರದೇಶವನ್ನೇ ಆರಿಸಿಕೊಂಡದ್ದಕ್ಕೆ ಪ್ರತ್ಯೇಕ ಕಾರಣವಿಲ್ಲ. ಒಂದು ಕಾರ್ಯವನ್ನು ನಿರ್ವಹಿಸಲು ಸಮಾನ ಯೋಗ್ಯತೆಯ ಹಲವು ಮಾರ್ಗಗಳಿದ್ದು, ಅವುಗಳಲ್ಲಿ ಯಾವುದಾದರೊಂದನ್ನು ಬಲವಾದ ಕಾರಣವೇನೂ ಇಲ್ಲದೆ ಆರಿಸಿಕೊಂಡ ಸಂದರ್ಭದಲ್ಲಿ ಈನ್ಯಾಯವನ್ನು ಉಪಯೋಗಿಸುತ್ತಾರೆ.

೬. ಅಶ್ಮಲೋಷ್ಟನ್ಯಾಯ 'ಕಲ್ಲು ಮತ್ತು ಮಣ್ಣಿನ ಹೆಂಟೆಯ ನ್ಯಾಯ': ಹತ್ತಿಯೊಡನೆ ಹೋಲಿಸಿದರೆ ಮಣ್ಣಿನಹೆಂಟೆ ಕಠಿಣವಾದ ವಸ್ತು ಎನ್ನಬಹುದು. ಆದರೆ, ಕಲ್ಲಿನೊಡನೆ ತುಲನೆ ಮಾಡಿದಾಗ ಅದು ಮೃದು ಎನಿಸುತ್ತದೆ. ತನಗಿಂತ ಕೆಳದರ್ಜೆಯವರೊಡನೆ ಹೋಲಿಸಿದಾಗ ಒಬ್ಬನನ್ನು ಬಹಳ ಮುಖ್ಯ ಎನ್ನಬಹುದಾದರೂ, ಅವನಿಗಿಂತ ಮೇಲ್ದರ್ಜೆಯವರೊಂದಿಗೆ ಹೋಲಿಸಿದಾಗ ಅವನ ಬೆಲೆ ಕಡಿಮೆ ಎನಿಸೀತು. ಎರಡೂ ವಸ್ತುಗಳು ಅಪ್ರಯೋಜಕವಾಗಿರುವ ಸಂದರ್ಭದಲ್ಲಿ ಅವುಗಳಲ್ಲಿ ಸ್ವಲ್ಪ ಉತ್ತಮವಾಗಿರುವ ಒಂದನ್ನು ಸೂಚಿಸಲು ಈನ್ಯಾಯದ ಬಳಕೆಯಾಗುತ್ತದೆ. 'ಕುರುಡು ಕಣ್ಣಿಗೆ ಮೆಳ್ಳಗಣ್ಣು ಮೇಲು' ಎಂಬ ಇನ್ನೊಂದು ಮಾತು ಈ ಅರ್ಥವನ್ನೇ ಸೂಚಿಸುತ್ತದೆ.

೭. ಕದಂಬಕೋರಕನ್ಯಾಯ 'ಕದಂಬವೃಕ್ಷದಲ್ಲಿ ಮೊಗ್ಗುಗಳ ಅರಳುವಿಕೆಯ ನ್ಯಾಯ': ಕದಂಬವೃಕ್ಷದಲ್ಲಿ ಒಂದೇಕಾಲಕ್ಕೆ ಅಸಂಖ್ಯವಾದ ಮೊಗ್ಗುಗಳು ಅರಳುತ್ತವೆ. ಹಾಗೆ, ಒಂದೇ ಸಮಯದಲ್ಲಿ ಅನೇಕ ಕಾರ್ಯಗಳ ಸಂಭವವಾದಾಗ ಈ ನ್ಯಾಯದ ಉಪಯೋಗವಾಗುತ್ತದೆ. ಸಜ್ಜನರ ಉನ್ನತಿ ಮತ್ತು ಸಂಪತ್ಪರಂಪರೆಯನ್ನು, ದುರ್ದೈವಿಗಳ ಸಂಕಟಪರಂಪರೆಯನ್ನು ಈನ್ಯಾಯದಿಂದ ಹೇಳಬಹುದು.

೮. ಕಾಕತಾಲೀಯನ್ಯಾಯ 'ಕಾಗೆ ಮತ್ತು ತಾಳೆಹಣ್ಣಿನ ನ್ಯಾಯ': ಅನಿರೀಕ್ಷಿತವಾಗಿ ಪಕ್ವವಾದ ತಾಳೆಯಹಣ್ಣೊಂದು ಅದೇಮರದ ಕೆಳಗೆ ವಿಶ್ರಮಿಸುತ್ತಾ ಕುಳಿತಿದ್ದವನ ತಲೆಯಮೇಲೆ ಬಿತ್ತು. ಅದೇ ಸಮಯದಲ್ಲಿ ಕಾಗೆಯೊಂದು ಆಮರದ ಕೊಂಬೆಯಮೇಲೆ ಬಂದು ಕುಳಿತಿತ್ತು. ಹಣ್ಣು ಕಳಚಿ ಬೀಳುವುದಕ್ಕೆ

ಕಾಗೆ ಬಂದು ಕುಳಿತದ್ದು ಕಾರಣವಲ್ಲ, ಅದು ಕೇವಲ ಆಕಸ್ಮಿಕ. ಆದರೆ, ಕಾಗೆಗೆ ಅಪವಾದ ಬಂತು. ಮದುವೆಯಾದ ಹೊಸದರಲ್ಲಿ ಸಂಭವಿಸುವ ಒಳ್ಳೆಯದಕ್ಕೆಲ್ಲಾ 'ಸೊಸೆಯ ಕಾಲ್ಗುಣ ಚೆನ್ನಾಗಿದೆ' ಎನ್ನುವುದು ಈನ್ಯಾಯದಂತೆ.

೯. ಕಾಕದಂತಗವೇಷಣನ್ಯಾಯ 'ಕಾಗೆಯ ಹಲ್ಲನ್ನು ಹುಡುಕುವ ನ್ಯಾಯ': ಕಾಗೆಯ ಬಾಯಲ್ಲಿ ಹಲ್ಲಿಲ್ಲ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಅದನ್ನು ಎಣಿಸುವುದಂತೂ ಬಹಳ ದೂರ. ಹೀಗೆ, ನಿಷ್ಪ್ರಯೋಜಕವಾದ, ಲಾಭವಿಲ್ಲದ, ಮತ್ತು ಅಸಾಧ್ಯವಾದ ಕಾರ್ಯವೊಂದನ್ನು ನಿರ್ದೇಶಿಸಲು ಈನ್ಯಾಯವನ್ನು ಬಳಸುತ್ತಾರೆ.

೧೦. ಕಾಕಾಕ್ಷಿಗೋಲಕನ್ಯಾಯ 'ಕಾಗೆಯ ಕಣ್ಣುಗುಡ್ಡೆಯ ನ್ಯಾಯ': ವಾಲ್ಮೀಕಿ ರಾಮಾಯಣದಲ್ಲಿ ಒಮ್ಮೆ ರಾಮನು ಸೀತಾದೇವಿಯ ತೊಡೆಯಮೇಲೆ ಮಲಗಿ ವಿಶ್ರಮಿಸುತ್ತಿದ್ದಾಗ, ಇಂದ್ರನ ಪುತ್ರನು ಕಾಗೆಯ ವೇಷದಲ್ಲಿ ಬಂದು ಸೀತೆಯ ವಕ್ಷಸ್ಥಲದಲ್ಲಿ ಕುಕ್ಕಲಾರಂಭಿಸಿದನು. ರಕ್ತದ ಹನಿ ಮೈಮೇಲೆ ಬಿದ್ದ ಕಾರಣ ಎಚ್ಚರಗೊಂಡ ರಾಮನು ಕೋಪಗೊಂಡು ಆವಾಯಸದಮೇಲೆ ದರ್ಭೆಯೊಂದನ್ನು ಮಂತ್ರಿಸಿ ಪ್ರಯೋಗಿಸಿದನು. ಅದು ವಾಯಸದ ಬೆನ್ನು ಹತ್ತಿತು. ಮರಣಭಯದಿಂದ ಅದು ಎಲ್ಲರಲ್ಲೂ ಆಶ್ರಯ ಬೇಡಿ, ದೊರಕದೇ ಕಡೆಗೆ ರಾಮನನ್ನೇ ಶರಣು ಬಂದಿತು. ಅಮೋಘವಾದ ಅಸ್ತ್ರವು ನಿರರ್ಥಕವಾಗಲು ಸಾಧ್ಯವಿಲ್ಲವಾಗಿ ತನ್ನ ಒಂದು ಕಣ್ಣನ್ನೇ ಅದಕ್ಕೆ ನೀಡಿ ಪ್ರಾಣವನ್ನು ಉಳಿಸಿಕೊಂಡಿತು. ಹಾಗಾಗಿ, ಕಾಗೆಗೆ ಒಂದೇ ಕಣ್ಣು ಕಾಣಿಸುತ್ತದೆ. ಅದನ್ನೇ ಎಡಬಲಗಳಲ್ಲಿ ಹೊರಳಿಸುತ್ತಾ ಎರಡೂಕಡೆ ನೋಡುತ್ತಿರುವಂತೆ ಕಲ್ಪನೆಯಾಗುತ್ತದೆ. ಹೀಗೆ ಎರಡು ಕಾರ್ಯಗಳಿಗೆ ಒಂದೇ ಕಾರಣ ಸಾಧನವಾಗುವಂತಿದ್ದಾಗ ಈನ್ಯಾಯದ ಉಪಯೋಗ ವಾಗುತ್ತದೆ.

೧೧. ಕೂಪಯಂತ್ರಘಟಿಕಾನ್ಯಾಯ 'ನೀರೆತ್ತುವ ಯಂತ್ರಕ್ಕೆ ಸೇರಿಸಿರುವ ಚೆಂಬುಗಳ ನ್ಯಾಯ': ಬಾವಿಯಿಂದ ನೀರೆತ್ತುವ ಯಂತ್ರದಲ್ಲಿ ಹಲವು ಚೆಂಬುಗಳನ್ನು ಲಗತ್ತಿಸಿರುತ್ತಾರೆ. ಅದು ಚಕ್ರಾಕಾರವಾಗಿ ತಿರುಗುತ್ತದೆ. ಆಗ ಕೆಲವು ಚೆಂಬುಗಳು ನೀರನ್ನು ತುಂಬಿಕೊಂಡು ಮೇಲಕ್ಕೆ ಬರುತ್ತಿರುವಾಗ, ಉಳಿದವು ತುಂಬಿಕೊಂಡ ನೀರನ್ನು ಬಗ್ಗಿಸಿ ಮತ್ತೆ ತುಂಬಿಕೊಳ್ಳಲು ಕೆಳಗೆ ಇಳಿಯುತ್ತಿರುತ್ತವೆ. ಪ್ರಪಂಚದಲ್ಲಿ ಒಂದೆಡೆ ನಗು ಇದ್ದರೆ ಇನ್ನೊಂದೆಡೆ ಅಳು. ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ. ಚಂದ್ರನು ಒಂದು ದಿಕ್ಕಿನಲ್ಲಿ ಮುಳುಗುತ್ತಿರುವಾಗ ಅದರ ವಿರುದ್ಧ ದಿಶೆಯಲ್ಲಿ ಸೂರ್ಯನ ಉದಯವಾಗುತ್ತದೆ. ಹೀಗೆ, ಈಜಗತ್ತಿನ ವಿವಿಧ ಮುಖಗಳನ್ನು ನಿರ್ದೇಶಿಸುವ ಸಂದರ್ಭದಲ್ಲಿ ಈನ್ಯಾಯವನ್ನು ಬಳಸುತ್ತಾರೆ.

೧೨. ಗುಡಜಿಹ್ವಿಕಾನ್ಯಾಯ 'ಬೆಲ್ಲ ಮತ್ತು ನಾಲಗೆಯ ನ್ಯಾಯ': ಕಹಿಯಾದ ಔಷಧಿಯನ್ನು ಕೊಡುವ ಮುಂಚೆ ಬೆಲ್ಲದ ಚೂರು ನೀಡಿ ನಾಲಗೆಯನ್ನು ಸಿಹಿಮಾಡಿದಂತೆ, ಅಪ್ರಿಯವಾದ ಪಾಠವನ್ನು ಮಕ್ಕಳಿಗೆ ಉಪಾಯದಿಂದ ಒಳ್ಳೆಯ ಕಥೆಗಳ ಮೂಲಕ ಕಲಿಸಬೇಕು.

೧೩. ಘಟ್ಟಕುಟೀಪ್ರಭಾತನ್ಯಾಯ 'ಸುಂಕದಕಟ್ಟೆ ಹತ್ತಿರ ಬೆಳಗಾದ ನ್ಯಾಯ': ಒಬ್ಬ ಗಾಡಿ ನಡೆಸುವವನು ಸುಂಕದಕಟ್ಟೆ ಬಳಿ ತಲಪಿದಾಗ ಅಲ್ಲಿ ಕೊಡಬೇಕಾದ ಸುಂಕವನ್ನು ಕೊಡದೆ ತಪ್ಪಿಸಿಕೊಳ್ಳಲು, ರಾತ್ರಿಯೆಲ್ಲ ಬೇರೆಬೇರೆ ರಸ್ತೆಗಳಲ್ಲಿ ತಿರುಗುತ್ತಾ ಬೆಳಗಿನಹೊತ್ತಿಗೆ ಅದೇ ಸುಂಕದಕಟ್ಟೆ ಹತ್ತಿರ ಬಂದು ನಿಂತಿದ್ದನು. ಹಾಗಾಗಿ ಸುಂಕಕೊಡುವುದನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಯಾವುದರಿಂದ ಪ್ರಯತ್ನಪೂರ್ವಕವಾಗಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿ, ಅದೇ ಸಂಭವಿಸಿದಾಗ ಈನ್ಯಾಯವನ್ನು ಉಪಯೋಗಿಸುತ್ತಾರೆ. ಭವಿತವ್ಯಂ ಭವತ್ಯೇವ 'ಆಗುವುದನ್ನು ತಪ್ಪಿಸಲು ಸಾಧ್ಯವಿಲ್ಲ' ಎನ್ನುವುದು ಇದನ್ನೇ ಸೂಚಿಸುತ್ತದೆ.

೧೪. ಘುಣಾಕ್ಷರನ್ಯಾಯ 'ಕೀಟ ಮತ್ತು ಅಕ್ಷರದ ನ್ಯಾಯ': ಮರ ಅಥವಾ ಪುಸ್ತಕದ ಪುಟದಲ್ಲಿ ಕೀಟವೊಂದು ಮಾಡಿದ ಕೊರೆತವನ್ನು ನೋಡಿದ ಒಬ್ಬ ಅದು ವರ್ಣಮಾಲೆಯ ಅಕ್ಷರವೊಂದಕ್ಕೆ ಸಾಮ್ಯವಿದೆ ಎಂದು ತಿಳಿಯುತ್ತಾನೆ. ಅಕಸ್ಮಾತ್ ಸಂಭವಿಸಿದ ಕಾರ್ಯವನ್ನು ಸೂಚಿಸಲು ಈನ್ಯಾಯವನ್ನು ಹೇಳಬಹುದು. ಹೀಗೆಯೇ, ತನ್ನ ಭಾವುಕತೆಯನ್ನು ತೋರಲು ಕವಿ ಬರೆದ ಪದ್ಯವೊಂದಕ್ಕೆ ವಿಮರ್ಶಕರು ಬೇರೆಬೇರೆ ಅರ್ಥ ಮಾಡಿಕೊಳ್ಳುತ್ತಾರೆ.

೧೫. ತಕ್ರಕೌಂಡಿನ್ಯನ್ಯಾಯ 'ಕೌಂಡಿನ್ಯನಿಗೆ ಮಜ್ಜಿಗೆ ಎಂಬ ನ್ಯಾಯ': ಬ್ರಾಹ್ಮಣರಿಗೆಲ್ಲಾ ಮೊಸರು ಬಡಿಸು ಎಂದಾಗ, ಕೌಂಡಿನ್ಯನೂ ಬ್ರಾಹ್ಮಣನಾದ್ದರಿಂದ ಅವನೂ ಮೊಸರಿಗೆ ಅಧಿಕಾರಿ ಆಗುತ್ತನೆ. ಹಾಗಾಗದಿರಲೆಂದು ಕೌಂಡಿನ್ಯನಿಗೆ ಮಜ್ಜಿಗೆ ಬಡಿಸು ಎಂದು ಮೊದಲಿನ ಸಾಮಾನ್ಯ ವಿಧಿಗೆ ಎರಡನೆಯ ಅಪವಾದವನ್ನು ಹೇಳಿದೆ. ಎಲ್ಲರಿಗೂ ಅನ್ವಯಿಸುವ ಮಾತು ಯಾರೋ ಒಬ್ಬರಿಗೆ ಅನ್ವಯಿಸಬಾರದೆಂದು ಹೇಳುವಾಗ ಈನ್ಯಾಯದ ಉಪಯೋಗ ಆಗುತ್ತದೆ.

೧೬. ತೃಣಜಲಾಯುಕನ್ಯಾಯ 'ಹುಲ್ಲುಕಡ್ಡಿ ಮತ್ತು ಹುಳುವಿನ ನ್ಯಾಯ': ಕಂಬಳಿಹುಳುವು ಹುಲ್ಲೊಂದರಮೇಲೆ ಹೋಗುತ್ತಿರುವಾಗ ಅದರ ತುದಿಗೆ ತಲಪಿ ಮುಂದಿನ ಹುಲ್ಲನ್ನು ತನ್ನ ಬಾಯಿಂದ ಹಿಡಿದಮೇಲೆಯೇ ಮೊದಲಿನ ಹುಲ್ಲನ್ನು ಬಿಡುತ್ತದೆ. ನಡೆಯುವಾಗ ಮುಂದಕ್ಕೆ ಹೆಜ್ಜೆಯನ್ನು ಇಟ್ಟಮೇಲೆ ಹಿಂದಿನ ಹೆಜ್ಜೆಯನ್ನು ಎತ್ತಬೇಕು. ಹೀಗೆ, ಜೀವನು ಸಾಯುವ ಸಮಯಬಂದಾಗ ದೇಹಬಿಡುವ ಮುಂಚೆ ತನ್ನ ಪ್ರಾರಬ್ಧ ಕರ್ಮದಿಂದ

ಇನ್ನೊಂದು ದೇಹವನ್ನು ನಿಶ್ಚಯಿಸಿಕೊಂಡಮೇಲೆಯೇ ಪ್ರಸ್ತುತ ಶರೀರವನ್ನು ತ್ಯಜಿಸುತ್ತಾನೆ.

೧೭. ದಂಡಾಪೂಪನ್ಯಾಯ 'ಕೋಲು ಮತ್ತು ಭಕ್ಷ್ಯದ ನ್ಯಾಯ': ಕೋಲಿನೊಂದಿಗೆ ಸಿಹಿ ಪದಾರ್ಥವು ಕಟ್ಟಲ್ಪಟ್ಟಿದ್ದಾಗ, ಕೋಲನ್ನು ಯಾರಾದರೂ ಕದ್ದರೆಂದರೆ, ಅದಕ್ಕೆ ಕಟ್ಟಿದ್ದ ಸಿಹಿ ಪದಾರ್ಥವನ್ನೂ ಕದ್ದರೆಂದೇ ಅರ್ಥ. ಕಾರಣ, ಅವು ಒಂದಕ್ಕೊಂದು ಸೇರಿರುತ್ತವೆ. ರಾಮ ಲಕ್ಷ್ಮಣರು ಯಾವಾಗಲೂ ಒಟ್ಟಿಗೆ ಇರುತ್ತಿದ್ದರು. ಅದ್ದರಿಂದ ರಾಮನು ಬಂದನೆಂದರೆ ಅವನೊಡನೆ ಲಕ್ಷ್ಮಣನೂ ಬಂದನೆಂದು ಹೇಳಬೇಕಾಗಿರಲಿಲ್ಲ. ಹೀಗೆ ಅವಿನಾಭಾವ ಸಂಬಂಧದಲ್ಲಿ ಎರಡು ವಸ್ತುಗಳಿದ್ದರೆ, ಆಗ ನಾವು ಒಂದರಬಗ್ಗೆ ಹೇಳಿದಾಗ ಅದು ಇನ್ನೊಂದಕ್ಕೂ ಅನ್ವಯಿಸುತ್ತದೆ. ಕಳ್ಳರು ಏ.ಟಿ.ಎಮ್ ಅನ್ನೇ ಕಿತ್ತೊಯ್ದರೆಂದರೆ ಅದರಲ್ಲಿಟ್ಟಿದ್ದ ಹಣವನ್ನೂ ದೋಚಿದರೆಂದೇ ಅರ್ಥ.

೧೮. ದೇಹಲೀದೀಪನ್ಯಾಯ 'ಹೊಸಲಮೇಲಿನ ದೀಪದ ನ್ಯಾಯ': ಒಂದು ವಸ್ತುವು ಏಕಕಾಲದಲ್ಲಿ ಎರಡು ಉದ್ದೇಶಗಳ ಪೂರ್ತಿಗೆ ಸಾಧ್ಯವಾದಾಗ ಈನ್ಯಾಯವನ್ನು ಬಳಸುತ್ತಾರೆ. ಹೊಸಲಮೇಲೆ ಇಟ್ಟ ದೀಪವು ಮನೆಯ ಒಳಭಾಗ ಮತ್ತು ಹೊರಭಾಗ ಎರಡನ್ನೂ ಸಮನಾಗಿ ಬೆಳಗುತ್ತದೆ. ಮಹಾಭಾರತ ಯುದ್ಧದಲ್ಲಿ ಪಾಂಡವರಿಗೆ ಸಹಾಯಮಾಡಲು ಅವರ ಸೋದರಮಾವ ಶಲ್ಯನು ಬರುತ್ತಿದ್ದ. ದಾರಿಯಲ್ಲಿ ದುರ್ಯೋಧನನು ಅವನನ್ನು ತಡೆದು ಸತ್ಕರಿಸಿದನು. ಅದು ತಿಳಿಯದೆ ಸಂತುಷ್ಟನಾದ ಶಲ್ಯನು ವರವೊಂದನ್ನು ಕೊಡುವುದಾಗಿ ಹೇಳಿದನು. ಹೀಗಾಗಿ ಅವನು ದುರ್ಯೋಧನನ ಮಾತಿಗೆ ಕಟ್ಟುಬಿದ್ದು ಕರ್ಣನ ಸಾರಥ್ಯವನ್ನು ಮಾಡಬೇಕಾಯಿತು. ಆದರೆ, ಯುದ್ಧದಲ್ಲಿ ಕರ್ಣನ ರಥದ ಚಕ್ರವು ಮಣ್ಣಿನಲ್ಲಿ ಹೂತುಕೊಂಡಾಗ, ಅದನ್ನು ಮೇಲೆತ್ತಲು ಸಹಾಯಮಾಡದೆ ಅದೇ ಸಮಯದಲ್ಲಿ ಅವನು ಅರ್ಜುನನ ಬಾಣದಿಂದ ಮರಣಿಸುವುದಕ್ಕೆ ಕಾರಣನಾದ.

೧೯. ನದೀಸಮುದ್ರನ್ಯಾಯ 'ನದಿ ಮತ್ತು ಸಮುದ್ರದ ನ್ಯಾಯ': ನದಿಯೊಂದು ಹರಿದುಹೋಗುತ್ತಾ ಕಡೆಯಲ್ಲಿ ಸಮುದ್ರವನ್ನು ಹೋಗಿ ಸೇರಿ ಅದರಲ್ಲಿ ಬೆರೆತುಹೋಗುತ್ತದೆ ನಂತರ ನದಿಯ ನೀರನ್ನು ಸಮುದ್ರದಲ್ಲಿ ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಿಲ್ಲ. ಹೀಗೆ, ಪ್ರತ್ಯಗಾತ್ಮನು ಬ್ರಹ್ಮತತ್ತ್ವವನ್ನು ತಿಳಿದುಕೊಂಡು ಬ್ರಹ್ಮವೇ ಆಗಿಬಿಡುತ್ತಾನೆ (ಅದ್ವೈತ ಸಿದ್ಧಾಂತದಂತೆ).

೨೦. ನೃಪನಾಪಿತಪುತ್ರನ್ಯಾಯ 'ರಾಜ ಮತ್ತು ಕ್ಷೌರಿಕಪುತ್ರನ ನ್ಯಾಯ': ಜನರ ದೃಷ್ಟಿಯಲ್ಲಿ ವಸ್ತುವೊಂದು ಎಷ್ಟೇ ಚೆನ್ನಾಗಿಲ್ಲ, ಅಸಹ್ಯ, ಎನಿಸಿದರೂ

ಮನುಷ್ಯನಿಗೆ ಅದು ಸ್ವಂತದ್ದಾದಾಗ ಅದರಮೇಲೆ ಬಹಳ ಪ್ರೀತಿ, ಅಕ್ಕರೆ ಇರುತ್ತದೆ. ಅಂತಹದನ್ನು ನಿರ್ದೇಶಿಸಲು ಈನ್ಯಾಯವನ್ನು ಬಳಸುತ್ತಾರೆ. ಒಬ್ಬ ರಾಜನು ಒಮ್ಮೆ ತನ್ನ ಕ್ಷೌರಿಕನೊಡನೆ ತನ್ನ ರಾಜ್ಯದ ಅತಿಸುಂದರನಾದ ಹುಡುಗನನ್ನು ಕರೆದುಕೊಂಡು ಬರಲು ಆದೇಶಿಸಿದನು. ಅವನು ರಾಜ್ಯದ ಎಲ್ಲಕಡೆ ಬಹಳಕಾಲ ಹುಡುಕಿದರೂ ರಾಜನು ಹೇಳಿದಂತಹ ಹುಡುಗ ದೊರಕಲಿಲ್ಲ. ಹತಾಶನಾಗಿ ಮನೆಗೆ ಹಿಂದಿರುಗಿದಾಗ ತನ್ನ ಕುರೂಪಿ ಹಾಗೂ ಅಂಗಹೀನನಾದ ಮಗನು ಅವನಿಗೆ ಅತ್ಯಂತ ಸುಂದರನಾಗಿ ಕಂಡನು. ಮರುದಿನ ಅವನನ್ನು ಕರೆದುಕೊಂಡು ಹೋಗಿ, ರಾಜನ ಮುಂದೆ ನಿಲ್ಲಿಸಿ, ನೀವಿಷ್ಟಪಟ್ಟ ಹುಡುಗನನ್ನು ಕರೆತಂದಿದ್ದೇನೆ ಎಂದನು. ರಾಜನಿಗೆ ಅವನನ್ನು ನೋಡಿ ಕೋಪ ನೆತ್ತಿಗೇರಿತು. ಆದರೆ, ಕೂಡಲೇ, ಕ್ಷೌರಿಕನ ಅಪರಾಧವನ್ನು ಕ್ಷಮಿಸಿ ಪ್ರತಿಯೊಬ್ಬರಿಗೂ ಅವರ ಮಕ್ಕಳು ಚೆನ್ನಾಗಿಲ್ಲದಿದ್ದರೂ, ಇತರರ ಮಕ್ಕಳಿಗಿಂತ ಚೆನ್ನಾಗಿಯೇ ಕಾಣುವರೆಂಬ ಮಾನವ ಸಹಜವಾದ ಗುಣವನ್ನು ಅರಿತನು. ಹೆತ್ತವರಿಗೆ ಹೆಗ್ಗಣ ಮುದ್ದು ಕೂಡಿದವರಿಗೆ ಕೋಡಗ ಮುದ್ದು ಎಂಬ ಮಾತೂ ಈನ್ಯಾಯವನ್ನೇ ಸೂಚಿಸುತ್ತದೆ.

೨೧. ಪಂಕಪ್ರಕ್ಷಾಳನನ್ಯಾಯ 'ಕೆಸರನ್ನು ತೊಳೆದ ನ್ಯಾಯ': ಕೆಸರಿನಲ್ಲಿಳಿದು ನಂತರ ಅದನ್ನು ತೊಳೆದುಕೊಳ್ಳುವುದಕ್ಕಿಂತ ಕೆಸರಿನಲ್ಲಿ ಇಳಿಯದಿರುವುದೇ ಬುದ್ಧಿವಂತಿಕೆ. ಅಪಾಯಕ್ಕೆ ಸಿಲುಕಿ ಅದರಿಂದ ಹೇಗಾದರೂ ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಿಸುವುದಕ್ಕಿಂತ ಅಪಾಯಕ್ಕೆ ಸಿಲುಕದಂತಿರುವುದೇ ಜಾಣತನ. ದುಷ್ಟರನ್ನು ಕಂಡರೆ ದೂರವಿರು ಎನ್ನುವ ಮಾತು ಇದನ್ನೇ ಸೂಚಿಸುತ್ತದೆ.

೨೨. ಪಂಗ್ವಂಧನ್ಯಾಯ 'ಹೆಳವ ಮತ್ತು ಕುರುಡನ ನ್ಯಾಯ': ಒಮ್ಮೆ ಒಬ್ಬ ಕಾಲಿಲ್ಲದವ ಮತ್ತು ಇನ್ನೊಬ್ಬ ಕಣ್ಣಿಲ್ಲದವ ಕಾಡಿನಲ್ಲಿ ದಾರಿಕಾಣದಂತಾದರು. ಅವರು ಹೇಗೋ ಪರಸ್ಪರರನ್ನು ಸಂಧಿಸಿದರು ಮತ್ತು ಒಂದು ಒಪ್ಪಂದ ಮಾಡಿಕೊಂಡರು. ಅದೇನೆಂದರೆ, 'ಕುರುಡನು ಹೆಳವನನ್ನು ಹೊತ್ತು ನಡೆಯುವುದು. ಹೆಳವನು ನೋಡಬಲ್ಲವನಾದ್ದರಿಂದ ಕುರುಡನಿಗೆ ಸರಿಯಾದ ಹಾದಿಯಲ್ಲಿ ನಡೆಯಲು ಸಹಾಯ ಮಾಡುವುದು'. ಹೀಗೆ ಅವರು ಕಡೆಗೊಮ್ಮೆ ಕಾಡಿನ ಹೊರಗೆ ಬಂದು ತಮ್ಮತಮ್ಮ ಮನೆಯನ್ನು ಸೇರಿಕೊಂಡರು. ಒಬ್ಬರು ಇನ್ನೊಬ್ಬರಿಗೆ ಸಹಾಯ ಮಾಡುವುದನ್ನು ಕಲಿತರೆ ಯಾವುದೇ ಕಷ್ಟವನ್ನಾದರೂ ಸುಲಭವಾಗಿ ದಾಟಬಹುದು ಎಂಬ ನೀತಿ ಇದರಿಂದ ತಿಳಿಯುತ್ತದೆ. ಸಾಂಖ್ಯ ದರ್ಶನದಲ್ಲಿ ಈ ನ್ಯಾಯದ ಉಪಯೋಗ

ಕಂಡುಬರುತ್ತದೆ. ಅದರ ಪ್ರಕಾರ ಅಚೇತನವಾದ ಪ್ರಕೃತಿ ಮತ್ತು ಚೈತನ್ಯರೂಪಿಯಾದ ಪುರುಷ ಒಟ್ಟಿಗೆ ಸೇರಿ ಈಜಗತ್ತನ್ನು ಸೃಷ್ಟಿಸುತ್ತಾರೆ.

೨೩. ಪಿಷ್ಟಪೇಷಣನ್ಯಾಯ 'ಹಿಟ್ಟನ್ನು ಮತ್ತೆ ಮತ್ತೆ ಕಲಸಿದ ನ್ಯಾಯ': ಅಕ್ಕಿ ಅಥವಾ ಗೋಧಿ ಧಾನ್ಯವನ್ನು ಒಂದುಸಲ ಹಿಟ್ಟು ಮಾಡಿದಮೇಲೆ ಮತ್ತೆ ಮತ್ತೆ ಬೀಸುವುದು/ರುಬ್ಬುವುದು ಲಾಭವಿಲ್ಲದ್ದಕ್ಕೆ ಶ್ರಮಪಟ್ಟಂತೆ. ವೃಥಾ ಪರಿಶ್ರಮ, ಮಾಡಿದ್ದನ್ನೇ ಮಾಡುವುದು ವ್ಯರ್ಥ. ಮಣ್ಣಿನ ಬೆನಕನ್ನ ತೊಳೆದಷ್ಟೂ ಕೆಸರು. 'ಹಾಡಿದ್ದೇ ಹಾಡೋ ಕಿಸಬಾಯಿದಾಸ' ಎನ್ನುವ ಮಾತುಗಳು ಈನ್ಯಾಯವನ್ನೇ ಹೇಳುತ್ತದೆ.

೨೪. ಬೀಜಾಂಕುರನ್ಯಾಯ 'ಬೀಜ ಮತ್ತು ಅಂಕುರದ ನ್ಯಾಯ': ಬೀಜವನ್ನು ಬಿತ್ತಿದಾಗ ಅದು ಅಂಕುರವಾಗಿ, ಕ್ರಮೇಣ ಗಿಡ ಮರವಾಗಿ ಮತ್ತೆ ಬೀಜವನ್ನು ಉತ್ಪಾದಿಸುತ್ತದೆ. ಈ ಬೀಜ ಮತ್ತು ಅಂಕುರದ ವ್ಯಾಪಾರ ನಿರಂತರವಾಗಿ ನಡೆಯುತ್ತದೆ. ಇಲ್ಲಿ ಬೀಜ ಮರಕ್ಕೆ ಕಾರಣವೆಂದರೆ, ಅದೇ ವೃಕ್ಷ ಬೀಜಕ್ಕೆ ಕಾರಣವಾಗುತ್ತದೆ. ಅನೇಕ ಸಮಯದಲ್ಲಿ ಕಾರ್ಯ ಕಾರಣಗಳು ಪರಸ್ಪರ ಅಪೇಕ್ಷಿಸುತ್ತವೆ. ಜನ್ಮ ಮರಣಕ್ಕೆ ಕಾರಣ, ಹಾಗೆಯೇ, ಮರಣ ಜನ್ಮಕ್ಕೆ ಕಾರಣ (ಜಾತಸ್ಯ ಮರಣಂ ಧ್ರುವಮ್; ಧ್ರುವಂ ಜನ್ಮ ಮೃತಸ್ಯ ಚ) ಎಂಬ ಉಕ್ತಿಯು ಈನ್ಯಾಯವನ್ನೇ ತಿಳಿಸುತ್ತದೆ.

೨೫. ಮತ್ಸ್ಯನ್ಯಾಯ 'ಮೀನಿನ ನ್ಯಾಯ': ನೀರಿನ ಕೊಳದಲ್ಲಿರುವ ಚಿಕ್ಕಪುಟ್ಟ ಹಾಗೂ ದುರ್ಬಲವಾದ ಮೀನುಗಳನ್ನು ದೊಡ್ಡ ಹಾಗೂ ಸಬಲ ಮೀನು ತಿಂದು ಬಿಡುತ್ತದೆ. ಇಂದಿನ ಸಮಾಜದಲ್ಲಿ ಐಶ್ವರ್ಯ, ಅಧಿಕಾರದಿಂದ ಶಕ್ತರಾದವರು ಬಡವರು, ದುರ್ಬಲರು ಇವರನ್ನು ಅದುಮಿಹಾಕುತ್ತಾರೆ, ಹೀನಾಯವಾಗಿ ಕಾಣುತ್ತಾರೆ.

೨೬. ರಜ್ಜುಸರ್ಪನ್ಯಾಯ 'ಹಗ್ಗ ಮತ್ತು ಹಾವಿನ ನ್ಯಾಯ': ಕತ್ತಲುಪ್ರದೇಶದಲ್ಲಿ ಬಿದ್ದಿರುವ ಹಗ್ಗದ ತುಂಡೊಂದನ್ನು ನೋಡಿ ಹಾವೆಂದು ತಿಳಿದು ಭಯಪಡುವುದು ಸಹಜ. ಆದರೆ, ಅದು ಕೇವಲ ಭ್ರಾಂತಿ. ಬೆಳಕು ಬಂದು ಕತ್ತಲು ತೊಲಗಿದಾಗ ಅದು ಹಗ್ಗ, ಹಾವಲ್ಲ ಎಂಬ ಜ್ಞಾನ ಉಂಟಾಗುತ್ತದೆ. ಅದ್ವೈತ ವೇದಾಂತದಲ್ಲಿ ಈ ನ್ಯಾಯದ ಉಪಯೋಗ ಕಂಡುಬರುತ್ತದೆ. ಅಜ್ಞಾನದಿಂದ ಜಗತ್ತನ್ನು ಸತ್ಯವೆಂದು ತಿಳಿಯುತ್ತಾನೆ. ಅವಿದ್ಯೆ ತೊಲಗಿ ಜ್ಞಾನ ಬಂದ ನಂತರ ಜಗತ್ತು ಸತ್ಯವಲ್ಲ, ಮಿಥ್ಯೆ ಎಂದು ತಿಳಿಯುತ್ತಾನೆ.

೨೭. ವಹ್ನಿಧೂಮನ್ಯಾಯ 'ಬೆಂಕಿ ಮತ್ತು ಹೊಗೆಯ ನ್ಯಾಯ': ಎರಡು ವಸ್ತುಗಳ ಅವಿನಾಭಾವ ಸಂಬಂಧವನ್ನು ಸೂಚಿಸಲು ಈ ನ್ಯಾಯದ ಬಳಕೆಯಾಗುತ್ತದೆ.

ಹೊಗೆ ಇರುವಲ್ಲಿ ಬೆಂಕಿ ಇರುತ್ತದೆ; ಬೆಂಕಿ ಇಲ್ಲದೆಡೆ ಹೊಗೆ ಇರುವುದಿಲ್ಲ. ಜೀವನದ ದ್ವಂದ್ವಗಳಾದ ಸುಖ-ದುಃಖ, ಬೆಳಕು-ಕತ್ತಲೆ ಮೊದಲಾದವು ಇದನ್ನೇ ಸೂಚಿಸುತ್ತವೆ.

೨೮. ವಿಷವೃಕ್ಷನ್ಯಾಯ 'ವಿಷವೃಕ್ಷದ ನ್ಯಾಯ': ಒಂದು ವಸ್ತುವು ಎಷ್ಟೇ ತೊಂದರೆ, ಕೆಡಕು ಎನ್ನಿಸಿದರೂ ಅದನ್ನು ಪೋಷಿಸಿದವನೇ ನಾಶಮಾಡಬಾರದು. ಅದೇರೀತಿ ನೆಟ್ಟ ಮರವೊಂದು ವಿಷವೃಕ್ಷವೆಂದು ತಿಳಿದಾಗಲೂ ಅದನ್ನು ನೆಟ್ಟು ನೀರುಹಾಕಿ ಪೋಷಿಸಿದವನೇ ಕಡಿದುಹಾಕುವುದು ಸರಿಯಲ್ಲ. ತನ್ನ ಕೃತಿಯೊಂದರಲ್ಲಿ ಕಾಳಿದಾಸ ಕವಿಯು ಈಮಾತನ್ನು ಹೇಳಿದ್ದಾನೆ - ವಿಷವೃಕ್ಷೋ'ಪಿ ಸಂವರ್ಧ್ಯ ಸ್ವಯಂ ಛೇತ್ತುಂ ಅಸಾಂಪ್ರತಮ್. ಈನ್ಯಾಯದ ಒಂದು ಒಳ್ಳೆಯ ಉದಾಹರಣೆಯು ವಾಲ್ಮೀಕಿ ರಾಮಾಯಣದಲ್ಲಿ ದೊರಕುತ್ತದೆ. ಇಕ್ಷ್ವಾಕುವಂಶದಲ್ಲಿ ಸಗರನೆಂಬ ಪ್ರಖ್ಯಾತನಾದ ರಾಜನಿದ್ದನು. ಅವನ ಹಿರಿಯ ಹೆಂಡತಿ ಕೇಶಿನಿಯಲ್ಲಿ ಅವನಿಗೆ ಅಸಮಂಜ ಎಂಬ ಹೆಸರಿನ ಪುತ್ರನಾದನು. ಅಸಮಂಜನು ಅಯೋಧ್ಯೆಯ ಬಾಲಕರನ್ನು ಹಿಡಿದುಕೊಂಡು ಅವರನ್ನು ಸರಯೂ ನದಿಯಲ್ಲಿ ಬಿಸಾಡುತ್ತಿದ್ದನು. ಅವರು ಮುಳುಗಿ ಸಾಯುವುದನ್ನು ನೋಡಿ ನಗುತ್ತಿದ್ದನು. ಇದರಿಂದ ಪ್ರಜೆಗಳು ದೂರು ಹೇಳಿದಾಗ ಅಹಿತವನ್ನು ಮಾಡುತ್ತಿದ್ದ ಅವನನ್ನು ಕೊಲ್ಲದೆ ನಗರದಿಂದ ಬಹಿಷ್ಕರಿಸಿದನು. ಕಾರಣ, ತಾನೇ ಜನ್ಮವಿತ್ತು ಪೋಷಿಸಿ ಬೆಳೆಸಿದ ಮಗನನ್ನು ಕೊಲ್ಲುವುದು ಹೇಗೇ?.

೨೯. ವೃದ್ಧಕುಮಾರೀನ್ಯಾಯ 'ಮದುವೆಯಾಗಿರದ ವೃದ್ಧಳ ನ್ಯಾಯ': ಪತಂಜಲಿಯ ಮಹಾಭಾಷ್ಯದಲ್ಲಿ ಈ ಪ್ರಸಂಗದ ವರ್ಣನೆ ಇದೆ. ಮುದುಕಿಯೊಬ್ಬಳು ಪ್ರಾರ್ಥಿಸಿದಾಗ ಇಂದ್ರ ಪ್ರತ್ಯಕ್ಷನಾಗಿ ಏನು ವರ ಬೇಕೆಂದನು. ಅದಕ್ಕೆ ಅವಳು, 'ನನ್ನ ಮಕ್ಕಳು ಹಾಲು ತುಪ್ಪ ಬೆರೆತ ಅನ್ನವನ್ನು ಬಂಗಾರದ ತಟ್ಟೆಯಲ್ಲಿ ಊಟಮಾಡುವಂತಾಗಲಿ' (ಪುತ್ರಾ ಮೇ ಬಹುಕ್ಷೀರಘೃತಂ ಓದನಂ ಕಾಂಚನಪಾತ್ರ್ಯಾಂ ಭುಂಜೀರನ್) ಎಂದು ಬುದ್ಧಿವಂತಿಕೆಯಿಂದ ಕೇಳಿದಳು. ಈವರದಿಂದ, ಅವಳಿಗೆ ಯೌವ್ವನ ಬಂದು ಮದುವೆಯಾಗಿ ಮಕ್ಕಳು ಹುಟ್ಟಬೇಕು. ಅವರು ಐಶ್ವರ್ಯವಂತರಾಗಬೇಕು ಇತ್ಯಾದಿ ಅನೇಕ ವರಗಳನ್ನು ಒಟ್ಟಿಗೆ ಬೇಡಿಕೊಂಡಂತಾಯಿತು.

೩೦. ಸಿಂಹಾವಲೋಕನನ್ಯಾಯ 'ಸಿಂಹದ ನೋಡುವಿಕೆಯ ನ್ಯಾಯ': ಸಿಂಹವು ಹತ್ತು ಸಲ ನೆಗೆದು ಮತ್ತೆ ತನ್ನ ಬೇಟೆ ಏನಾದರೂ ಹಿಂದೆ ಬಿಟ್ಟುಹೋಯಿತೇ ಎಂದು ತಿರುಗಿನೋಡುತ್ತದೆ. ಬಳಿಕ ಮತ್ತೆ ಮುಂದೆ ಹೋಗುತ್ತದೆ. ಹೀಗೆ

ಕೆಲಸಗಳನ್ನು ಮಾಡುವಾಗ ಹಿಂದೆ ಮಾಡಿದ್ದನ್ನು ವಿಮರ್ಶಿಸಿ ಮುಂದುವರಿಯಬೇಕು. ಅದರಿಂದ ಕೆಲಸ ಸುಗಮವಾಗುತ್ತದೆ.

೩೧. ಸೂಚೀಕಟಾಹನ್ಯಾಯ 'ಸೂಜಿ ಮತ್ತು ಪಾತ್ರೆಯ ನ್ಯಾಯ': ಒಂದು ಸುಲಭವಾದ, ಇನ್ನೊಂದು ಕಷ್ಟವಾದ, ಎರಡೂ ಕೆಲಸ ಮಾಡಬೇಕಾದ ಸಂದರ್ಭದಲ್ಲಿ, ಮೊದಲು ಸುಲಭವಾದದ್ದನ್ನು ಮಾಡಿ ನಂತರ ಕಷ್ಟವಾದ ಇನ್ನೊಂದನ್ನು ಮಾಡಬೇಕು ಎನ್ನುವ ಮಾತನ್ನು ಈನ್ಯಾಯ ತಿಳಿಸುತ್ತದೆ.

೩೨. ಸ್ಥಾಲೀಪುಲಾಕನ್ಯಾಯ 'ಅಗುಳಿನಿಂದ ಅನ್ನ ಪರೀಕ್ಷಿಸುವ ನ್ಯಾಯ': ತಪ್ಪಲೆಯಲ್ಲಿ ಅನ್ನವನ್ನು ಮಾಡುತ್ತಿರುವಾಗ ಹಾಕಿದ ಅಕ್ಕಿಯೆಲ್ಲಾ ಬೆಂದಿದೆಯೇ ಎನ್ನುವುದನ್ನು ಒಂದು ಅಗುಳನ್ನು ಹಿಸುಕಿ ಪರೀಕ್ಷಿಸಿದರೆ ಸಾಕು. ಉಳಿದ ಎಲ್ಲಾ ಅಗುಳೂ ಹಾಗೆಯೇ ಬೆಂದಿರುತ್ತವೆ. ಮಾನವನ ಸಣ್ಣದೊಂದು ನಡೆಯಿಂದ, ಮಾತಿನಿಂದ ಅವನ ವ್ಯಕ್ತಿತ್ವವನ್ನು ಅರಿಯಬಹುದು.



# ಆಲಿಕಲ್ಲ ಹಸೆ



**ಬಸವರಾಜ ಕೋಡಗುಂಟಿ**

ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೆ ಶತಮಾನದ ಅಕ್ಕಮಹಾದೇವಿ ಒಂದು ಮಹತ್ವದ ಹೆಸರು. ಅಕ್ಕಮಹಾದೇವಿ ಒಬ್ಬ ಗದ್ಯ ಬರಹಗಾರಳು, ವಚನಗಳನ್ನು ಬರೆದಿದ್ದಾಳೆ. ವಚನಗಳ ರಚನೆ, ಸಂಪಾದನೆ ಈ ಮೊದಲಾದ ಬಹು ಸಂಕೀರ್ಣವಾದ ವಿಚಾರಗಳು ಹಲವು, ಅಕ್ಕಮಹಾದೇವಿಯನ್ನೊಳಗೊಂಡ ಇತರ ವಚನಕಾರರನ್ನು ಅರ್ತ ಮಾಡಿಕೊಳ್ಳುವಲ್ಲಿ ಎದುರಿಸಬೇಕಾದ ಪ್ರಶ್ನೆಗಳೆ. ಆದರೆ ಇವಾವುಗಳನ್ನು ಇಲ್ಲಿ ಎದುರುಗೊಳ್ಳದೆ ಸದ್ಯ ಒಪ್ಪಿತ ಒಂದು ಪಟ್ಯವನ್ನು ತೆಗೆದುಕೊಂಡು ಅಕ್ಕನ ವಚನವೊಂದನ್ನು ಬಾಶಿಕವಾಗಿ ನೋಡುವ ಪ್ರಯತ್ನ ಮಾಡಿದೆ. ಅಕ್ಕನ ಬಾಶೆ, ಶಯ್ಲಿ, ಬಾಶಾಪ್ರಯೋಗ ಈ ಮೊದಲಾದವನ್ನು ಇದುವರೆಗೆ ಅದ್ಯಯನ ಮಾಡಿಲ್ಲ. ಈಗಿನ ಬರವಣಿಗೆ ಈ ನಿಟ್ಟಿನಲ್ಲಿ ಒಂದು ಸಣ್ಣ ಪ್ರಯತ್ನ.

ಪ್ರತಿಯೊಂದು ಸಾಹಿತ್ಯಿಕ ಪಟ್ಯ ರೂಪುಗೊಳ್ಳುವುದು ಬಾಶೆಯಲ್ಲಿ. ಬಾಶೆ ಒಂದು ರಚನೆ. ಸಾಹಿತ್ಯ ಪಟ್ಯಕ್ಕೆ ಬಳಸಿದ ಬಾಶೆಯನ್ನು ಅರ್ತ ಮಾಡಿಕೊಂಡರೆ ಆ ಸಾಹಿತ್ಯವನ್ನು ಅರ್ತ ಮಾಡಿಕೊಳ್ಳುವುದಕ್ಕೆ ಇನ್ನೊಂದು ಆಯಾಮ ಒದಗುತ್ತದೆ ಮತ್ತು ಬಾಶೆಯ ಅದ್ಯಯನ ಆ ಪಟ್ಯವನ್ನು ಅರ್ತ ಮಾಡಿಕೊಳ್ಳುವುದಕ್ಕೆ ಹೆಚ್ಚು ಸಹಾಯಕ ಆಗಬಹುದು ಇಲ್ಲವೆ ಸಹಜ ಓದಿಗೆ ದಕ್ಕದ ಕೆಲವು ವಿಚಾರಗಳನ್ನು ಇದು ಕೊಡಬಹುದು. ಒಂದು ಸಾಹಿತ್ಯ ಪಟ್ಯ ಯಶಸ್ವಿಯಾಗುವುದಕ್ಕೆ ಮೂಲಬೂತ ನೆಲೆಗಳಲ್ಲಿ ಬಾಶೆ ಮಹತ್ವದ್ದು. ಹಾಗಾಗಿ ಬಾಶೆಯನ್ನು ಹೇಗೆ ಬಳಸಿಕೊಂಡಿದ್ದಾರೆ ಎಂಬುದನ್ನು ತಿಳಿದುಕೊಂಡರೆ ಸಾಹಿತ್ಯ ಪಟ್ಯದ ಯಶಸ್ಸು ಹೇಗೆ ಎಂಬುದನ್ನು

ತಿಳಿದುಕೊಳ್ಳಲು ಸಾದ್ಯವಾಗಬಹುದು. ಈಗಿನ ಬರವಣಿಗೆಯಲ್ಲಿ ಅಕ್ಕನ ವಚನವೊಂದರ ಬಾಶಿಕ ರಚನೆಯನ್ನು ತಿಳಿದುಕೊಳ್ಳುವ ಮತ್ತು ಆ ಮೂಲಕ ಆ ವಚನವನ್ನು ಅರ್ತ ಮಾಡಿಕೊಳ್ಳುವ ಪ್ರಯತ್ನ ಮಾಡಿದೆ. ಈ ಕೆಳಗಿನ ವಚನವನ್ನು ಆಯ್ದುಕೊಂಡಿದೆ.

ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ ಆಲಿಕಲ್ಲ ಹಸೆಯ ಹಾಸಿ ಬಾಸಿಗವ ಕಟ್ಟಿ ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮುಟ್ಟಿದನು ನೋಡಾ ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ ಚೆನ್ನಮಲ್ಲಿಕಾರ್ಜುನಯ್ಯನಿಗೆ (ವಚನ ಸಂ. ೪೯, ಪು. ೭೫-೬).

ಈ ಮೇಲೆ ಹೇಳಿದಂತೆ ವಚನದ ವಿಶಯದಲ್ಲಿ ರಚನೆ, ಸಂಪಾದನೆ ಮೊದಲಾದ ಹಲವು ಗೊಂದಲಗಳು ಇವೆ. ಅಲ್ಲದೆ ವಚನಗಳು ತಿದ್ದುವಿಕೆಗೆ ಮುಕ್ತವಾಗಿ ತೆರೆದುಕೊಂಡ ಮುಕ್ತಪಟ್ಯಗಳಾಗಿವೆ (ಕೋಡಗುಂಟಿ.೨೦೧೯). ಹಾಗಾಗಿ ಪ್ರತಿ ವಚನದಂತೆ ಈ ವಚನಕ್ಕೂ ಹಲವು ಪಟ್ಯಗಳು ಇವೆ. ಈ ಪಟ್ಯಗಳನ್ನು ನಿರ್ದಿಶ್ಟಗೊಳಿಸಲು ಸಾದ್ಯವಿಲ್ಲ. ಈಗಿನ ಬರವಣಿಗೆಗೆ ಆಯ್ದುಕೊಂಡ ಪಟ್ಯ ಎಲ್. ಬಸವರಾಜು ಸಂಪಾದಿಸಿದ ಅಕ್ಕನ ವಚನಗಳು (೨೦೧೭[ಮೊ.ಮು. ೧೯೬೬]) ಎಂಬ ಪುಸ್ತಕದ್ದು. ಈ ವಚನದ ಬಾಶೆಯನ್ನು, ಇದರಲ್ಲಿ ಬಳಕೆಯಾಗಿರುವ ಪದಗಳು, ಅವುಗಳ ವ್ಯಾಕರಣ ಮತ್ತು ಅರ್ತ ಇವುಗಳನ್ನು ಕೇಂದ್ರವಾಗಿಟ್ಟುಕೊಂಡು ವಚನವನ್ನು ನೋಡಲಾಗಿದೆ.

ಇದು ಅಕ್ಕಮಹಾದೇವಿಯ ಎರಡು ವಾಕ್ಯಗಳಿರುವ ಎರಡು ಸಾಲಿನ ಉದ್ದಕ್ಕೆ ಹರಡಿಕೊಂಡಿರುವ ವಚನ. ಈ ವಚನ ನೇರವಾಗಿ ಏನನ್ನೂ ಮಾತನಾಡದೆ ಬರಿಯ ರೂಪಕಗಳನ್ನು ತರುವ ಕೆಲಸ ಮಾಡುತ್ತಿದೆ. ವಚನದ ಅರ್ತ ಏನಿರಬಹುದು ಎಂಬುದು ಈ ಬರವಣಿಗೆಯ ಆಸಕ್ತಿ ಅಲ್ಲದಿರುವುದರಿಂದ ನಾವಿಲ್ಲಿ ಹೆಚ್ಚು ತಲೆ ಕೆಡಿಸಿಕೊಳ್ಳಬೇಕಿಲ್ಲ ಎಂಬುದು ವಾಸ್ತವ. ಆದರೆ ಸ್ತೂಲವಾಗಿಯಾದರೂ ಈ ರೂಪಕಗಳು ಏನನ್ನಾದರೂ ಸಂಕೇತಿಸಬೇಕಲ್ಲವೆ. ಈ ವಚನದಲ್ಲಿ ಬದುಕಿನ ಕೆಲವು ಅನಿವಾರ್ಯ ಸ್ತಿತಿಯ ಬಗೆಗೆ ಮಾತನಾಡುತ್ತಿರುವಂತಿದೆ. ಬದುಕಿನಲ್ಲಿ ಆಗಿರುವಂತವು ವಾಸ್ತವದಲ್ಲಿ ಎಲ್ಲವೂ ಅಳಿದುಹೋದ, ಇಲ್ಲವಾದ ಸ್ತಿತಿ. ಇನ್ನೂ ತುಸು ನಿಂತು ನೋಡಿದಾಗ ಬದುಕಿನಲ್ಲಿ ಆಗಿರುವಂತವು ಎಲ್ಲವೂ ಅಹುದೆಂಬ ಬ್ರಮೆಯನ್ನು ಕೊಡುವಂತವು ಬದಲಿಗೆ ವಾಸ್ತವಗಳಲ್ಲ, ವಾಸ್ತವಗಳೆಂದು ಕಂಡ ಇಲ್ಲವೆ ಬ್ರಮಿಸಿದ ಅವಾಸ್ತವಗಳು. ಹಾಗೂ ಇದರಲ್ಲಿ ಹೆಚ್ಚು ವಯಕ್ತಿಕವೂ, ಮಾನಸಿಕತೆಯೂ, ವ್ಯಕ್ತಿತ್ವವೂ ಒಳಗೊಂಡಿರುವಂತಿವೆ. ಮನುಶ್ಯರ ಸಾಮಾಜಿಕ ಜೀವನದಲ್ಲಿ ಸಹಜವಾಗಿ ಕಂಡುಬರುವ ಮದುವೆಗೆ ಸಂಬಂದಿಸಿದ ರೂಪಕಗಳನ್ನು ತಂದು ಹಾಕುತ್ತಿದೆ. ಇದು ಬದುಕಿನ ಗಾಡವಾದ ಕಹಿ ನೋವನ್ನು ಉಂಡ ಬದುಕೊಂದರ ಸ್ವಗತದಂತೆಯೊ,

ಪಿಸುಮಾತಿನಂತೆಯೊ ಕೇಳಿಸುತ್ತದೆ. ಆ ಆಗಿರುವ ಇಲ್ಲವೆ ಅನುಬವಿಸಿರುವ ನೋವು ಅನಿವಾರ್ಯವೂ ಆಗಿದ್ದು ಅನುಬವಿಸದ ಹೊರತು ಆಯ್ಕೆಗಳಿಲ್ಲದ ಸ್ತಿತಿಯನ್ನು ಇದು ಹೇಳುತ್ತದೆ. ಈ ಅರಿವು ಇರುವ ಜೀವವು ತಪ್ತ ಸ್ತಿತಿಯಲ್ಲಿ ನಿಂತು ತನ್ನ ನೋವುಗಳನ್ನು ಸಣ್ಣ ದನಿಯಲ್ಲಿ ಮಾತನಾಡುವಂತೆ ಇದು ಕಾಣಿಸುತ್ತದೆ. ಇದು ನೋವಿನ ಅನಿವಾರ್ಯತೆಯನ್ನು ಹೇಳುವ ಜೊತೆಗೆ ಒಂದು ವ್ಯಕ್ತಿಯ ಗಟ್ಟಿತನವನ್ನೂ ಹೇಳುತ್ತದೆ. ಅಂತಾ ವಿಪರೀತದ ನೋವನ್ನು ಉಂಡ ವ್ಯಕ್ತಿಯ ದನಿಯಾಗಿ ವಚನವು ಬರುತ್ತಿದೆಯಾದರೂ ಅದು ತುಂಬಾ ತಣ್ಣನೆಯ ಸ್ತಿತಿಯಲ್ಲಿ ನಿಂತು ಮಾತನಾಡುತ್ತಿದೆ. ನೋವಿಗೆ ಪರಿತಪಿಕೆಯಾಗಲಿ, ನೋವಿನ ಬಳಲಿಕೆಯಾಗಲಿ ಇಲ್ಲಿ ಕಂಡುಬರುವುದಿಲ್ಲ. ಆದರೆ ಅವೆಲ್ಲ ಬಹು ಆಳದಲ್ಲಿ ಬೇರು ಬಿಟ್ಟಿರುವುದನ್ನು ವಚನ ಸ್ಪಶ್ಟವಾಗಿ ತೋರಿಸುತ್ತದೆ. ಅಲ್ಲದೆ ಈ ವಚನ ಈ ನೋವಿನಿಂದ ಅನ್ಯ ದಾರಿ ಇಲ್ಲ ಎಂಬ ಅರಿವನ್ನೂ ತೋರಿಸುತ್ತದೆ. ಈ ಎಲ್ಲ ಅರಿವು ಇದ್ದೂ ಈ ಸಾಲು ಬಲು ಗಟ್ಟಿಯಾಗಿ ಮಾತನಾಡುತ್ತಿದೆ. ಇಂತಾ ಅನಿವಾರ್ಯದ ಸ್ತಿತಿಗಳು ನಮ್ಮ ನಡುವಿನ ಹಲವರಿಗೆ ಒದಗುತ್ತವೆ, ಒದಗುತ್ತಲೆ ಇರುತ್ತವೆ. ಇಂತದೆ ಒಂದು ಸ್ತಿತಿಯನ್ನು ಈ ವಚನ ಹೇಳುತ್ತಿದೆ. ಈ ವಚನದಲ್ಲಿ ಬಳಕೆಯಾದ ಬಾಶೆ ಅತ್ಯಂತ ಸಮತೂಕದ ಬಾಶೆಯಾಗಿದ್ದು ನೋವನ್ನಾಗಲಿ, ನೋವಿಗೆ ಬೇಸರವನ್ನಾಗಲಿ ಅಬಿವ್ಯಕ್ತಿಸುವ ಅವಸರಕ್ಕೆ ಬೀಳುವುದಿಲ್ಲ.

ಈ ವಚನದ ರಚನೆ ಒಂದು ಸಂಕೀರ್ಣ ವಾಕ್ಯ ಅದಕ್ಕೆ ಅಂಟಿಕೊಂಡು ಬಂದಿರುವ ಬಾಲಂಗೋಚಿಯಾಗಿರುವ ಇನ್ನೊಂದು ಸರಳ ವಾಕ್ಯ ಆಗಿದೆ. ಈ ಸಂಕೀರ್ಣ ವಾಕ್ಯದೊಳಗೆ ಹಲವು ಒಳವಾಕ್ಯಗಳು ತುಂಬಿಕೊಂಡಿವೆ. ಒಟ್ಟು ವಚನದಲ್ಲಿ ೨೨ ಪದಗಳು ಇವೆ. ಇವುಗಳನ್ನು ಸ್ವತಂತ್ರ ಆಕ್ರುತಿಮಾಗಳೆಂದು ನೋಡಿದಾಗ ಸುಮಾರು ೨೬-೨೭ ಪದಗಳು ಇವೆ. ಇಲ್ಲಿ ನಾಮಪದಗಳು ಹೆಚ್ಚಾಗಿ ಇವೆಯಾದರೂ ಕ್ರಿಯಾಪದಗಳು ಕೂಡ ಗಣಿಸುವಶ್ಟು ಬಂದಿವೆ. ಹೆಚ್ಚಾಗಿ ಅಪೂರ್ಣಕ್ರಿಯಾಪದಗಳು ಬಂದಿದ್ದು ಎರಡು ಪೂರ್ಣಕ್ರಿಯಾಪದಗಳು ಬಂದಿವೆ. ಇಲ್ಲಿ ಕೆಳಗೆ ಈ ವಚನದಲ್ಲಿ ಬಂದಿರುವ ಪದಗಳನ್ನು ಪಟ್ಟಿ ಮಾಡಿ ತೋರಿಸಿದೆ.

ನಾಮಪದ: ಜಲ, ಮಂಟಪ, ಉರಿ, ಚಪ್ಪರ, ಆಲಿಕಲ್ಲು, ಹಸೆ, ಬಾಸಿಗ, ಕಾಲು, ಹೆಂಡತಿ, ತಲೆ, ಗಂಡ, ಬಾಳುವೆ, ಚೆನ್ನಮಲ್ಲಿಕಾರ್ಜುನಯ್ಯ

ಕ್ರಿಯಾಪದ: ಇಕ್ಕಿ, ಹಾಸಿ, ಕಟ್ಟಿ, ಬಂದು, ಮುಟ್ಟು, ನೋಡು, ಬಿಡು, ಕೊಡು

ತೋರುಗಪದ: ಮೇಲೆ

ನಿಶೇದಪದ: ಇಲ್ಲ (೧)

? ಎಂದೆಂದೂ

ಸರ್ವನಾಮ: ಆನು (ಎನ್ನ)

ಚೆನ್ನಮಲ್ಲಿಕಾರ್ಜುನ ಎಂಬ ವಚನದ ಅಂಕಿತವನ್ನು ಇಲ್ಲಿ ವಿಶೇಶ ಮಾತನಾಡಬೇಕಿಲ್ಲ.

ಇನ್ನು ಈ ವಚನದಲ್ಲಿ ಬಳಕೆಯಾಗಿರುವ ಪದಗಳ ಮೇಲೆ ತುಸು ಚರ್ಚೆ ಮಾಡಬಹುದು. ಇಲ್ಲಿ ಬಳಕೆಯಾಗಿರುವ ಹೆಚ್ಚಿನ ನಾಮಪದಗಳು ಪರಸ್ಪರ ಜೋಡಿಯಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದು. ವಚನದಾಗ ಒಟ್ಟು ೧೩ ನಾಮಪದಗಳು ಇವೆ. ಇವುಗಳಲ್ಲಿ 'ಚೆನ್ನಮಲ್ಲಿಕಾರ್ಜುನಯ್ಯ' ಎಂಬ ಅಂಕಿತವನ್ನು ಹೊರತುಪಡಿಸಿ ೧೨ ಪದಗಳು ಇವೆ. ಈ ಹನ್ನೆರಡರಲ್ಲಿ ೧೦ ಪದಗಳು ಪರಸ್ಪರ ಜೋಡಿಯಲ್ಲಿ ಇವೆ. ಎರಡು ನಾಮಪದಗಳು 'ಆಲಿಕಲ್ಲು' ಮತ್ತು 'ಬಾಳುವೆ' ಇವು ಒಂಟಿಯಾಗಿ ಬಳಕೆ ಆಗಿವೆ. ಈ ಕೆಳಗಿನ ಪಟ್ಟಿಯಲ್ಲಿ ಇದು ಸ್ಪಶ್ಟವಾಗುತ್ತದೆ.

| | |
|---|---|
| ಜಲ | ಉರಿ |
| ಮಂಟಪ | ಚಪ್ಪರ |

ಆಲಿಕಲ್ಲು

| | |
|---|---|
| ಹಸೆ | ಬಾಸಿಗ |
| ಕಾಲು | ತಲೆ |
| ಹೆಂಡತಿ | ಗಂಡ |

ಬಾಳುವೆ

ಇಲ್ಲಿ ತೋರಿಸಿರುವ ಜೋಡಿ ಪದಗಳನ್ನು ಇನ್ನೊಂದು ರೀತಿಯ ಜೋಡಿಯಂತೆಯೂ ಓದಲು ಸಾದ್ಯ. ಗಮನಿಸಿ,

| | |
|---|---|
| ಜಲ | ಮಂಟಪ |
| ಉರಿ | ಚಪ್ಪರ |
| ಕಾಲು | ಹೆಂಡತಿ |
| ತಲೆ | ಗಂಡ |

ಬಾಶಾವಿಗ್ನಾನದೊಳಗೆ ಅರ್ತವಿಗ್ನಾನ ಶಾಕೆಯಲ್ಲಿ ಈ ಅರ್ತಕೇಂದ್ರಿತ ಪದಗಳ ಜೋಡಿಗಳನ್ನು ವಿಶೇಶವಾಗಿ ಅದ್ಯಯನ ಮಾಡಲಾಗುತ್ತದೆ. ಇದರಲ್ಲಿ ಉಲ್ಲೇಕಿತ ಗಟಕಗಳ ಬೂತಿಕ ಸ್ವಬಾವ, ಅವುಗಳ ನೆಲೆಗಳ ದಿಕ್ಕಿನ ಹೊಂದಿಕೆ, ಅವುಗಳ ನಡುವಿನ ಪರಸ್ಪರ ಸಂಬಂದ ಮೊದಲಾದ ನೆಲೆಯ ಜೋಡಿಪದಗಳು ಬಂದಿವೆ.

ಈ ವಚನದಲ್ಲಿ ಹೆಚ್ಚಿನ ಸಂಕೆಯ ನಾಮಪದಗಳು ಬಳಕೆ ಆಗಿದ್ದರೂ ಅದರಲ್ಲಿ ಕೆಲವು ವಿಶೇಶಣದಂತೆ ಬಳಕೆಯಾಗಿವೆ. ಇಲ್ಲಿಯೂ ಕೆಲವು ಜೋಡಿಗಳು ಇರುವುದನ್ನು ಕಾಣಬಹುದು. ಈ ವಿಶೇಶಣಗಳು ಬರುವ ರೀತಿ ಮತ್ತು ಅವು ಏನನ್ನು ಹೊಗಳುವುದಕ್ಕೆ ಬರುತ್ತವೆ ಎಂಬುದನ್ನು ಗಮನಿಸಿದಾಗ ಅಲ್ಲಿಯೂ ಎರಡು ಜೋಡಿ ಪದಪುಂಜಗಳು ಬಳಕೆಯಾಗಿರುವುದು ಕಾಣಿಸುತ್ತದೆ. ಈ ಕೆಳಗೆ ವಿಶೇಶಣ ಮತ್ತು ಅವುಗಳ ವಿಶೇಶ್ಯಗಳೊಂದಿಗೆ ಇಲ್ಲಿ ಪಟ್ಟಿಸಿದೆ. ಇದರಲ್ಲಿ ಎರಡು ನಾಮಪದಪುಂಜಗಳು ಮತ್ತು ಒಂದು ಕ್ರಿಯಾಪದಪುಂಜ ಇದೆ.

**ನಾಮಪದಪುಂಜಗಳು:**

ಜಲದ ಮಂಟಪ ಉರಿಯ ಚಪ್ಪರ

ಕಾಲಿಲ್ಲದ ಹೆಂಡತಿ ತಲೆಯಿಲ್ಲದ ಗಂಡ

**ಕ್ರಿಯಾಪದಪುಂಜ:**

ಹಸೆಯ ಹಾಸಿ ಬಾಸಿಗವ ಕಟ್ಟಿ

ಇದೆ ರೀತಿಯ ರಚನೆಯನ್ನು ತೋರುವ ಆದರೆ ರಚನೆಯಲ್ಲಿ ಇಲ್ಲದ ಎರಡು ಪದಪುಂಜಗಳನ್ನು ಇವೆ. ಅವನ್ನು ಇಲ್ಲಿ ಅವಗಾಹನೆಗೆಂದು ಕೆಳಗೆ ಕೊಟ್ಟಿದೆ.

ಆಲಿಕಲ್ಲ ಹಸೆ ಬಿಡದ ಬಾಳುವೆ

ಈ ಮೇಲೆ ಹೇಳಿದಂತೆ ಈ ವಚನದಾಗ ಬರುವ ಪದಗಳು ಜೋಡಿಯಲ್ಲಿ ಬರುತ್ತಿರುವುದು ವಿಶೇಶ. ಮೊದಲಿಗೆ 'ಜಲದ ಮಂಟಪ'ವನ್ನು ಅದರೊಟ್ಟಿಗೆ 'ಉರಿಯ ಚಪ್ಪರ'ವನ್ನು ಮಾತನಾಡಬಹುದು.

ಈ ಪದಪುಂಜಗಳಲ್ಲಿ ಮೊದಲಿಗೆ ಬಂದಿರುವ ಪದಗಳು ವಿಶೇಶಣಗಳಾಗಿ ಮತ್ತು ಎರಡನೆಯವು ವಿಶೇಶ್ಯಗಳಾಗಿವೆ. ಇವು ಬಾಶಿಕ ಬಿನ್ನತೆಯನ್ನೂ ಹೊಂದಿವೆ. ಮೊದಲನೆಯ ಜೋಡಿ ಸಂಸ್ಕ್ರುತ ಪದಗಳನ್ನು ಒಳಗೊಂಡಿದ್ದರೆ ಎರಡನೆಯ ಜೋಡಿ ಕನ್ನಡದ ಪದಗಳನ್ನು ಹೊಂದಿದೆ. ಕುತೂಹಲವೆಂದರೆ ಇಡಿಯ ವಚನದಲ್ಲಿ ಬಂದಿರುವುದು ಕೇವಲ ಎರಡು ಸಂಸ್ಕ್ರುತ ಪದಗಳು, ಉಳಿದವೆಲ್ಲ ಕನ್ನಡದವೆ ಆಗಿವೆ. ಈ ಸಂಸ್ಕ್ರುತ ಪದಗಳನ್ನು ಕನ್ನಡ ಪದಗಳ ಪದಪುಂಜವೊಂದಕ್ಕೆ ಜೋಡಿಯಾಗಿ ತರಲಾಗಿದೆ.

'ಮಂಟಪ' ಮತ್ತು 'ಚಪ್ಪರ' ಇವು ಸಾಮಾಜಿಕ-ಸಾಂಸ್ಕ್ರುತಿಕ ರಚನೆಯ ಒಳಗಿನ ಎರಡು ಬೂತಿಕ ರೂಪವಿರುವ ರಚನೆಗಳು. ಮಂಟಪವು ನೆಲದಿಂದ ಆವರಿಸಿಕೊಂಡಿದ್ದರೆ ಚಪ್ಪರವು ನೆಲದಿಂದ ಮೇಲಕ್ಕೇರಿ ನಿಂತಿರುತ್ತದೆ. ಆದರೆ ಎರಡೂ ಒಂದು ನಿರ್ದಿಶ್ಟ ಸಾಂಸ್ಕ್ರುತಿಕ ಮವುಲ್ಯಕ್ಕೆ ಎರಡು ಬಿನ್ನ ರೀತಿಯಲ್ಲಿ

ಆವರಿಸಿಕೊಂಡಿರುವಂತವು. ಮದುವೆ ಎಂಬ ಸಾಮಾಜಿಕ ರಚನೆಯೊಂದಿಗೆ ಸಂಬಂದ ಹೊಂದಿರುವಂತವು ಮತ್ತು ಅದಕ್ಕೆ ಪೂರಕವಾದ ಸಾಂಸ್ಕ್ರುತಿಕ ಮವುಲ್ಯವನ್ನು ಪಡೆದುಕೊಂಡಿರುವಂತವು. ಈ ನೆಲೆಯಲ್ಲಿ ಬಾಶಿಕ ಅರ್ತಕ್ಕಿಂತ ಸಾಂಸ್ಕ್ರುತಿಕ ಅರ್ತ ಹೆಚ್ಚಿನ ಮವುಲ್ಯ ಪಡೆದುಕೊಳ್ಳುತ್ತದೆ. ಇವೆರಡು ಸಾಮಾಜಿಕ ಮತ್ತು ಸಾಂಸ್ಕ್ರುತಿಕ, ಆದರೆ ರೂಪಗಳು, ಲೋಕಿಕವಾದವುಗಳು. ಬಾಶೆ, ವ್ಯಾಕರಣದ ಈ ಮೇಲೆ ಉಲ್ಲೇಕಿಸಿದ ಬಿನ್ನತೆಗಳ ಜೊತೆಗೆ ಈ ಬಿನ್ನತೆಗಳೂ ಸೇರಿಕೊಂಡು ಪದಪುಂಜವನ್ನು ಹೆಚ್ಚು ಸಂಕೀರ್ಣವಾಗಿಸುತ್ತವೆ.

ಈ ಚರ್ಚೆಯನ್ನು ಪದ ಹಂತದಿಂದ ಪದಪುಂಜ ಹಂತಕ್ಕೆ ಈಗ ಎತ್ತಿಕೊಳ್ಳಬಹುದು. ಆಗ ವಚನದ ಸೂಕ್ಶ್ಮತೆ ಇನ್ನೂ ಆಳಕ್ಕಿಳಿಯುತ್ತದೆ. 'ಜಲದ ಮಂಟಪ' ಮತ್ತು 'ಉರಿಯ ಚಪ್ಪರ' ಇಲ್ಲಿ ಮಂಟಪವು ನೀರಿನದಾಗಿದ್ದರೆ ಚಪ್ಪರವು ಉರಿಯದಾಗಿದೆ. ನೀರು ಮತ್ತು ಬೆಂಕಿ ಪರಸ್ಪರ ವಿರುದ್ದ ಗುಣವಿರುವ ಪ್ರಾಕ್ರುತಿಕ ಬೂತಿಕ ನಿರೂಪಿ ವಸ್ತುಗಳು.

ಇಲ್ಲಿ ಜೋಡಿಗೊಳಿಸುತ್ತಿರುವ ಪದಗಳು ಹಲವಾರು ಬಿನ್ನಾಬಿನ್ನ ಗುಣಗಳನ್ನು ಹೊಂದಿ ಬಳಕೆಯಾಗುತ್ತಿವೆ. ಈ ಜೋಡಿ ಹೆಚ್ಚು ಮಜವಾಗಿದೆ. ಈ ಎರಡು ಜೋಡಿಗಳು ಹಲವು ರೀತಿಯ ಜೋಡಿಗಳಾಗಿ ನಿಲ್ಲುವ ಕಸುವನ್ನು ಪಡೆದುಕೊಂಡಿದ್ದು, ವಚನಕ್ಕೆ ಅಸೀಮಾರ್ತಕ ಕಸುವನ್ನು ತಂದಿವೆ. ವಾಸ್ತವದಲ್ಲಿ ವಸ್ತುವೊಂದು ಇಲ್ಲದಂತಾ ರಚನೆಗಳಲ್ಲಿ ಬಾಶೆ ಹೀಗೆ ಮಾಂತ್ರಿಕ ಕೆಲಸವನ್ನು ಮಾಡುತ್ತಿರುತ್ತದೆ. ಈ ಜೋಡಿಗಳು ಬಹುಬಗೆಯ ಅರ್ತದ ಜೋಡಿ ಕಸುವನ್ನು ಕೆಳಗೆ ಗಮನಿಸಿ,

ಇಲ್ಲಿ ಇರುವ ಮತ್ತು ಇಲ್ಲದಿರುವ ಎಂಬ ಬಿನ್ನತೆಯನ್ನು ಸ್ಪಶ್ಟವಾಗಿ ಕಾಣಬಹುದು. ಮಂಟಪವು ನೀರಿನಿಂದ ಮಾಡಿರುವಂತದ್ದಾಗಿದೆ ಚಪ್ಪರವನ್ನು ಬೆಂಕಿಯಿಂದ ಮಾಡಿದೆ. ಇವೆರಡು ಸಹಜವಾಗಿ ಅಸಂಬವಗಳೆ. ಮಂಟಪ ಎನ್ನುವುದು ಇರುವಂತದ್ದು ಆದರೆ ಜಲದ ಮಂಟಪ ಎನ್ನುವಂತದ್ದು ಇರಲಾರದ್ದು. ಚಪ್ಪರ ಇರುವಂತಾ ಬೂತಿಕ ವಸ್ತು, ಆದರೆ ಬೆಂಕಿಯ ಚಪ್ಪರ ಇರದಿರುವಂತದ್ದು. ಅಲ್ಲದೆ ಈ ಎರಡು ಪದಪುಂಜಗಳು ಇನ್ನೊಂದು ಮಹತ್ವದ ವಿಚಾರವನ್ನು ಕೊಡುತ್ತವೆ. ಮೂಲಬೂತವಾಗಿ ರೂಪ–ನಿರೂಪಗಳ ಚರ್ಚೆ ಇಲ್ಲಿದೆ. ಮಂಟಪ ರೂಪಿಯಾದರೆ ನೀರು ನಿರೂಪಿ. ಹಾಗೆಯೆ ಚಪ್ಪರ ರೂಪಿಯಾದರೆ ಬೆಂಕಿ ನಿರೂಪಿ. ಮಂಟಪ ಮತ್ತು ಚಪ್ಪರ ಇವು ಸಾಮಾಜಿಕ ಜಗತ್ತಿನಲ್ಲಿ ರಚನೆಯನ್ನು ಪಡೆದುಕೊಂಡಿರುವ ಎರಡು ಬೂತ ರೂಪಗಳು. ಅವುಗಳಿಗೆ ಬೂತಿಕವಾದ ನಿರ್ದಿಶ್ಟ ಆಕಾರವನ್ನೂ, ಸಾಮಾಜಿಕ ಜಗತ್ತಿನಲ್ಲಿ ನಿರ್ದಿಶ್ಟ ಕೆಲಸವನ್ನೂ, ಸಾಂಸ್ಕ್ರುತಿಕ ಜಗತ್ತಿನಲ್ಲಿ ನಿರ್ದಿಶ್ಟ ಮವುಲ್ಯವನ್ನೂ ಆರೋಪಿಸಿಲಾಗಿದೆ. ಈ ಎಲ್ಲ ಆರೋಪಿತ ಅರ್ತ-ಮವುಲ್ಯಗಳು ನಿರಂತರ ಕುಸಿಯುವ–ಬೆಳೆಯುವ ಗುಣಕ್ಕೆ ಪಕ್ಕಾಗಿಯೆ ಇರುತ್ತವೆ

ಎಂಬುದನ್ನು ಇಲ್ಲಿ ಬೇರೆ ಹೇಳಬೇಕಿಲ್ಲ. ಅಂದರೆ ಇವೆರಡು ಸ್ಪಷ್ಟವಾಗಿ ಸಾಮಾಜಿಕವಾದವು ಮತ್ತು ಬೂತಿಕವಾದವು. ಇವುಗಳನ್ನು ಒಡೆಯುವ ರೀತಿಯಲ್ಲಿ ಇನ್ನೆರಡು ಸಾಮಾಜಿಕವಲ್ಲದ ಆದರೆ ಪ್ರಾಕ್ರುತಿಕವಾದ ಮತ್ತು ರೂಪಿಯಲ್ಲದ ಆದರೆ ನಿರೂಪಿಯಾದ ಪದಗಳು ಬಳಕೆಯಾಗಿವೆ. ಈ ಮೇಲೆ ಹೇಳಿದ ಸಾಲನ್ನೆ ಮತ್ತೆ ಇಲ್ಲಿ ಕೊಡಬಹುದು, ಮಂಟಪ ರೂಪಿಯಾದರೆ ನೀರು ನಿರೂಪಿ. ಹಾಗೆಯೆ ಚಪ್ಪರ ರೂಪಿಯಾದರೆ ಬೆಂಕಿ ನಿರೂಪಿ. ಹಾಗೆಯೆ ಮಂಟಪ ಸಾಮಾಜಿಕವಾದರೆ ನೀರು ಪ್ರಾಕ್ರುತಿಕ, ಚಪ್ಪರ ಸಾಮಾಜಿಕವಾದರೆ ಬೆಂಕಿ ಪ್ರಾಕ್ರುತಿಕ. ಇಲ್ಲಿ ಪ್ರಾಕ್ರುತಿಕ ಮತ್ತು ಸಾಮಾಜಿಕ ಈ ಎರಡನ್ನೂ ಎದುರುಬದುರಾಗಿಸುವ ಪ್ರಯತ್ನ ಕಾಣಿಸುತ್ತದೆ. ಸಾಮಾಜಿಕದ ಬ್ರಮೆಯನ್ನು ಒಡೆಯುವುದಕ್ಕೆ ಈ ರೀತಿಯ ರಚನೆಯನ್ನು ತರುತ್ತಿರುವಂತಿದೆ. ಬೂತಿಕ ಜಗತ್ತು ಒಂದು ಅವಾಸ್ತವ ಎಂಬುದನ್ನು ಇದು ಹೇಳುತ್ತಿದೆ. ಬಯಲಿನ ಪರಿಕಲ್ಪನೆಯನ್ನು ಇದರ ಹಿಂದೆ ಕಾಣಲು ಸಾದ್ಯವಿದೆ. ಮಂಟಪ, ಚಪ್ಪರ ಇವು ವಾಸ್ತವ ಎಂಬುದನ್ನು ಪ್ರಶ್ನಿಸುವುದು ತುಸು ಕಶ್ಟ. ಹಾಗಾಗಿ ಇವೆರಡೂ 'ಇರು'ವಂತವು ಎಂಬುದು ಸಾಮಾಜಿಕ ಜೀವನದಲ್ಲಿ ಒಪ್ಪಿತ. ಆದರೆ 'ಜಲದ ಮಂಟಪ'ವಾಗಲಿ 'ಉರಿಯ ಚಪ್ಪರ'ವಾಗಲಿ ಇರಲಾರದವು.

'ಆಗು'ವ ತಾತ್ವಿಕತೆಯನ್ನು ಇಟ್ಟುಕೊಂಡು ಗಮನಿಸಿದಾಗ ಇಲ್ಲಿ 'ಇರು'ವುದೆಲ್ಲವೂ ಇರುವ ಬ್ರಮೆಗಳು ಮಾತ್ರ ಆದರೆ ಅವು 'ಆಗು'ವ ಪ್ರಕ್ರಿಯೆಯಗಳ ತುಣುಕುಗಳು ಮತ್ತು ತುಸು ನಿಲುದಾಣಗಳು ಎಂಬ ವಿಚಾರವನ್ನು ಗಮನಿಸಲು ಸಾದ್ಯವಿದೆ. ಆಗ, ಇದೆ ಎಂಬುದು ಬ್ರಮೆ ಎಂಬ ಮತ್ತು ಇಲ್ಲ ಎಂಬುದು ವಾಸ್ತವ ಎಂಬ ಅರ್ತ ಹೊಳೆಯುತ್ತದೆ. ಇಲ್ಲ ಎಂಬುದು ವಾಸ್ತವ ಎಂದರೆ 'ಆಗು'ವ ಪ್ರಕ್ರಿಯೆ ಮಾತ್ರ ವಾಸ್ತವ ಬದಲಿಗೆ ಯಾವುದೂ ಇಲ್ಲ ಎಂಬ ಅರ್ತದಲ್ಲಿ. ಈ ವಿಚಾರದ ನೇರದಲ್ಲಿ ನೋಡಿದಾಗ ಈ ಮೊದಲು ಉಲ್ಲೇಕಿಸಿದ ರೂಪಿ-ನಿರೂಪಿ ವಿಚಾರವೂ ಅದಕ್ಕೆ ಅಂಟಿಕೊಳ್ಳುತ್ತದೆ. ಮಂಟಪ ಎಂಬುದು ರೂಪಿ, ಇದೆ. ಆದರೆ ವಾಸ್ತವದಲ್ಲಿ ಅದು ಇಲ್ಲ, ಯಾಕೆಂದರೆ ಅದು 'ಜಲದ ಮಂಟಪ' ರೂಪವಲ್ಲದ, ರೂಪಿಯಲ್ಲದ ಒಂದು ವಸ್ತು ರೂಪವನ್ನು ಕಟ್ಟುತ್ತದೆ ಎಂಬುದು ಒಂದು ಬ್ರಮೆ. ಹಾಗೆಯೆ ಚಪ್ಪರದ ವಿಚಾರದಲ್ಲಿಯೂ ಇದು ಕಾಣಿಸುತ್ತದೆ. ಚಪ್ಪರ ರೂಪಿಯಾದರೂ ಬೆಂಕಿ ನಿರೂಪಿ. ಗಮನಿಸಿ, 'ಜಲ' ಮತ್ತು 'ಉರಿ' ಇವು ಕ್ರಮವಾಗಿ 'ಮಂಟಪ' ಮತ್ತು 'ಚಪ್ಪರ'ವನ್ನು ರೂಪಿಸುವ, ಮಾಡುವ ಗುಣವನ್ನು ಹೊಂದಿಲ್ಲ ಆದರೆ ಆಪೋಶನ ಮಾಡಿಕೊಳ್ಳುವ ಗುಣವನ್ನು ಹೊಂದಿವೆ. ವಚನದಲ್ಲಿ 'ಜಲ'ದಿಂದ ಮಾಡಿದ 'ಮಂಟಪ' ಎಂಬ ಬಳಕೆ ಇದೆ. ಆದರೆ 'ಜಲ' ಮಂಟಪವನ್ನು ಮಾಡುವ ಗುಣವನ್ನು ಹೊಂದಿಲ್ಲದೆ ಅದನ್ನು ನುಂಗಿಹಾಕುವ ಕಸುವವನ್ನು ಹೊಂದಿದೆ. 'ಉರಿ'ಯ 'ಚಪ್ಪರ'ದ ಸಂದರ್ಬದಲ್ಲಿಯೂ ಇದು ಸರಿ. ಇಲ್ಲಿ, ಆಗುವ ಪ್ರಕ್ರಿಯೆಯ ದಿಕ್ಕುಗಳನ್ನು ತುಸು ಗಮನಿಸಬೇಕು. 'ಆಗುವಿಕೆ' ಇಲ್ಲಿ ಕಂಡುಬರುವ ವಿಚಾರ ಎನ್ನುವುದಾದರೆ ಆಗುತ್ತಿರುವುದು ಏನು ಎಂಬುದನ್ನು ಗಮನಿಸಬಹುದು. ವಾಸ್ತವದಲ್ಲಿ ಈ ಜೋಡಿ ಆಗುವ ಪ್ರಕ್ರಿಯೆಯನ್ನು

ಹೇಳುತ್ತಿರುವುದು ನಿಜವಾದರೂ ವಾಸ್ತವ ಬದುಕಿನಲ್ಲಿ ಆಗದಿರುವುದನ್ನೆ ಹೇಳುತ್ತಿದೆ. ಅಂದರೆ ನೀರಿನ ಮಂಟಪ ಆಗಲಾರದ್ದು ಹಾಗೆಯೆ ಬೆಂಕಿಯ ಚಪ್ಪರ ಕೂಡ. ಇದು ತಾತ್ವಿಕ ನೆಲೆಯಲ್ಲಿ ಆಗುವ ಪ್ರಕ್ರಿಯೆಯಾಗುತ್ತದೆ.

ಹೀಗೆ ಈ ಎರಡು ಪದಪುಂಜಗಳು ಹಲವು ನೆಲೆಯ ಜೋಡಿಗಳಾಗಿ ನಿಲ್ಲುತ್ತವೆ. ಇವುಗಳನ್ನು ಎರಡು ಹಂತದಲ್ಲಿ ಅಂದರೆ ಅವುಗಳಲ್ಲಿ ಬಳಕೆಯಾಗಿರುವ ಪದಗಳ ನೆಲೆಯಲ್ಲಿ ಮತ್ತು ಒಟ್ಟು ಪದಪುಂಜದ ನೆಲೆಯಲ್ಲಿ ಎಂದು ಅರ್ತವಿಸಿಕೊಳ್ಳಬಹುದು. ಇಲ್ಲಿ ಈ ಪದಪುಂಜಗಳು ಅರ್ತ ಮಾಡಿಕೊಳ್ಳಬಹುದಾದ ವಿವಿದ ನೆಲೆಗಳನ್ನು ಪಟ್ಟಿಸುವ ಪ್ರಯತ್ನ ಮಾಡಿದೆ.

| | | | |
|---|---|---|---|
| ಕನ್ನಡ | – | ಸಂಸ್ಕ್ರುತ | (ಬಾಶೀಕ) |
| ವಿಶೇಶಣ | – | ವಿಶೇಶ್ಯ | (ವಾಕ್ಯರಣಾತ್ಮಕ) |
| ಸಾಮಾಜಿಕ | – | ಪ್ರಾಕ್ರುತಿಕ | |
| ರೂಪಿ | – | ನಿರೂಪಿ | |
| ಬೂತಿಕ/ಲೋಕಿಕ | – | ಅಬೂತಿಕ/ಆಗಮಿಕ | |
| ಇರು | – | ಆಗು | |

ಇದು ಮುಂದೆ ವ್ಯಕ್ತಿಯೊಂದು ಬದುಕಿನಲ್ಲಿ ಬ್ರಮಿಸಿಕೊಳ್ಳಬಹುದಾದ ಅವಾಸ್ತವಗಳ ಪರಮಾವದಿ ಎಂತದ್ದಾಗಬಹುದು ಎಂಬುದನ್ನು ಹೇಳುತ್ತದೆ. ನೀರನ್ನು ಮಂಟಪವೆಂದೂ ಬೆಂಕಿಯನ್ನು ಚಪ್ಪರವೆಂದೂ ಬ್ರಮಿಸಿಕೊಂಡ ಬದುಕನ್ನು ಇಲ್ಲಿ ಕಲ್ಪಿಸಿಕೊಳ್ಳಬಹುದು. ಹಲವರ ಬದುಕಿನಲ್ಲಿ ಈ ಸ್ತಿತಿಗಳು ಇರುತ್ತವೆ, ಬಂದು ಹೋಗುತ್ತಿರುತ್ತವೆ. ಹೀಗೆ ಈ ಪದಪುಂಜಗಳ ಪ್ರಯೋಗವನ್ನು ವ್ಯಕ್ತಿಯ ಮಾನಸಿಕ ನೆಲೆಯ ನೇರದಲ್ಲಿ ನೋಡಿದಾಗ ಬಹು ಸಶಕ್ತ ಉಪಮೆಗಳಾಗಿ ಕಾಣಿಸುತ್ತದೆ. ಮುಕ್ಯವಾಗಿ ಸಾಮಾಜಿಕ ರಚನೆ, ಕಟ್ಟುಕಟ್ಟಳೆಯ ಒಳಗೆ ನಿಂತಿರುವ ವ್ಯಕ್ತಿಯೊಂದರ ಮಾನಸಿಕತೆ ಎಂದು ಇದನ್ನು ಗಮನಿಸಬೇಕು. ಆಗ ಈ ಪದಪುಂಜಗಳ ಸಶಕ್ತ ಸ್ವರೂಪ ದರುಶನವಾದೀತು.

ಇನ್ನು ಮುಂದಿನ ಪದಗಳ ಜೋಡಿ 'ಹಸೆ' ಮತ್ತು 'ಬಾಸಿಗ' ಇವನ್ನು ಚರ್ಚಿಸಿಬಹುದು. 'ಹಸೆ' ಮತ್ತು 'ಬಾಸಿಗ' ಇವು ನಿರ್ದಿಶ್ಟವಾಗಿ ಮದುವೆ ಎಂಬ ಸಾಂಸ್ಕ್ರುತಿಕ ರಚನೆಯಲ್ಲಿನ ಎರಡು ಬೂತಿಕ ವಸ್ತುಗಳು. ವಾಸ್ತವದಲ್ಲಿ ಇವು ಪರಿಕಲ್ಪನೆಗಳು. ಪ್ರಾಕ್ರುತಿಕ ವಸ್ತುಗಳಿಗೆ ಸಾಂಸ್ಕ್ರುತಿಕ ಮವುಲ್ಯವನ್ನು ಆರೋಪಿಸಿದಂತವು. ಈ ಜೋಡಿಗಳಲ್ಲಿ 'ಹಸೆ'ಯನ್ನು ಮಾತ್ರ 'ಆಲಿಕಲ್ಲ' ಎಂಬ ವಿಶೇಶಣದೊಂದಿಗೆ ಬಳಸಿದೆ. 'ಬಾಸಿಗ'ಕ್ಕೆ ಯಾವುದೆ ವಿಶೇಶಣದ ಬಳಕೆ ಆಗಿಲ್ಲ. ಈ ಅಸಮತೋಲನ ಏನನ್ನು ತೋರಿಸುತ್ತದೆಯೊ ನನ್ನ ಅರಿವಿಗೆ ಎಟುಕುತ್ತಿಲ್ಲ. ಇದನ್ನು

ಇನ್ನಷ್ಟು ಆಳದಲ್ಲಿ ನಿರುಕಿಸಿ ನೋಡಬೇಕಿದೆ. ಬದುಕೆಂಬುದು ನಿರಂತರ ಅಮಸ, ಅಸಮತೋಲನವಾಗಿರುತ್ತದೆ ಎಂಬುದನ್ನು ಇಲ್ಲಿ ಕಾಣಬಹುದೆ ಯೋಚಿಸಬಹುದು. 'ಹಸೆ' ಎನ್ನುವುದು ಒಂದು ಸಾಂಸ್ಕೃತಿಕ ಪದ. ಸಾಮಾನ್ಯವಾಗಿ ಕರ್ನಾಟಕದ ಹಲವಾರು ಸಮುದಾಯಗಳಲ್ಲಿ ಮದುವೆಯನ್ನು ಮಾಡುವಾಗ ದಾನ್ಯಗಳಿಂದ ಹಸೆಯನ್ನು ಹಾಸಲಾಗುತ್ತದೆ. ದಾನ್ಯಗಳು ಪಲ, ಅವು ಅನ್ನ, ಅವು ಬದುಕು, ಅವು ಒಕ್ಕಲು. ಈ ಸಾಂಕೇತಿಕತೆಯನ್ನು ಅವುಗಳಲ್ಲಿ ಕಾಣಬಹುದು. 'ಹಸೆ' ತನ್ನೆಲ್ಲ ಸಾಂಸ್ಕೃತಿಕ ಮವುಲ್ಯದಲ್ಲಿ ಪಲವಂತಿಕೆಯನ್ನು ಪ್ರತಿನಿದಿಸುತ್ತದೆ. ಇದು ಮುಂದುವರಿಕೆ ಇಲ್ಲವೆ ನಿರಂತರತೆಯನ್ನೂ ಪ್ರತಿನಿದಿಸುತ್ತದೆ. ದಾನ್ಯಗಳು ಬೀಜಗಳೂ ಹವುದು. ಮದುವೆ ಈ ಆಶಯಕ್ಕಾಗಿ ಅಂದರೆ ಪಲವಂತಿಕೆಗಾಗಿ ಮತ್ತು ಕುಟುಂಬ ಎಂಬ ಇನ್ನೊಂದು ಸಾಮಾಜಿಕ ಪರಿಕಲ್ಪನೆಯ ನಿರಂತರತೆಗಾಗಿ, ಮುಂದುವರಿಕೆಗಾಗಿ ಮಾಡಿಕೊಂಡಿರುವ ರಚನೆಯ ಪೋಶಕ ರಚನೆ.

ಈ ಮೇಲೆ ಮೊದಲ ಪದಪುಂಜದ ಜೋಡಿಯಲ್ಲಿ ವಿಚಿತ್ರ ರೂಪಕಗಳನ್ನು ತಂದಿರುವ ವಚನ ಮುಂದುವರೆದು ಅಂತದೆ ಅವಾಸ್ತವ ವಾಸ್ತವವನ್ನು ಇಲ್ಲಿಯೂ ತರುತ್ತಿದೆ. ಈ ಮೇಲೆ 'ಹಸೆ' ಸಂಕೇತಿಸುವ ವಿಚಾರಗಳನ್ನು ಪ್ರಸ್ತಾಪಿಸಲಾಯಿತು. ಈ ಎಲ್ಲವಕ್ಕೂ ತದ್ವಿರುದ್ದವಾದ 'ಆಲಿಕಲ್ಲ'ನ್ನು ವಚನ 'ಹಸೆ'ಗೆ ವಿಶೇಶಣವಾಗಿ ತರುತ್ತಿದೆ.

ವಾಸ್ತವದಲ್ಲಿ 'ಆಲಿಕಲ್ಲು' ಪ್ರಾಕ್ರುತಿಕ ಆದರೆ ಕ್ಶಣಿಕ ರೂಪಿ. ತುಸುಗಾಲದಲ್ಲಿ ಕರಗುವ, ಇಲ್ಲವಾಗುವ ಗುಣವಿರುವಂತದ್ದು. ನೇರವಾಗಿ ಇದನ್ನು ಪಲವಂತಿಕೆಗೆ ಇಲ್ಲವೆ ಇನ್ನಾವುದಾದರೂ ಸಾಮಾಜಿಕ ರಚನೆಗೆ ಪೋಶಕವಾದ ಮವುಲ್ಯಗಳೊಂದಿಗೆ ಕನ್ನಡ ಬಾಶಿಕ ಸಮುದಾಯ ಬಳಸುವುದಿಲ್ಲ. ಹಾಗಾಗಿ 'ಹಸೆ'ಯ ಸಾಂಸ್ಕೃತಿಕ ಮವುಲ್ಯವನ್ನು ಒಡೆಯುವ ರೀತಿಯಲ್ಲಿ ಅಂದರೆ 'ಹಸೆ' ಕೊಡುವ ಸಾಮಾಜಿಕ-ಸಾಂಸ್ಕೃತಿಕ ಪರಿಕಲ್ಪನೆಗಳನ್ನು ಒಡೆಯುವ ರೀತಿಯಲ್ಲಿ ಈ ಪದಪುಂಜ ಬಳಕೆಯಾಗಿದೆ. ಗಮನಿಸಿ, ಮಂಟಪವೂ, ಚಪ್ಪರವೂ ಕ್ಶಣಿಕ ಎಂಬ ವಿಚಾರವನ್ನು ಕೊಡುತ್ತಿರುವಂತೆಯೆ ಹಸೆ ಕೂಡ ಕ್ಶಣಿಕ ಎಂಬ ಅರ್ತವನ್ನು ಇದು ಕೊಡುತ್ತಿದೆ.

ಇಲ್ಲಿ ಬಳಕೆಯಾಗಿರುವ ಇನ್ನೊಂದು ಪದ 'ಬಾಸಿಗ'. ಇದೂ ಕೂಡ ಮದುವೆಗೆ ಸಂಬಂದಿಸಿದ ಒಂದು ಸಾಂಸ್ಕೃತಿಕ ಪರಿಕಲ್ಪನೆ. ಈ ಮೇಲಿನ 'ಮಂಟಪ' ಮತ್ತು 'ಚಪ್ಪರ' ಪದಜೋಡಿಗಳು ನೆಲದ ನಂಟಿನೊಂದಿಗೆ ತುಸು ಬಿನ್ನತೆಯನ್ನು ತೋರಿಸುತ್ತವೆ. ಅದರ ಮುಂದುವರಿಕೆಯಂತೆ 'ಹಸೆ' ಮತ್ತು 'ಬಾಸಿಗ'ಗಳನ್ನು ಅರ್ತ ಮಾಡಿಕೊಳ್ಳಲು ಸಾದ್ಯವಿದೆ. ಮದುವೆಯಲ್ಲಿ 'ಹಸೆ' ಕಾಲ ಕೆಳಗೆ ಇದ್ದರೆ 'ಬಾಸಿಗ' ಕಾಲ ಮೇಲೆ, ತಲೆಯ ಮೇಲೆ ಇರುತ್ತದೆ. ಈ ಕೆಳ-ಮೇಲೆ ರಚನೆ ಮುಂದೆ ವಚನದಲ್ಲಿ ಮತ್ತೆ ಮುಂದುವರೆಯುವುದರಿಂದ ಈ ರೀತಿ ಓದುವುದು ಅವಶ್ಯವಾಗತ್ತದೆ. 'ಹಸೆ'ಗೆ ಬಂದಿರುವ ವಿಶೇಶಣ 'ಬಾಸಿಗ'ಕ್ಕೂ ವಿಶೇಶಣವಾಗಿ

ಬಂದಿರುವಂತೆ ಓದಬಹುದಾದರೂ ವಚನದ ರಚನೆ ಅದಕ್ಕೆ ಅವಕಾಶವನ್ನು ಕೊಡುವುದಿಲ್ಲ. ಉಳಿದೆಡೆ ವಿಶೇಶಣ-ವಿಶೇಶ್ಯ ಪದಪುಂಜಗಳ ಜೋಡಿಗಳು ಇರುವುದು ಮತ್ತು ಇಡಿಯ ವಚನ ಅಪೂರ್ಣ ಕ್ರಿಯಾಪದಗಳಿಂದ ಕೂಡಿ ಹಲವು ಕ್ರಿಯೆಗಳ ಸರಪಣಿಯೊಂದನ್ನು ಪೋಣಿಸುತ್ತಿರುವುದು, ಪ್ರತಿ ಪರಿಕಲ್ಪನೆ ಒಂದು ನಿರ್ದಿಶ್ಟ ಕ್ರಿಯಾಪದವನ್ನು ಹೊಂದಿರುವುದು ಇವನ್ನು ಗಮನಿಸಬೇಕು. 'ಬಾಸಿಗ'ವೂ 'ಕಟ್ಟು'ವ ಕ್ರಿಯೆಯೊಂದಿಗೆ ಅಂಟಿಕೊಂಡಿದೆ. ಈ ವಾಕ್ಯದ ಪದಗಳ ಮತ್ತು ಪದಪುಂಜಗಳ ಚರ್ಚೆಯ ಕೊನೆಯಲ್ಲಿ ಇದರಲ್ಲಿನ ಕ್ರಿಯಾಪದಗಳ ಚರ್ಚೆಯನ್ನ ಎತ್ತಿಕೊಳ್ಳಲಾಗುವುದು.

ವಚನದ ಮೊದಲ ವಾಕ್ಯದಲ್ಲಿ ಬರುವ ಮೊದಲ ಜೋಡಿ ಪದಪುಂಜಗಳು ಸಾಮಾಜಿಕ-ಸಾಂಸ್ಕ್ರುತಿಕವಾದ ಬೂತಿಕ ರೂಪಿಗಳು. ಎರಡನೆಯ ಜೋಡಿ ಪದಗಳು ನೇರವಾಗಿ ಮದುವೆಗೆ ಸಂಬಂದಿಸಿದ ಪರಿಕಲ್ಪನಾತ್ಮಕ ರೂಪಿಗಳು. ಹೀಗೆ ವಚನ ಕೆಳಗಿಳಿಯುತ್ತಾ ಮುಂದಿನ ಜೋಡಿ ಪದಪುಂಜದಲ್ಲಿ ಮದುವೆಯ ಚರ್ಚೆಯನ್ನು ಮುಂದುವರೆಸುತ್ತದೆ.

ಮದುವೆಯ ರೂಪಕಗಳನ್ನು ಮಾತನಾಡುತ್ತಾ ಹೊರಡುವ ವಚನ ಅದರ ಸಂಕೀರ್ಣವಾಕ್ಯದ ಒಳಗೆ 'ಹೆಂಡತಿ' 'ಗಂಡ'ರನ್ನು ತರುತ್ತದೆ. ಇಲ್ಲಿ 'ಹೆಂಡತಿ-ಗಂಡ' ಈ ಸಾಮಾಜಿಕ ಪರಿಕಲ್ಪನೆಗಳನ್ನು ಮಾತನಾಡಬೇಕಾದ ಅವಶ್ಯಕತೆ ಇಲ್ಲ. ಇವು ಮನುಶ್ಯ, ಮನುಶ್ಯರ ಮೂಲಬೂತವಾದ ಅವಶ್ಯಕತೆಗಳಲ್ಲಿ ಒಂದಾದ ಕಾಮ, ಸಂಗ-ಜೊತೆ ಮೊದಲಾದ ವಯಕ್ತಿಕ ನೆಲೆಯ ಹಾಗೆಯೆ ಕುಟುಂಬ, ಬದುಕು, ಸಂತಾನ ಮೊದಲಾದ ಸಾಮಾಜಿಕ ನೆಲೆಯ ಈ ಎಲ್ಲವನ್ನೂ ಒಳಗೊಂಡಿರುವ ಮದುವೆ ಎಂಬ ಸಾಮಾಜಿಕ ರಚನೆಯ ಎರಡು ಕೇಂದ್ರಗಳು ಇಲ್ಲವೆ ಪಾತ್ರಗಳು.

ಇದುವರೆಗೆ ಬೂತಿಕವಾಗಿ ಅವಾಸ್ತವವಾದವುಗಳನ್ನು ತರುವ ವಚನ ಇಲ್ಲಿ ಇದ್ದಕಿದ್ದ ಹಾಗೆ ಅದಕ್ಕೆ ವಿರುದ್ದವಾಗಿ ಲೋಕದಲ್ಲಿ ಸಹಜವಾಗಿ ಇರಬಹುದಾದವನ್ನು ಅಂದರೆ 'ಕಾಲಿಲ್ಲದ ಹೆಂಡತಿ', 'ತಲೆಯಿಲ್ಲದ ಗಂಡ'ರನ್ನು ತರುತ್ತದೆ. ಈ ಮೊದಲ ಜೋಡಿ ಪದಗಳಲ್ಲಿ, ಜೋಡಿ ಪದಪುಂಜಗಳಲ್ಲಿ ವಚನ ತೋರುವ ವಿಚಿತ್ರಗಳನ್ನು ತರುವ, ಬೂತಿಕ-ಸಾಮಾಜಿಕವನ್ನು ಒಡೆಯುವಂತಾ ಪ್ರಯತ್ನ ಇಲ್ಲಿಯೂ ಕಾಣಿಸುತ್ತದೆ. ಮೊದಲಿಗೆ ಇತಿಹಾಸಿಕವಾಗಿರಬಹುದಾದ, ಸಾಮಾಜಿಕ ರಚನೆಯ ಇತಿಹಾಸಕ್ಕೆ ಸಂಬಂದಿಸಿರಬಹುದಾದ ಒಂದು ವಿಚಾರವನ್ನು ಉಲ್ಲೇಕಿಸಿ ಕವನದ ಚರ್ಚೆ ಮುಂದುವರೆಸಬಹುದು. ವಚನದ ಆಶಯವನ್ನು ಹೇಳುವ ಆಸಕ್ತಿ ಇಲ್ಲದ ಈಗಿನ ಬರಹಕ್ಕೆ ಇತಿಹಾಸವನ್ನು ಹೇಳುವ ಆಸಕ್ತಿಯೂ ವಾಸ್ತವದಲ್ಲಿ ಬೇಕಿಲ್ಲ. ಆದರೆ, ಈ ವಾಸ್ತವ ವಚನದ ಓದಿಗೆ ತುಸು ಸಹಾಯಕವಾಗಬಹುದೆ ತಿಳಿಯದು. ಸಹಾಯಕವಾಗುವುದಾದರೆ ಅವಶ್ಯ ಎಂಬ ಕಾರಣದಿಂದ ಇಲ್ಲಿ ಚರ್ಚಿಸಿದೆ.

ವಚನದಲ್ಲಿ ಮೊದಲಿಗೆ 'ಹೆಂಡತಿ' ಬರುತ್ತಿರುವುದನ್ನು ಗಮನಿಸಬೇಕು. ಅಕ್ಕಮಹಾದೇವಿ ಬದುಕಿದ್ದ ಕಾಲ ಹೆಣ್ಣುಕೇಂದ್ರಿತ ಕುಟುಂಬ ಮತ್ತು ಸಾಮಾಜಿಕ ವ್ಯವಸ್ತೆ ತೀವ್ರವಾಗಿ ಗಂಡುಕೇಂದ್ರಿತವಾಗಿ ಬದಲಾಗುತ್ತಿದ್ದ ಕಾಲ. ಅಲ್ಲದೆ ಗಂಡುಕೇಂದ್ರಿತ ವ್ಯವಸ್ತೆಯನ್ನು ಪೋಶಿಸುವ ತಾತ್ವಿಕತೆಯನ್ನು ಅಕ್ಕ ಪ್ರಗ್ನಾಪೂರ್ವಕವಾಗಿ ಒಪ್ಪಿಕೊಂಡ ವ್ಯಕ್ತಿ. ಅದರ ಅರಿವು ಆಕೆಗೆ ಸ್ಪಶ್ಟವಾಗಿದ್ದಿತು. ಆದ್ದರಿಂದಲೆ ಅಕ್ಕನ ಅನೇಕ ವಚನಗಳಲ್ಲಿ ಹೆಣ್ಣು ನಿರಂತರ ಪ್ರಸ್ತುತಿ ಪಡೆದುಕೊಳ್ಳುತ್ತದೆ. ಹೆಣ್ಣುಕೇಂದ್ರಿತ ತಾತ್ವಿಕ ಪಂತವೊಂದಕ್ಕೆ ಸಂಬಂದಿಸಿದ್ದರಬಹುದಾದ ಒಬ್ಬ ವ್ಯಕ್ತಿ ಪ್ರಗ್ನಾಪೂರಕವಾಗಿ ಗಂಡುಕೇಂದ್ರಿತ ತಾತ್ವಿಕತೆಯನ್ನು ಹೇಳುವ ಪಂತವೊಂದನ್ನು ಒಪ್ಪಿಕೊಂಡಿರುವಂತೆ, ಮತ್ತು ತಾನು ಬಂದಿರುವ ಹೊಸದಾದ ಪಂತವನ್ನು ಹಲವಾರು ಕಡೆ ವಿಮರ್ಶಿಸುವಂತೆ, ಹೆಣ್ಣುಕೇಂದ್ರಿತ ತಾತ್ವಿಕತೆಯನ್ನು ಇನ್ನೂ ಇಲ್ಲಿಯೂ ಮುಂದುವರೆಸುವಂತೆ ಅಕ್ಕ ಬರೆಯುತ್ತಾಳೆ. ಇದನ್ನು ಬೇರೊಂದು ಬರಹದಲ್ಲಿ ಚರ್ಚಿಸಬಹುದು. ಅದಕ್ಕೆ ಅಕ್ಕನ ಎಲ್ಲ ವಚನಗಳನ್ನು ಅದ್ಯಯನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಇರಲಿ. ಈ ಅನುಕ್ರಮಕ್ಕೆ ಅಂದರೆ 'ಹೆಂಡತಿ'ಯನ್ನು ಮೊದಲು ತರುವ 'ಗಂಡ'ನನ್ನು ನಂತರ ತರುವ ಅನುಕ್ರಮಕ್ಕೆ ಬೇರಾವ ಓದುಗಳ ಸಾದ್ಯತೆಯಿದೆಯೊ ತಿಳಿಯದು.

ಇಲ್ಲಿ 'ಕಾಲಿಲ್ಲದ ಹೆಂಡತಿ' ಮತ್ತು 'ತಲೆಯಿಲ್ಲದ ಗಂಡ' ಇವುಗಳನ್ನು ಅರ್ತ ಮಾಡಿಕೊಳ್ಳುವುದು ನನಗೆ ತುಂಬಾ ಕಶ್ಟವೆನಿಸುತ್ತಿದೆ. 'ಕಾಲು' 'ತಲೆ' ಇವುಗಳನ್ನು ಜೋಡಿಯಂತೆ ನೋಡಲು ಸಾದ್ಯ. ಇವು ಕ್ರಮವಾಗಿ 'ಹೆಂಡತಿ' ಮತ್ತು 'ಗಂಡ' ಇವುಗಳ ಜೊತೆಗೆ ಬರುತ್ತಿವೆ. ಆದರೆ 'ಕಾಲು' ಮತ್ತು 'ಹೆಂಡತಿ' ಹಾಗೆಯೆ 'ತಲೆ' ಮತ್ತು 'ಗಂಡ' ಹೀಗೆ, ಜೋಡಿಯಾಗಿ ಇವುಗಳನ್ನು ಅರ್ತ ಮಾಡಿಕೊಳ್ಳುವುದಕ್ಕೆ ನನಗೆ ಸಾದ್ಯವಾಗುತ್ತಿಲ್ಲ. ಆದರೆ ವಚನದ ಇತರ ಜೋಡಿಗಳ ಜೊತೆ ಸಮಾನವಾಗಿರುವ ಒಂದು ವಿಚಾರವನ್ನು ಕಾಣಬಹುದು. ಅದೆಂದರೆ, ಚಪ್ಪರ – ಮಂಟಪ ಮತ್ತು ಹಸೆ – ಬಾಸಿಗ ಇವು ಕೆಳಗಿನಿಂದ, ನೆಲದಿಂದ ಮೇಲೆ ನಡೆಯುವ ಪ್ರಕ್ರಿಯೆಯನ್ನು ಹೇಳುತ್ತವೆ. ಅಂದರೆ ನೆಲದಿಂದ ಇವು ಹೊಂದುವ ಅಂತರ ಇಲ್ಲವೆ ಬೆಳವಣಿಗೆ ಕ್ರಮದಲ್ಲಿ ಒಂದು ಕೆಳಗೆ ಉಳಿದರೆ ಇನ್ನೊಂದು ತುಸು ಮೇಲಕ್ಕೆ ಏರಬಹುದು. ಹಾಗೆಯೆ ಇಲ್ಲಿ ಕೂಡ ಕಾಲು ಮತ್ತು ತಲೆ ಇವು ಅದೆ ಅರ್ತದಲ್ಲಿ ಹೊಂದಿಕೊಂಡು ಬರುತ್ತವೆ.

ಇಲ್ಲಿ ಈ ಅರ್ತದಲ್ಲಿ ಪದಪುಂಜಗಳನ್ನು ಓದುವುದಕ್ಕೆ ಅನುವಾಗಲೆಂದು ಆ ಜೋಡಿ ಪದಪುಂಜಗಳನ್ನು ಕೆಳಗೆ ಪಟ್ಟಿಸಿದೆ,

ಮಂಟಪ – ಚಪ್ಪರ

ಹಸೆ – ಬಾಸಿಗ

ಕಾಲು – ತಲೆ

ಈ ಗಟಕಗಳನ್ನು ಕೆಳಗಿನಿಂದ, ನೆಲದಿಂದ ಮೇಲ್ಮುಕವಾಗಿ ನೋಡುವ ಕ್ರಮದಲ್ಲಿ ನೋಡಿದಾಗ ಈ ಮೂರೂ ಪದಜೋಡಿಗಳು ಮೇಲ್ಮುಕಿಯಾಗಿ ಇರುವುದು ಕಾಣಿಸುತ್ತದೆ.

ಇವು ಇಡಿಯ ವಚನದಲ್ಲಿ ಇಡಿಕಿರಿದಿರುವ ಅವಾಸ್ತವ, ಅಸಂಗತ, ಅಗಟಿತ ಇವುಗಳನ್ನೆ ಹೇಳಲು ಬಳಕೆಯಾಗಿವೆ ಎಂಬುದರಲ್ಲಿ ಅನುಮಾನವಿಲ್ಲ. ಈ ಮೊದಲಿನವುಗಳಲ್ಲಿ ಪೂರ್ಣವಾಗಿ ವಿರುದ್ದ ಗುಣಗಳನ್ನು ಜೋಡಿಸುವ ಪ್ರಯತ್ನ ಕಾಣಿಸುತ್ತದೆ. ಆದರೆ ಇಲ್ಲಿ ಹಾಗೆ ಪರಸ್ಪರ ವಿರುದ್ದ ಗುಣಗಳನ್ನು ಹೇಳುವ ಪದಗಳು ವಿಶೇಶಣ–ವಿಶೇಶ್ಯಗಳಾಗಿ ಬಂದಿವೆ ಎಂದು ಹೇಳಲು ನನಗೆ ಸಾದ್ಯವಾಗುತ್ತಿಲ್ಲ. ಇವು ವ್ಯಕ್ತಿಗಳ ಊನವನ್ನು ಹೇಳುತ್ತಿವೆ ಎಂಬುದು ನಿಜ. ಆದರೆ ಇಶ್ಟು ಮಾತ್ರವೆ ಎಂದು ಹೇಳುವುದು ತುಂಬಾ ಕಶ್ಟ. ವಚನ ಮೊದಲಿನಿಂದ ಕೊಡುತ್ತಿರುವ ಎತ್ತರದ ಮವುಲ್ಯವನ್ನು ಗಮನಿಸಿದಾಗ ಇದು ಇನ್ನೂ ಅಸಾದ್ಯವೆನಿಸುತ್ತದೆ. ಇಲ್ಲಿ ಗಮನಿಸಬೇಕಾದ ಒಂದು ವಿಚಾರವೆಂದರೆ ಮದುವೆಯ ಪರಿಕರಗಳನ್ನು ಇಡಿಯಾಗಿ ಬಳಸುವ ವಚನ ಇಲ್ಲಿ ಮದುವೆ ಬಗೆಗೆ ಮಾತನಾಡುತ್ತಿದೆ ಎಂದು ಸಹಜವಾಗಿಯೆ ಅರ್ತ ಮಾಡಿಕೊಳ್ಳಬಹುದು. ಮದುವೆ ಆಗುವುದು ಹೆಣ್ಣು–ಗಂಡು. ಆದರೆ, ವಚನ ಇಲ್ಲಿ ತರುವುದು 'ಹೆಂಡತಿ–ಗಂಡ'. ಇವು ಮದುವೆ ಆದ ನಂತರದ ಹೆಣ್ಣು–ಗಂಡಿನ ಕುಟುಂಬಿಕ ಸ್ತಿತಿಗಳು. ವಚನ ಸಾಮಾಜಿಕವನ್ನು ಕಟಕುವ ಕೆಲಸ ಮಾಡುತ್ತಾ ಬಂದಿದೆ. ಹಾಗಾಗಿ ಇಲ್ಲಿ ಮದುವೆ ಎಂಬ ರಚನೆಯನ್ನು ಇಲ್ಲಿ ಅಣಕವಾಡುತ್ತಿದೆ ಎಂಬುದು ಸ್ಪಶ್ಟವಾಗುತ್ತದೆ. ಸಾಮಾನ್ಯವಾಗಿ ಮದುವೆ ಎಂಬುದು ಒಂದು ಸಾಂಸ್ಕ್ರುತಿಕ ಆಚರಣೆ. ಇದರಲ್ಲಿ ಕೇಂದ್ರ ಆಚರಣೆಯಾಗಿ ತಾಳಿ ಕಟ್ಟುವ ಇಲ್ಲವೆ ಅಂತದೊಂದು ಪ್ರಕ್ರಿಯೆ ಇರಬೇಕು. ಅಕ್ಕಮಹಾದೇವಿಯ ಕಾಲಕ್ಕೆ ಇಂತದೊಂದು ಆಚರಣೆ ಇದ್ದುದಕ್ಕೆ ಸಾಹಿತ್ಯಿಕ ಆದಾರಗಳು ಸಾಕಶ್ಟು ದೊರೆಯುತ್ತವೆ. ಹಾಗಾಗಿ ಇಲ್ಲಿ ಅಕ್ಕ ಅಂತದೊಂದು ಪ್ರಕ್ರಿಯೆಯನ್ನು ಉಲ್ಲೇಕಿಸುತ್ತಿಲ್ಲ. ಬದಲಿಗೆ 'ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮುಟ್ಟಿದನು' ಎಂದು ಹೇಳುತ್ತದೆ. ಇದು ಮದುವೆ ಆಗುವ ಪ್ರಕ್ರಿಯೆಯನ್ನು ಹೇಳುತ್ತಿರಬಹುದು ಎಂದೆ ನಾವು ಅರ್ತವಿಸಿಕೊಳ್ಳಬೇಕು. ಸದ್ಯಕ್ಕೆ ನನಗೆ ಬೇರೆ ಅರ್ತ ಇಲ್ಲವೆ ಅರ್ತಸಾದ್ಯತೆ ಹೊಳೆಯುತ್ತಿಲ್ಲ. ಇದಕ್ಕೆ ಹೆಣ್ಣು–ಗಂಡಿನ ಬದಲು ಹೆಂಡತಿ–ಗಂಡಂದಿರನ್ನು ತರುವುದು, ಅವರನ್ನು ಊನಗಳೊಂದಿಗೆ ತರುವುದು, ಮತ್ತು ಇನ್ನೂ ಮುಕ್ಯವಾಗಿ ಮದುವೆಯ ಕೇಂದ್ರ ಆಚರಣೆಯನ್ನು ಒಡೆಯುವುದು ಇವೆಲ್ಲ ಪೋಶಿಸುತ್ತವೆ.

ಇವು ಬದುಕಿನ ಊನಗಳನ್ನು ಹೇಳುವುದಕ್ಕೆ ಬಂದಿವೆ, ಬಹುಶಾ ಇವು ವ್ಯಕ್ತಿತ್ವದ ಊನಗಳನ್ನು ಹೇಳುವುದಿಲ್ಲ, ವ್ಯಕ್ತಿಯ ಊನಗಳನ್ನು ಹೇಳುವುದಿಲ್ಲ ಬದಲಿಗೆ ಬದುಕಿನ ಊನಗಳನ್ನು ಹೇಳುತ್ತಿರುವಂತಿವೆ. ಇಡಿಯ ವಚನ ತೀವ್ರವಾಗಿ ವಯಕ್ತಿಕವೆ ಆಗಿದ್ದರೂ ವ್ಯಕ್ತಿ, ವ್ಯಕ್ತಿತ್ವಗಳನ್ನು ಮಾತನಾಡದೆ ಇರುವುದನ್ನು ಗಮನಿಸಿ.

ಆದರೆ ಅದು 'ಬಾಳುವೆ'ಯನ್ನು ಮಾತನಾಡುತ್ತದೆ. ಅದು 'ಬೇಡದ ಬಾಳುವೆ'ಯಾಗಿರುವುದನ್ನು ವಚನ ಹೇಳುತ್ತದೆ.

ಇವೆಲ್ಲವೂ ಮದುವೆಯ ರಚನೆಯ ಪರಿಕಲ್ಪನೆಗಳಾಗಿಯೆ ಬರುತ್ತಿರುವುದನ್ನು ಗಮನಿಸಿ, 'ಮಂಟಪ', 'ಚಪ್ಪರ', 'ಹಸೆ', ಮುಂದಿನ 'ಬಾಸಿಗ'. ಹೀಗೆ ಎಲ್ಲ ಪದಗಳೂ ಮದುವೆಗೆ ಸಂಬಂದಿಸಿರುವುದರಿಂದ ಇದು ಬರಿಯ ಮದುವೆಗೆ ಮಾತ್ರ ಸಂಬಂದಿಸಿರಬಹುದು ಎಂದು ಅನುಮಾನಿಸಲು ಅವಕಾಶ ಇಲ್ಲ. ಮದುವೆ ಎನ್ನುವುದು ಸಾಮಾಜಿಕ ಜೀವನದಲ್ಲಿ ಬದುಕೆ ಆಗಿದೆ. ಮದುವೆ ಇಡಿಯಾಗಿ ಬದುಕನ್ನು ನಿರ್ದರಿಸುವ, ನಿರ್ಮಿಸುವ ಪ್ರಕ್ರಿಯೆಯಾಗಿದೆ. ಅಲ್ಲದೆ ವಚನದ ಕೊನೆಯಲ್ಲಿ 'ಬಿಡದ' ಬಾಳುವೆ'ಯ ಉಲ್ಲೇಕವೂ ಇದೆ. ಹಾಗಾಗಿ ಇದು ಇಡಿಯಾಗಿ ವಾಸ್ತವವೆಂದು ಬ್ರಮಿಸಿಕೊಂಡಿರುವ ಅವಾಸ್ತವಗಳು ತುಂಬಿರುವ ಬದುಕನ್ನು, ಬಾಳುವೆಯನ್ನು ಮಾತನಾಡುತ್ತಿದೆ.

ಒಟ್ಟು ವಚನ ಸಾಮಾಜಿಕ ರಚನೆಯಲ್ಲಿ ಬಳಲಿ ಬೆಂಡಾಗಿರುವ ಮಾನಸಿಕ ಸ್ತಿತಿಯನ್ನು ಕುರಿತು ಮಾತನಾಡುತ್ತಿರುವಂತಿದೆ. ಆ ಮಾನಸಿಕ ಸ್ತಿತಿಯನ್ನು ಅದಕ್ಕೆದುರಾಗಿ ಸಾಮಾಜಿಕ ರಚನೆಯನ್ನು ತಂದು ಮಾತನಾಡುತ್ತಿದೆ. ಇಲ್ಲಿ ಎರಡು ವಿಚಾರಗಳನ್ನು ತೋರಿಸುತ್ತದೆ. ಮೊದಲನೆಯದು ವ್ಯಕ್ತಿಯ ಮಾನಸಿಕತೆ ಕುರಿತು ತೀವ್ರವಾಗಿ ಸ್ಪಂದಿಸುತ್ತಿರುವುದು. ಮಾನಸಿಕತೆಯನ್ನು ಪ್ರದಾನವಾಗಿಸಿಕೊಳ್ಳುವ ವಚನ ಸಾಮಾಜಿಕವನ್ನು ಅಶ್ಟೆ ತೀವ್ರವಾಗಿ ಅಣಕಿಸುತ್ತದೆ. ಈ ಅಣಕ ಕೇವಲ ಅಣಕವೆಂದು ತೆಗೆದುಕೊಳ್ಳಲಾಗದು. ಬದಲಿಗೆ ಇದನ್ನು ಸಮಾಜದ, ಸಾಮಾಜಿಕ ರಚನೆಯ ತೀವ್ರ ವಿಮರ್ಶೆ ಎಂದು ಬಗೆಯಬೇಕಾಗುತ್ತದೆ. ಹೀಗಾಗಿ ವಚನ ವಸ್ತುವಿಲ್ಲದೆ, ಅಸಾದ್ಯ ವಸ್ತವನ್ನು ಒಳಗೊಳ್ಳುತ್ತದೆ. ನೇರವಾದ ಒಂದೂ ಮಾತಿಲ್ಲದೆ ಅಗಣಿತ ಮಾತುಗಳನ್ನು ಸ್ಪುರಿಸುತ್ತದೆ.

**ಸಂದರ್ಬ ಗ್ರಂತಗಳು:**

ಬಸವರಾಜ ಕೋಡಗುಂಟಿ. ೨೦೧೯. ಪದವನರ್ಪಿಸಬಹುದು. ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ.

ಬಸವರಾಜು ಎಲ್. ೨೦೧೭ [ಮೊ.ಮು. ೧೯೬೬]. ಅಲ್ಲಮನ ವಚನಗಳು. ಡಿ.ವಿ.ಕೆ. ಮೂರ್ತಿ, ಮಯ್ಸೂರು..



# ಸ್ವಪ್ನ ಸಾರಸ್ವತ ಕಾದಂಬರಿಯಲ್ಲಿ ವಲಸೆ ಪ್ರಜ್ಞೆ ಮತ್ತು ಮಾನಸಿಕ ತಳಮಳ



ಬಸಯ್ಯ ಸ್ವಾಮಿ

ಮನುಷ್ಯ ಸಮಾಜದಲ್ಲಿ ವಲಸೆ ಯಾವತ್ತಿನಿಂದಲೂ ನಡೆಯುತ್ತಲೆ ಇದೆ. ನಾಗರಿಕತೆ, ಸಮಾಜ ಬೆಳೆದ ಮೇಲೆ ವಲಸೆಯ ಸ್ವರೂಪ ಸಾಕಷ್ಟು ಬದಲಾಗಿದೆ. ಆಧುನಿಕ ಕಾಲದಲ್ಲಿ ವಲಸೆಯ ಸ್ವರೂಪ ಇನ್ನೂ ವ್ಯಾಪಕ ಬದಲಾವಣೆಗಳನ್ನು ಪಡೆದುಕೊಂಡು ಹಲವಾರು ಆಯಾಮಗಳನ್ನು ಪಡೆದುಕೊಂಡಿದೆ. ಇವುಗಳನ್ನು ತಿಳಿದುಕೊಳ್ಳುವುದು ಮನುಷ್ಯರನ್ನು, ಸಮಾಜವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸಹಾಯಕವಾಗುತ್ತದೆ. ಅದರಂತೆಯೆ ವಲಸೆಯನ್ನು, ವಲಸೆ ಹೋಗುವವರನ್ನು, ಅವರ ಸಮಸ್ಯೆಗಳನ್ನು ತಿಳಿದುಕೊಳ್ಳುವುದು ಅವಶ್ಯ. ಅದರಿಂದ ಸಮಾಜದ ಬೆಳವಣಿಗೆಗೆ, ವಲಸೆ ಮತ್ತು ವಲಸಿಗರ ಸಮಸ್ಯೆಗಳಿಗೆ ಸ್ಪಂದಿಸುವುದು ಸಾಧ್ಯವಾಗಬಹುದು. ಈ ಲೇಖನದಲ್ಲಿ ವಲಸೆಯ ಪ್ರಜ್ಞೆ ಮತ್ತು ವಲಸಿಗರು ಮತ್ತು ವಲಸೆಗೆ ಸಂಬಂಧಿಸಿದವರ ಮಾನಸಿಕ ತಳಮಳವು ಕನ್ನಡದ ಮಹತ್ವದ ಕಾದಂಬರಿಗಳಲ್ಲಿ ಒಂದಾದ ಗೋಪಾಲಕೃಷ್ಣ ಪೈ ಅವರ ಸ್ವಪ್ನ ಸಾರಸ್ವತದಲ್ಲಿ ಹೇಗೆ ಮೂಡಿಬಂದಿದೆ ಎಂಬುದನ್ನು ಚರ್ಚಿಸಿದೆ.

ವಲಸೆ ನಡೆದಾಗ ಅದು ಕೇವಲ ಭೌತಿಕ ಇಲ್ಲವೆ ಸಾಮಾಜಿಕ ಆಗಿರುವುದಿಲ್ಲ, ಬದಲಿಗೆ ಅದು ಮುಖ್ಯವಾಗಿ ಮಾನಸಿಕವೂ ಆಗಿರುತ್ತದೆ. ನಿರ್ದಿಷ್ಟ ಪ್ರದೇಶ, ಸಮಾಜದಲ್ಲಿ ನಿರ್ದಿಷ್ಟ ಸಂಬಂಧಗಳು, ಸಾಂಸ್ಕೃತಿಕ ಪರಿಸರ ಇವುಗಳಿಗೆ ಹೊಂದಿಕೊಂಡ ಮನಸ್ಸು ಇನ್ನೊಂದು ಪರಿಸರಕ್ಕೆ ಬಂದಾಗ ಎಲ್ಲ ಆಯಾಮಗಳಲ್ಲಿಯೂ ಪಲ್ಲಟವನ್ನು ಅನುಭವಿಸುತ್ತದೆ. ಈ ಪಲ್ಲಟವು ಮನುಷ್ಯರ

ಒಳಗಿನ ಹಲವು ಸ್ಥಿತ್ಯಂತರಗಳಿಗೂ ಕಾರಣವಾಗುತ್ತದೆ. ಮುಖ್ಯವಾಗಿ ವಲಸೆ ಬಂದ ಮನುಷ್ಯರ ಮಾನಸಿಕ ಹೊಂದಾಣಿಕೆಯ ವೇಗವು ವಲಸೆಯ ಸಾರ್ಥಕತೆಯನ್ನು ನಿರ್ಧರಿಸಲೂಬಹುದು. ಮಾನಸಿಕವಾಗಿ ವಲಸೆ ಬಂದ ನೆಲೆಗೆ ಒಗ್ಗಿಕೊಳ್ಳದೆ ಹೋದರೆ ವಲಸೆ ಬಂದ ಜಾಗದಲ್ಲಿ ನೆಲೆ ನಿಲ್ಲುವುದು ಎಲ್ಲ ರೀತಿಯಿಂದಲೂ ಕಷ್ಟವಾಗುತ್ತಾ ಹೊಗುತ್ತಿರುತ್ತದೆ. ಈ ಸ್ಥಿತಿಯೆ ಬಿಟ್ಟು ಬಂದ ಜಾಗದ ಬಗೆಗೆ ವಲಸೆ ಬಂದವರಲ್ಲಿ ಹೆಚ್ಚಿನ ತಳಮಳ, ಸೆಳೆತ ಮೊದಲಾದವಕ್ಕೆ ಕಾರಣಾಗುತ್ತದೆ. ಇದು ಇತರ ಸಾಮಾಜಿಕ ಮತ್ತು ಧಾರ್ಮಿಕ ಮೊದಲಾದ ಅವರ ನಿಲುವುಗಳಿಗೆ ಕಾರಣವಾಗುತ್ತದೆ. ಹಾಗಾಗಿ ವಲಸೆ ಬಂದವರ ಮಾನಸಿಕ ಸ್ಥಿತಿ ಬಗ್ಗೆ, ಅವರ ಮಾನಸಿಕ ತಳಮಳದ ಬಗೆಗೆ ಅರಿತುಕೊಳ್ಳುವುದು ವಲಸೆಯನ್ನು ಅರ್ಥ ಮಾಡಿಕೊಳ್ಳುವ ಒಂದು ಮುಖ್ಯವಾದ ಆಯಾಮ. ಕನ್ನಡದ ಹಲವಾರು ಕಾದಂಬರಿಗಳಲ್ಲಿ ಇಂತಾ ವಲಸೆ ಕಾರಣದ ಮಾನಸಿಕ ತಳಮಳದ ಚಿತ್ರಣವನ್ನು ಕಾಣಬಹುದು. ಗೋಪಾಲಕೃಷ್ಣ ಪೈಯವರ 'ಸ್ವಪ್ನ ಸಾರಸ್ವತ' ಕಾದಂಬರಿಯನ್ನು ಈ ಆಶಯದಡಿಯಲ್ಲಿಯೇ ಈ ಲೇಖನ ಚರ್ಚೆ, ವಿಶ್ಲೇಷಣೆ ಮಾಡುತ್ತದೆ.

ಸ್ವಪ್ನ ಸಾರಸ್ವತ ಕಾದಂಬರಿಯಲ್ಲಿ ಇಂತಹ ವಲಸೆ ಕಾರಣಕ್ಕೆ, ವಲಸೆ ಹೋಗುವಾಗಿನ ಹಾಗೂ ಹೋದ ನಂತರದಲ್ಲಿನ ವಲಸಿಗರಲ್ಲಾಗುವ ಮಾನಸಿಕ ತಳಮಳ, ಮಾನಸಿಕ ಸ್ಥಿತಿಗತಿಗಳ ಚಿತ್ರಣಗಳು ಇಲ್ಲಿ ಕಂಡುಬರುತ್ತವೆ. ಗೋವೆಯುದ್ದಕ್ಕೂ ಪೋರ್ಚುಗೀಸರು ಹಬ್ಬಿಕೊಂಡಿದ್ದಾರೆ. ಅಲ್ಲೆಲ್ಲ ಅವರ ಆಡಳಿತದ ಜೊತೆಗೆ ಧಾರ್ಮಿಕ, ಭಾಷಿಕ ಅಸ್ತಿತ್ವವನ್ನು ಸ್ಥಾಪಿಸುವಂತಹ ಕೆಲಸಗಳನ್ನು ಮಾಡುತ್ತಿದ್ದಾರೆ. ಗೋವೆಯ ಪ್ರಾಂತ್ಯಕ್ಕೆ ಒಳಪಡುವ ಒಂದು ಊರು ವೇರಣೆ. ಇಲ್ಲಿನ ಎಲ್ಲ ಧರ್ಮದ ಜನರನ್ನು ಪೋರ್ಚುಗೀಸರು ತಮ್ಮ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಿಸಲು ಯತ್ನಿಸುತ್ತಿದ್ದಾರೆ. ಇದಕ್ಕೆ ಹಣದ ಆಮಿಶವನ್ನು, ಅಧಿಕಾರವನ್ನು, ಸೈನ್ಯದ ಬಲವನ್ನು ಎಲ್ಲವುಗಳನ್ನು ಬಳಸಿಕೊಂಡು ಮತಾಂತರಿಸಲು ಪ್ರಯತ್ನಿಸುತ್ತಿದ್ದಾರೆ. ಈ ವೇರಣೆಯ ಸಾರಸ್ವತ ಬ್ರಾಹ್ಮಣರು ಮಾತ್ರ ಇದಕ್ಕೆ ತೀವ್ರವಾದ ಹೋರಾಟವನ್ನು ವಿರೋಧವನ್ನು ವ್ಯಕ್ತಪಡಿಸುತ್ತಾರೆ. ಈ ಸಂಘರ್ಷದಲ್ಲಿ ಸಾರಸ್ವತರೂ ಒಂದು ಮತಾಂತರಗೊಳ್ಳುವ ಇಲ್ಲ ಊರನ್ನು ಬಿಟ್ಟು ವಲಸೆ ಹೋಗುವ ಅನಿವಾರ್ಯತೆಗಳಿಗೆ ಸಿಲುಕುತ್ತಾರೆ.

ಪೋರ್ಚುಗೀಸರು ಊರಲ್ಲಿ ಸುತ್ತಾಡಿ, ಕೇಳಿರೋ ಭಟ್ಪೋ ಮಕ್ಕಳಿರಾ ನಿಮ್ಮ ಗ್ರಂಥಗಳನ್ನು ಓದಬಾರದು, ನಿಮ್ಮ ಮತಗಳನ್ನು ಹೇಳಬಾರದು, ನಿಮ್ಮ ದೇವರುಗಳನ್ನು ಪೂಜಿಸಬಾರದು, ನಾಳೆ ದೇವಸ್ಥಾನಗಳನ್ನು ಪುಡಿ ಮಾಡಲು ಸೈನ್ಯ ಬರುತ್ತದೆ ಎಂದೆಲ್ಲ ಭಯವನ್ನು ಹುಟ್ಟಿಸುತ್ತ ತಮ್ಮ ಮುಂದಿನ ಕಾರ್ಯವನ್ನು ಆದೇಶ ಮಾತುಗಳಲ್ಲಿ ಸಾರುತ್ತಾರೆ. ಸಾರಸ್ವತರು ಅಸಹಾಯಕರಾಗಿ, ಯುದ್ಧಮಾಡಲು

ನಮಗೆ ಗೊತ್ತಿಲ್ಲ, ಶಸ್ತ್ರಾಸ್ತ್ರಗಳು ಇಲ್ಲ ಎಂದು ಕಂಗಾಲಾಗಿ ಎಲ್ಲರೂ ತಮ್ಮ ಧರ್ಮ ದೇವರು ಭಾಷೆಯನ್ನು ಉಳಿಸಿಕೊಳ್ಳಲು ಊರನ್ನು ಬಿಟ್ಟು ವಲಸೆ ಹೋಗಲು ಸಿದ್ಧರಾಗುತ್ತಾರೆ. ಇದಕ್ಕೆ ಪುಷ್ಠಿಯೆಂಬಂತೆ ನಾಗ್ಡೋ ಬೇತಾಳ ಪೋರ್ಚುಗೀಸರು ಹಿಂದುಗಳ ದೇವಸ್ಥಾನಗನ್ನು ಹಾಳುಗೆಡುವುತ್ತಿದ್ದು. ದೇವರ ಪೂಜೆ ಅಸಾಧ್ಯವೆಂದಾದರೆ ಸುರಕ್ಷಿತ ಸ್ಥಳಕ್ಕೆ ಹೋಗಿಬಿಡಿ ಎಂದು ಸಲಹೆಯನ್ನು ನೀಡುತ್ತಾನೆ.

ಸಾರಸ್ವತರು ನಾಗ್ಡೋ ಬೇತಾಳನ ಸಲಹೆಮೇರೆಗೆ ಸಾರಸ್ವತರ ಸಮುದಾಯ ಊರನ್ನು ತೊರೆದು ಹೋಗುತ್ತಾರೆ. ಹೀಗೆ ಹೋಗುವಾಗ ಅವರು ಮಾನಸಿಕವಾಗಿ ಕುಸಿಯುತ್ತಾರೆ. ತಮ್ಮ ಅಸ್ತಿತ್ವ ಇಲ್ಲದಂತೆ, ತಮ್ಮ ಬದುಕು ನೆಲೆಯೂರಿದ ಊರನ್ನು, ಮನೆಯನ್ನು, ತಮ್ಮ ದೇವಾಲಯಗಳನ್ನು ದೇವರನ್ನು ಸರಳವಾಗಿ ಬಿಟ್ಟು ಹೊಗುವುದು ಅವರಿಗೆ ದುಸಾಧ್ಯವಾಗುತ್ತದೆ. ಇಷ್ಟೆಲ್ಲ ಬದುಕಿದ ನೆಲವನ್ನು ಬಿಟ್ಟು ಹೋಗುವುದು ಹೇಗೆಂದು ಚಿಂತಿತಗೊಳ್ಳುವ ಸಾರಸ್ವತರಿಗೆ ಅವುಗಳನ್ನು ತೊರೆದು ಹೋಗಲು ಸಾಧ್ಯವಾಗುವುದಿಲ್ಲ. ಹೋಗಲೇ ಬೇಕಾದ ಅನಿವಾರ್ಯ ಸ್ಥಿತಿ ಅವರದ್ದು. ಹಾಗಾಗಿಯೇ ತಮ್ಮ ದೇವರುಗಳನ್ನು ಪೋರ್ಚುಗೀಸರಿಗೆ ಸಿಗದಂತೆ ರಾತ್ರೋ ರಾತ್ರಿ ಮಂಗೇಶಿ ಮೂರ್ತಿಯನ್ನು ಎತ್ತಿ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಪ್ರಿಯೋಳದ ಕಾಡಿನಲ್ಲಿ ಮುಚ್ಚಿಡುತ್ತಾರೆ. ಇದಾದ ಮೇಲೆ ಧಾಕ್ಟೋಕಾಮಾತಿ ಎಂಬುವವನು ಕಟ್ಟಾಳಿಯನ್ನು ಬಿಟ್ಟು ಹೊರಟುಹೋಗುತ್ತಾನೆ. ಹೀಗೆ ಹೋಗುವಾಗ ಅವನ ಮನಸ್ಸು ಅತ್ಯಂತ ಜರ್ಜರಿತಕ್ಕೊಳಗಾಗುತ್ತದೆ. ಅವನ ಮನಸ್ಸನ್ನು ದುಃಖ ಆವರಿಸುತ್ತದೆ. ದುಃಖಕ್ಕೆ ಈಡಾಗಿತ್ತು. "ನಾನೇ ನಿಂತು ಕಟ್ಟಿಸಿದ ದೇವಸ್ಥಾನಗಳಿವು" (ಸ್ವಪ್ನ ಸಾರಸ್ವತ– ಪುಟ.೧೯) ಎಂದು ಮರಗುತ್ತಾನೆ. ದುಃಖಿಸಿ ಊರನ್ನು ಬಿಡಲು ಅತ್ತು ಬಿಡುತ್ತಾನೆ. ಹೀಗೆ ಊರನ್ನು ತೊರೆಯಲು ಮಾನಸಿಕವಾಗಿ ಘಾಸಿಗೊಳುತ್ತಾನೆ.

ಈ ಕಾದಂಬರಿಯಲ್ಲಿ ಹೀಗೆ ಘಾಸಿಗೊಳಗಾಗುವ ಅನೇಕ ಪಾತ್ರಗಳು ಬರುತ್ತವೆ. ಇಲ್ಲಿ ಬರುವ ಇನ್ನೊಬ್ಬ ಯುವಕ ಹರಿಮ್ಹಾಲ್ಲೋ ರಾಚೋಲಿಯ ಗ್ರಾಮದವನು. ನಾಗ್ಡೋಬೇತಾಳ ಹೇಳಿದ "ನಿಮ್ಮ ಮನೆಗಳು ನಿಮಗೆ ಸಿಕ್ಕುವುದಿಲ್ಲ. ದೇವಾಸ್ಥಾನಗಳೂ ಸಿಕ್ಕುವುದಿಲ್ಲ. ಆ ಫರಂಗಿ ಸರದಾರ ಅವುಗಳನ್ನು ಮತ್ತೆ ಕಟ್ಟಿಸಿಕೊಡುವ ಕನಸು ಕಾಣಬೇಡಿ. ಯಾರಿಗೆ ನಮ್ಮ ಧರ್ಮ ನೆಲ, ಭಾಷೆಗಳ ಅಭಿಮಾನವಿದೆಯೋ ಅಂಥವರು ರಾಚೋಲಿ ಬಿಟ್ಟು ಹೊರಡಬೇಕು. ಎಲ್ಲಿ ನಿಮ್ಮ ದೇವರು ಆಶ್ರಯ ಪಡೆದಿದ್ದಾನೋ ಆ ದೇಶಕ್ಕೆ ಹೋಗಿ" (ಸ್ವಪ್ನ ಸಾರಸ್ವತ– ಪುಟ ೧೨೮) ಎಂದು ಸಲಹೆ ನೀಡಿದ್ದನ್ನು ಕೇಳಿ ಹರಿಮ್ಹಾಲ್ಲೋನಲ್ಲಿ ನಿರಾಸೆ ಮನೆ ಮಾಡುತ್ತದೆ. ಅವನು ಈ ನಮ್ಮನ್ನು ಫರಂಗಿಗಳಿಂದ ನಾಗ್ಡೋ ಬೇತಾಳನು ಕಾಪಾಡುತ್ತಾನೆ ಎಂಬ ವಿಶ್ವಾಸ ಹುದುಗಿ ಹೋಗುತ್ತದೆ. ನಾಗ್ಡೋ ಬೇತಾಳನ ಮಾತುಗಳಿಂದ ನಿರಾಸೆಯಿಂದ ಕುಸಿದು ಬೀಳುತ್ತಾನೆ. ಒಮ್ಮೆಲೆ ಕೂಗಿಕೊಳ್ಳುತ್ತಾ

"ದೇವರು ಕಾಯುವುದಿಲ್ಲವೇ? ಆ ರಾಕ್ಷಸರನ್ನು ಸೋಲಿಸುವುದು ಅವನಿಂದ ಸಾದ್ಯವಿಲ್ಲವೇ? ಹಾಗಿದ್ದರೆ ಅವನೇನು ಮಾಡುತ್ತಾನೆ? ಎಂದು ಕಿರುಚುತ್ತಾನೆ. ಈ ಕಿರುಚುವಿಕೆಯಲ್ಲಿ ಅವನ ಅಸಾಹಯಕತೆ ಇದೆ. "ನಾವು ಊರುಬಿಟ್ಟು ಹೋಗುವುದಿಲ್ಲ. ನಮಗೆ ಇಲ್ಲಿಯೇ ಇರುವ ಆಸೆ. ನೆಲದ ಋಣ ಬಿಡಲು ಸಾದ್ಯವಿಲ್ಲ. ಹೇಗೆ ಹೋಗಲಿ? ನಮ್ಮ ನೆಲ, ಧರ್ಮ ಭಾಷೆಗಳಲ್ಲಿ ಅಭಿಮಾನವಿದೆಯೋ ಅಂಥವರು ರಾಚೋಲಿ ಬಿಟ್ಟು ಹೊರಬೇಕು ಎಂದಾಗ ಈ ರೀತಿ ಮಾಡಿದಾಗ ನಮ್ಮನ್ನು ದೇವರು ಕಾಯುವುದಿಲ್ಲವೇ ಆ ರಾಕ್ಷಸರನ್ನು ಸೋಲಿಸುವುದು ಅವನಿಂದ ಸಾಧ್ಯವಿಲ್ಲವೇ ಎಂದು ಕಿರಿಚಿಕೊಳ್ಳುವಲ್ಲಿ ಅವರ ಭವಣೆ, ನೋವುಗಳಿವೆ. ನಾವು ಊರನ್ನು ಬಿಟ್ಟು ಹೋಗುವುದಿಲ್ಲ. ನಮಗೆ ಇಲ್ಲಿ ಇರುವ ಆಸೆ. ನೆಲದ ಋಣ ಬಿಡಲು ಸಾಧ್ಯವಿಲ್ಲ ಎಂದು ಸಂಕಟ ಪಡುವಲ್ಲಿ ಊರನ್ನು ದೇವರು ದೇವಾಲಯಗಳನ್ನು ಬಿಟ್ಟು ಹೋಗುವ ಸ್ಥಿತಿ ಅವರನ್ನು ಮಾನಸಿಕ ಸಂಕಟಗಳಿಗೆ ದೂಡುತ್ತದೆ. ಮಾನಸಿಕವಾಗಿ ಜರ್ಜಿತಕ್ಕೊಳಗಾಗುವಂತೆ ಮಾಡುತ್ತದೆ

ಸಾರಸ್ವತರ ಸಮುದಾಯದ ಕುಟುಂಬಗಳು ರಾತ್ರೋರಾತ್ರಿ ಒಟ್ಟೊಟ್ಟಿಗೆ ವೇರಣೆಯನ್ನು ತೊರೆದು ಬಂದುಬಿಡುತ್ತವೆ. ಹೀಗೆ ತೊರೆದು ಬಂದವರಲ್ಲಿ ಮಹಿಳೆಯರು, ಮಕ್ಕಳು, ವಯಸ್ಸಾದವರು, ಎಲ್ಲರು ಇದ್ದಾರೆ. ವಯಸ್ಸಾದವರ ಮಾನಸಿಕ ಸಂಕಟಗಳು ಒಂದು ರೀತಿಯಾದರೆ, ಇನ್ನು ಮಹಿಳೆಯರ ಮಕ್ಕಳ ಸಂಕಟಗಳು ಅನೇಕ. ಹೀಗೆ ವಲಸೆ ಹೊರಟ ಸಾರಸ್ವತರ ಕುಟುಂಬಗಳಲ್ಲಿ ಒಂದು ಕುಟುಂಬ ಮರ್ತುಕಿಣಿ ಎಂಬುವವನ ಕುಟುಂಬ. ಅವನಿಗೆ ಒಂದು ವಯಸ್ಸಿಗೆ ಬಂದ ಹೆಣ್ಣುಮಗಳು. ಆ ಹೆಣ್ಣು ಮಗು ವಲಸೆಯ ದಾರಿ ಮಧ್ಯದಲ್ಲಿಯೇ ಮೈನೆರೆಯುತ್ತದೆ. ಸಂಪ್ರದಾಯಿಕವಾಗಿ ಅದೊಂದು ಶುಭ ಸಮಾಚಾರ, ಕುಟುಂಬಕ್ಕೆ ಸಂತೋಷದ ಸಂಗತಿ. ಯಾವುದೇ ಕುಟುಂಬಗಳಿಗೆ ಮನೆಯ ಹೆಣ್ಣುಮಕ್ಕಳು ಮೈನೆರೆದರೆ ಅದೊಂದು ಹಬ್ಬದ ಸಂಗತಿಯಾಗಿ ನಿಲ್ಲುತ್ತದೆ. ಆದರೆ ಊರು ಮನೆ ನೆಲ ಜಲ ಎಲ್ಲವನ್ನು ಬಿಟ್ಟು ಗಂಟು ಮೂಟೆಯನ್ನು ಕಟ್ಟಿಕೊಂಡು ನಿರ್ಗತಿಕರಂತೆ ಹೊರಟು ಬಂದ ಈ ಕುಟುಂಬದಲ್ಲಿ ಈ ಮೈನೆರೆದ ಸಂಗತಿ ಸಂಕಟದ ಸಂಗತಿಯಾಗಿ ಮಾರ್ಪಡುತ್ತದೆ. ಇಂತಹ ಸಂಗತಿ ವಲಸೆಯ ಕಾರಣಕ್ಕೆ ಸಂಕಟ ಸಂಗತಿಯಾಗಿ ಕಾಡುತ್ತದೆ, ಮತ್ತು ಮೈನೆರೆದದನ್ನು ಮುಚ್ಚಿಟ್ಟುಕೊಳ್ಳುತ್ತಾರೆ. ಈ ಅನಿವಾರ್ಯತೆಯನ್ನು ಮರ್ತುಕಿಣಿ ಕುಟುಂಬ ಎದುರಿಸುತ್ತದೆ. ಎಲ್ಲರಿಗೆ ತಿಳಿದರೆ ಸಾಂಪ್ರದಾಯಿಕವಾದ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಮಾಡಲು ಅವರು ಅನುಕೂಲಕರವಾದ ಸ್ಥಳದಲ್ಲಿ ಇಲ್ಲ. ಗೊತ್ತಿಲ್ಲದ ಅಪರಿಚಿತ ಪ್ರದೇಶಗಳಿಗೆ ಹೊರಟಿದ್ದಾರೆ. ಇನ್ನು ದಾರಿ ಮಧ್ಯೆ ಕಳ್ಳಕಾಕರ ಭಯ. ಇಲ್ಲ ಎಲ್ಲ ಕಾರಣಕ್ಕೆ ವಲಸೆ ಹೋಗುವಾಗ ಮರ್ತುಕಿಣಿ ಕುಟುಂಬ ಈ ಸಂಕಟ ಅನಿವಾರ್ಯತೆ ಅನುಭವಿಸುತ್ತದೆ.

ಈ ಸಂಕಟದಿಂದ ಮರ್ತುಕಿಣಿ ಮಾನಸಿಕವಾಗಿ ಕುಗ್ಗಿವಿಕೆಗೆ ಒಳಗಾಗುತ್ತಾನೆ. ಈ ಪರಿಣಾಮ ಅವನಲ್ಲಿ ಅನೇಕ ಭೀತಿ ಆತಂಕಗಳನ್ನು ಸೃಷ್ಟಿಸುತ್ತದೆ.

ಗುಂಪುಗುಂಪಾಗಿ ವಲಸೆ ಹೊರಟ ಸಾರಸ್ವತರ ಕುಟುಂಬಗಳು ತಮ್ಮಗಳಲ್ಲಿದ್ದ ಹಣ ಆಹಾರ ಧವಸ ಧಾನ್ಯಗಳನ್ನು ಕೊಟ್ಟು ಊಟವನ್ನು ತಯಾರಿಸಿಕೊಂಡು ಎಲ್ಲರೂ ಊಟವನ್ನು ಮಾಡುತ್ತಿದ್ದರು. ಹೀಗೆ ಅನೇಕ ತಿಂಗಳುಗಳ ಕಾಲ ನಡೆದ ನಂತರದಲ್ಲಿ ಒಂದು ಘಟನೆ ನಡೆಯುತ್ತದೆ. ನಾಗೇಶ ಹೆಗಡೆ ಎಂಬುವವನ ನಡತೆಗಳು ವಿಚಿತ್ರವಾಗುತ್ತ ಸಾಗುತ್ತವೆ. ದಾರಿಯ ಮಧ್ಯ ಊಟಕ್ಕೆ ಅನ್ನ ಬಡಿಸುತ್ತಿದ್ದ ಮರ್ತುಕಿಣಿಯ ಮುಖಕ್ಕೆ ಎಲೆಯಲ್ಲಿದ್ದ ಅನ್ನವನ್ನೆಲ್ಲ ಬಿಸಾಡಿ ಎದ್ದು ನಿಂತವನೇ ಗಂಜೀ ಊಟದ ಸಮಯದಲ್ಲಿ ಏನೇನೋ ಬಡಬಡಿಸಲು ಪ್ರಾರಂಭಿಸುತ್ತಾನೆ. ಅವನಿಗೆ ವೇರಣೆಯಲ್ಲಿ ಚಿಕ್ಕದೊಂದು ನೆಲದ ತುಂಡಿತ್ತು. ಅವನಿಗೆ ಅದರ ಮೇಲೆ ಬಹಳ ಪ್ರೀತಿ ಇಟ್ಟುಕೊಂಡವನಾಗಿದ್ದ. ಆ ನೆಲದ ಬಗ್ಗೆ ಮನಸ್ಸಿಗೆ ತುಂಬ ಹಚ್ಚಿಕೊಂಡಿದ್ದ. ಹೀಗೆ ವೇರಣೆಯಲ್ಲಿ ತನ್ನದೆಯಾದ ಅಸ್ತಿತ್ವದೊಂದಿಗೆ ಅವನ ಬದುಕುತ್ತಿದ್ದ. ತನ್ನ ಹೊಲದಲ್ಲಿ ದುಡಿದು ಬೆಳೆದು ಯಾರ ಹಂಗಿಲ್ಲದೆ ಬದುಕಿದಂತವನು. ಇಂತಹ ಬದುಕನ್ನು ಕಳೆದುಕೊಂಡ ನಾಗೇಶ ಹೆಗಡೆ ವಲಸೆಯ ನಂತರದಲ್ಲಿ ದಾರಿಯುದ್ದಕ್ಕೂ ಊಟ ಮಾಡುವಾಗ ಅವನಿಗೆ ತಾನುಣ್ಣುವ ಅನ್ನ ತನ್ನದಲ್ಲ, ಅನ್ಯರದೆಂದು ಭಾಸವಾದಂತಿದೆ. ದಿನಾಲು ಊಟವನ್ನು ಬಡಿಸುತ್ತಿದ್ದ ಮರ್ತುಕಿಣಿ ಎಂಬುವವನಿಗೆ ಮಾನಸಿಕ ಸ್ಥಿಮಿತತೆ ಕಳೆದುಕೊಂಡು ಬೈಯ್ಯುವ ಮಾತುಗಳನ್ನು ನೋಡುವುದಾರೆ, "ಪುಕ್ಕಟೆ ಊಟಕ್ಕೆ ಬಂದವನೆಂದು ತಿಳಿದಿಯೆನೋ ಸೂಳೇ ಮಗನೆ? ವೇರಣೆಯಲ್ಲಿ ವಿಶಾಲ ನೆಲವಿದೆ ನನ್ನದು. ಬಂಗಾರ ಬೆಳೆಯುವ ಭತ್ತದ ಗದ್ದೆ" (೧೬೯) ಇದೆ ಎಂದು ಚೀರಾಡುತ್ತಾನೆ. ಮರ್ತುಕಿಣಿಯ ಮೇಲೆ ತನ್ನೆಲ್ಲ ಅಸಾಯಕತೆ ಸಂಕಟ, ಹಾಕಿಬಿಡುತ್ತಾನೆ.

ಈ ಚಿರಾಟಕ್ಕೆ ಕಾರಣ ಎಲ್ಲವನ್ನು ಬಿಟ್ಟು ಏನೂ ಇಲ್ಲದವರಂತೆ ಅಸಾಯಕರಾಗಿ ಗೋವೆಯನ್ನು ತೊರೆದು ಹೊಗುತ್ತಿದ್ದೇವೆ ಎಂಬ ಮಾನಸಿಕ ಸಂಕಟ, ನಮ್ಮ ಮನೆಯೊಳಗೆ ತಾನು ಬೆಳೆದ ಅನ್ನವನ್ನು ಉಣ್ಣುತ್ತಿದ್ದದ್ದು ಈಗ ಅನ್ಯರ ಅನ್ನಕ್ಕೆ ಮೂಲವಾಯಿತು ನನ್ನ ಕುಟುಂಬ ಎಂಬ ಮಾನಸಿಕ ಖಿನ್ನತೆ ಎಲ್ಲವೂ ಅವನ ಈ ವರ್ತನೆಗಳಿಗೆ ಕಾರಣವಾಗಿ ನಿಲ್ಲುತ್ತವೆ. ಮಾನಸಿಕ ತಳಮಳಕ್ಕೆ ಕಾರಣವಾಗಿ ನಿಲ್ಲುತ್ತದೆ. ಇಲ್ಲಿ ಅವನ ಬಡಬಡಿಸುವಿಕೆಯಲ್ಲಿ ಅನೇಕ ಮನಸ್ಸಿನ ನೋವುಗಳು ಹತಾಶೆಗಳಿವೆ. ತನಗೊಂದು ತುಂಡು ಭೂಮಿ ಇದೆ. ಅದರಲ್ಲಿ ಸಂತುಷ್ಟನಾಗಿ ದುಡಿದು ಅನ್ನ ಉಣ್ಣುವ ಬದುಕು ಅವನದಾಗಿತ್ತು. ಆದರೆ ಈಗ ಅವು ಯಾವು ಇಲ್ಲ. ಇಷ್ಟು ಕುಟುಂಬಗಳಲ್ಲಿ ತನ್ನದೆ ದೊಡ್ಡ ಕುಟುಂಬ. ಇನ್ನೊಬ್ಬರಿಗೆ ಹೊರೆಯಾಯಿತಲ್ಲ ನಮ್ಮ ಬದುಕು ಎಂಬ ಮಾನಸಿಕ ನೋವು ಅವನಲ್ಲಿ ತಂದೊಡ್ಡಿದೆ. ಅನ್ನ ಉಣ್ಣುತ್ತಿದ್ದ

ಕುಟುಂಬ ಗಂಜಿಗೆ ಕೈವೊಡ್ಡಬೇಕಾಗಿ ಬಂದಿದೆ ಎಂಬ ಹಳಹಳಿಕೆ ಇದೆ. ಈ ಎಲ್ಲ ನೋವುಗಳು ಹೇಳಿಕೊಳ್ಳಲಾರದ ಸ್ಥಿತಿಯಲ್ಲಿದ್ದ ನಾಗೇಶ ಹೆಗಡೆಯ ಹತಾಶೆ ಅಸ್ಸಾಯಕತೆ ತಾನು ಬಡಬಡಿಸುವ ಮೂಲಕ ತೋರ್ಪಡಿಸುತ್ತಾನೆ.ಇಲ್ಲಿ ನೆಲ ಮತ್ತು ನೆಲೆ ಬಿಟ್ಟು ಬರುವ ಸಂಕಟವಿದೆ, ಪರಾವಲಂಬಿಯಾಗಿ ದುಡಿದು ಅನ್ನ ಬೆಳೆದು ಉಣ್ಣುತ್ತಿದ್ದ ಕುಟುಂಬ ಗಂಜಿ ಉಣ್ಣುವ ಸ್ಥಿತಿಗೆ ಬಂತಲ್ಲ ಎಂಬ ನೋವಿದೆ. ವಲಸೆಯು ಈ ಎಲ್ಲ ಸಂಕಟಗಳನ್ನು ಅವನಲ್ಲಿ ನಿರ್ಮಿಸುತ್ತಿದೆ.

ದಾರಿಯುದ್ದಕ್ಕು ಅನೇಕ ಹಿರಿಯರು ಯವ್ವನದವರು ಮಕ್ಕಳು ಎನ್ನದೆ ಸಾವುಗಳು ಸಂಭವಿಸುತ್ತವೆ. ಈ ಸಾವುಗಳನ್ನು ಕಂಡ ವಿಟ್ಠು ಪೈಗೆ, ಗೋವೆ ಬಿಟ್ಟು ಹೊರಟು ಅನೇಕ ತಿಂಗಳ ನಂತರ ಕೈಯಲ್ಲಿದ್ದ ಹಣವೆಲ್ಲ ಕಾಲಿಯಾಗಿ ಹಸಿವು ನೋವು ಅನುಭವಿಸುತ್ತಾರೆ. ಇದ್ದ ವಡವೇ ವಸ್ತ್ರ ಕಳ್ಳತನವಾಗಿ, ಅವರ ನಡುವೆ ಮನಸ್ಥಾಪಗಳಿಂದ ಜಗಳ ಉಂಟಾಗಿ ಹಿಂಸೆಯೆನಿಸುತ್ತದೆ. ವಿಟ್ಠು ಪೈಗೆ ಈ ಸಾವು ನೋವು ಜಗಳ ಮನಸ್ಥಾಪ ಎಲ್ಲದಕ್ಕು ಬೇಸತ್ತು ಒಂದು ಕ್ಷಣ ಓಡಿ ಹೋಗಿ ತನ್ನಮನೆಯನ್ನು ಸೇರಿ ಕಿರಿಸ್ತಾನವಾಗಿಯೇ ಬಿಡುವುದೆಂಬ ನಿರ್ಧಾರ ಅವನಲ್ಲಿ ಮೂಡುತ್ತದೆ. ಯಾವುದು ಅಧರ್ಮವೆಂದು ತಮ್ಮ ಮನೆ ನೆಲೆ ನೀರು ಬಿಟ್ಟು ಬಂದಿದ್ದನೋ ವಲಸೆ ದಾರಿಯುದ್ದಕ್ಕು ಸಂಭವಿಸಿದ ಅನೇಕ ಈ ದುರಂತದ ಘಟನೆಗಳು ಅವನ ಮನಸಿನ ಮೇಲೆ ಆಘಾತಗಳನ್ನು ಉಂಟುಮಾಡುತ್ತವೆ. ಮತ್ತೆ ಅಲ್ಲಿಗೆ ಹೋಗಿಬಿಡಲೇನು? ಹೋಗಿಬಿಟ್ಟರೆ ಇಷ್ಟೆಲ್ಲ ಸಮಸ್ಯೆಗಳು ಇಲ್ಲವಾಗುತ್ತವಲ್ಲ ಎಂದು, ಮತ್ತೆ ಹೋಗಲು ಆಗದೆ ಇವೆಲ್ಲ ಘಟನೆಗಳನ್ನು ಮರೆಯಲು ಸಾಧ್ಯವಾಗದೆ ಮಾನಸಿಕ ಸಂಕಟಗಳನ್ನು ಅನುಭವಿಸುತ್ತಾನೆ. ತಾವು ಗೋವೆ ತೊರೆದು ಬಂದದಕ್ಕೆ ಪಶ್ಚಾತ್ತಾಪವೆಂಬಂತೆ ಮರುಗುತ್ತಾನೆ. ಈ ಮರುಗುವಿಕೆ ಅವನಲ್ಲಿ ಅನೇಕ ಯೋಚನೆಗಳನ್ನು ಹೊತ್ತಿಸುತ್ತದೆ. ಈ ಎಲ್ಲ ನೋವು ಸಂಕಟಗಳಿಗೆ ಕಾರಣ ಧರ್ಮವನ್ನು ಉಳಿಸಿಕೊಳ್ಳಬೇಕೆಂಬ ಉದ್ದೇಶವೇ ತಾನೇ? ಈ ಧರ್ಮವನ್ನು ಬಿಟ್ಟು ಕಿರಿಸ್ತಾನನಾಗಿಬಿಟ್ಟರೆ ತನ್ನ ಮನೆ ಮರಳಿಸಿಕ್ಕುವುದು, ಈ ನೋವುಗಳಿಗೆ ಕೊನೆಸಿಕ್ಕರು ಸಿಗಬಹುದಲ್ಲ ಎನ್ನುವವರೆಗೂ ಅವನ ಮನಸ್ಸು ಆಲೋಚನೆಗೆ ತೊಡಗುತ್ತದೆ. ಈ ಮಾನಸಿಕ ಗೊಂದಲಗಳಿಗೆ ಮಾನಸಿಕ ತಳಮಳಕ್ಕೆ ವಲಸೆಯ ನಡುವೆ ನಡೆದ ಸಂಗತಿಗಳೆ ವಿಟ್ಠು ಪೈಯಲ್ಲಿ ನಿರ್ಮಾಣಮಾಡುತ್ತವೆ ಎನ್ನುವುದು ಮುಖ್ಯ ಸಂಗತಿಯಾಗಿ ನಿಲ್ಲುತ್ತದೆ.

ವಲಸೆ ಹೊರಟ ನಂತರ ಸಾರಸ್ವತರ ಕುಟುಂಬಗಳು ತಮಗೆ ಸುರಕ್ಷಿತವೆನಿಸಿದ ಮತ್ತು ಗೋವೆಗೆ ಸಮೀಪವೆನಿಸಿದ ಊರುಗಳಲ್ಲಿ ನೆಲೆ ನಿಲ್ಲತೊಡಗುತ್ತಾರೆ. ಪೋರ್ಚುಗೀಸರ ಭಯದಿಂದ ದೂರ ಹೋಗುವ ಲೆಕ್ಕದಲ್ಲಿದ್ದವರು ಕೂಡ ಮುಂದೆ ಹೋಗಲಾಗದೆ, ಇರಲಾಗದೆ ಸ್ಥಿತಿಯನ್ನು ಅನುಭವಿಸುತ್ತ ಉಳಿದುಬಿಡುತ್ತಾರೆ. ಇದಕ್ಕೆ

ಕಾರಣ ಅವರಲ್ಲಿದ್ದ ಮತ್ತೆ ತಿರುಗಿ ತಮ್ಮ ಗೋವೆಯ ಮನೆಯನ್ನು ಸೇರಬೇಕೆಂಬ ತುಡಿತ. ಉಳಿದ ಆಸೆ. "ಅಲ್ಲಿಯ ಸ್ಥಿತಿ ಗತಿ ಮತ್ತೆ ಸರಿಯಾಗಬಹುದು; ಮತ್ತೆ ತಮ್ಮ ಹುಟ್ಟೂರು ಸೇರಬಹುದು; ತಮ್ಮದೆಂಬ ಮನೆ ನೆಲ ನೀರು ಸಿಕ್ಕಬಹುದು" (ಸ್ವಪ್ನ ಸಾರಸ್ವತ- ಪುಟ ೧೮೬) ಎಂಬ ಆಸೆಯಿಂದ ಹಲವರು ಉಳಿದರು, ಇನ್ನು ಹಲವರು ಈ ಸಂಕಟ ನೋವಿನಲ್ಲೆ ಮುಂದೆ ಸಾಗಿ ಹೋಗುತ್ತಾರೆ. ವಲಸೆ ಹೊರಟ ಅನೇಕ ತಿಂಗಳ ನಂತರದಲ್ಲಿ ಒಂದು ಹಳ್ಳಿಯಲ್ಲಿ ದಣಿವಾರಿಸಿಕೊಳ್ಳಲು ತಂಗುತ್ತಾರೆ. ಆ ಹಳ್ಳಿಯಲ್ಲಿ ವಿಟ್ಠು ಪೈಯ ಕಿವಿಗೆ ಬಿದ್ದ ಹಾಡೊಂದು ಅವನ ಮನಸ್ಸನ್ನು ಸೆಳೆಯುತ್ತದೆ.

**"ತುಪ್ಪಶನ ಎಂಬಲೆ ತುಳು ನಾಡಿಲಗೋಯೆಕ್ಕು।**

**ಅಕ್ಕಿಯ ಮೇಲೆ ಗೆರೆಯಿಲ್ಲೆ॥**

**ಅಕ್ಕಿಯ ಮೇಲೆ ಗೆರೆಯಿಲ್ಲೆ। ತುಳುನಾಡ।**

**ಮಕ್ಕಳ ಮೈಮೇಲೆ ಕಲೆಯಿತ್ತೆ॥" (ಸಪ್ನ ಸಾರಸ್ವತ- ಪುಟ.೨೧೮)**

ಇದರ ಅರ್ಥ ವಿಟ್ಠು ಪೈಗೆ ತಿಳಿದಾಗ ಅವನ ಮನಸು ವಿಹ್ವಲಗೊಳಗಾಗುತ್ತದೆ. ಜೊತೆಗೆ ತಾನು ಗೋವೆಯ ತನ್ನ ನೆಲದ ಮೆಲೆ ಇದ್ದರೆ ನಾನೂ ಕೂಡ ಇದೇ ರೀತಿ ಹಾಡು ಹಾಡಬಹುದಿತ್ತು ಎಂದು ಯೋಚಿಸುತ್ತಾನೆ. ಆದಾರೆ ಆ ಇಚ್ಚೆ ನನಗಿಲ್ಲ ಎಂಬ ಕೊರಗು ಅವನನ್ನು ಆವರಿಸುತ್ತದೆ. "ಯಾವ ನೆಲವೂ ನನ್ನದಾಗಿರಲಿಲ್ಲ. ತನ್ನದೇನಿದ್ದರು ಬರೀ ನೆನಪುಗಳು ಮಾತ್ರ. ಬಹುಶ: ಜೀವನದುದ್ದಕ್ಕೂ ಈ ನೆನಪೊಂದೇ ತನಗೆ ಉಳಿಯುವುದೇನೋ?" (ಸಪ್ನ ಸಾರಸ್ವತ-ಪುಟ, ೨೧೯) ಎಂದು ವಿಟ್ಠು ಪೈ ಸಂಕಟಪಡುತ್ತಾನೆ.

ಹೀಗೆ ಅನೇಕ ಕುಟುಂಬಗಳು ಅಲ್ಲಲ್ಲಿ ನೆಲೆ ನಿಂತುಬಿಡುತ್ತವೆ. ವಿಟ್ಠು ಪೈ ಕುಟುಂಬವು ಕೂಡ ಸುದೀರ್ಘವಾಗಿ ನಡೆದು ವಲಸೆ ಬಂದು ಸೇರಿದ್ದು ಕುಂಬಳೆಯಲ್ಲಿ. ಕುಂಬಳೆಯಲ್ಲಿ ಉಳಿಯುದಕ್ಕೆ ಎರಡು ಕಾರಣ. ತನ್ನ ಬೆನ್ನಿಗೆ ನಿಂತ ಮರ್ತೂಕಿಣಿಯ ಸಾವಿನಿಂದ ಮುಂದಿನ ದಾರಿ ತೋಚದಾಗಿ, ಮತ್ತು ತಾನು ಬರುವ ಅದೇಷ್ಟೋ ವರ್ಷಗಳ ಮುಂಚೆ ಪೋರ್ಚುಗೀಸ ದಬ್ಬಾಳಿಕೆಗೆ ಹೆದರಿ ಗೋವೆಯನ್ನು ತೊರೆದು ದಕ್ಷಿಣಕ್ಕೆ ಬಂದ ತನ್ನ ಮಾವ, ತನ್ನ ಹೆಂಡತಿಯ ತಂದೆ ಅಪ್ಪಣ್ಣ ಭಟ್ಟರು ಸಿಕ್ಕು ತಾವಿದ್ದಲ್ಲಿಯೇ ನೆಲೆಗೊಳ್ಳಲು ಕೇಳಿಕೊಂಡಿದ್ದು. ಈ ಕಾರಣಗಳಿಂದ ವಿಟ್ಠು ಪೈ ಕುಂಬಳೆಯಲ್ಲಿಯೇ ಉಳಿದುಕೊಳ್ಳುತ್ತಾನೆ. ಹೀಗೆ ಸುದೀರ್ಘವಾಗಿ ವಲಸೆ ಬಂದು ಕುಂಬಳೆಯಲ್ಲಿ ನೆಲೆನಿಲ್ಲುವಾಗ ವಿಟ್ಠು ಪೈಗೆ ಮೂವತ್ತು ವರ್ಷ ವಯಸ್ಸು. ಮರ್ತೂಕಿಣಿಯನ್ನು ಕಳೆದುಕೊಂಡಿದ್ದಕ್ಕೆ ಅವನು ಜೀವನದಲ್ಲಿ ಜೀವನ ಉತ್ಸಾಹವನ್ನು ಕಳೆದುಕೊಂಡವನಂತೆ ಮಾನಸಿಕವಾಗಿ ಕುಗ್ಗಿದವನಂತಾಗುತ್ತಾನೆ.

ಯಾವದರಲ್ಲು ಆಸ್ಥೆಯಿಲ್ಲದೆ ಕುಳಿತುಬಿಡುವ ಮನಸ್ಥಿತಿ ಅವನನ್ನು ಆವರಿಸಿತ್ತು. ಹೀಗೆ ಖಾಲಿತನ, ಬೇಸರವಾದಗಲೆಲ್ಲ ಕುಂಬಳೆಯ ಪೇಟೆಯಲ್ಲಿ ತಿರುಗಾಟ, ಮನೆ ಹಿಂದೆ ಸಮುದ್ರ ದಂಡೆಯ ಮೇಲೆ ಅಲೆಯುವದು ಕೆಲಸವಾಗಿತ್ತು. ಅಲ್ಲಿ ಏರಿ ಬರುತ್ತಿರುವ ಅಲೆಗಳನ್ನು ನೋಡುತ್ತಾ ವಿಟ್ಠು ಪೈಗೆ ತನ್ನ ಗೋವೆಯ ವೇರಣೆಯನ್ನು ನೆನಪಿಗೆ ತಂದುಕೊಂಡು "ಇಲ್ಲಿಂದ ಹೀಗೆ ಉತ್ತರಕ್ಕೆ ನಡೆದರೇ ಸಿಗುವುದಲ್ಲವೇ ತನ್ನ ಹುಟ್ಟೂರಾದ ಗೋವೆ" (ಸಪ್ನಸಾರಸ್ವತ- ಪುಟ, ೨೨೯) ಎಂದು ನೆನಪಿಸಿಕೊಳ್ಳುತ್ತಾನೆ. 'ಹೀಗೆ ಉತ್ತರಕ್ಕೆ ಹೋದರೆ' ಎಂದು ನೆನಪಿಸಿಕೊಳ್ಳುವಲ್ಲಿ ಗೋವೆಗೆ ಹೋಗುವ ತುಡಿತ ಇನ್ನು ವಿಟ್ಠು ಪೈಯಲ್ಲಿ ಉಳಿದುಕೊಂಡಿದ್ದು, ಉಳಿಸಿಕೊಂಡಿದ್ದು ಕಂಡುಬರುತ್ತದೆ. ಬೇಸಗೆಯ ಸಮಯ ಗದ್ದೆಗಳಲ್ಲಿ ಬೀಳುವ ಮುಳ್ಳು ಸೌತೆ, ಬಣ್ಣದ ಸೌತೆ, ತೊಂಡೆ ಕಾಯಿ ಚಪ್ಪರಗಳನ್ನೋ ಕಲ್ಲಂಗಡಿ ಸಾಲುಗಳನ್ನೊ ಕಂಡಾಗಲಂತೂ ಅವನ ಮನಸ್ಸು ವೇರಣೆಯ ಕಡೆಗೆ ಓಡುತ್ತಿರುವುದು, ಅಲ್ಲಿದ್ದ ತನ್ನ ಅಲ್ವೀರಳನ್ನು ನೆನಪಿಸಿಕೊಳ್ಳುವದನ್ನು ಕಂಡುಬರುತ್ತದೆ. ಈ ಮಾನಸಿಕ ತಳಮಳಗಳ ಜೊತೆಗೆ ತಾನು ತನ್ನದೆಂಬ ತುಂಡು ನೆಲವನ್ನು ಕೂಡ ಗಳಿಸಲಿಲ್ಲ ಎಂಬ ನೋವಿಗೂ ಒಳಗಾಗುತ್ತಾನೆ. "ಗೋವೆಯಿಂದ ಬಂದು ಇಷ್ಟು ವರ್ಷಗಳಾದರೂ ಒಂದು ತುಂಡು ಆಸ್ತಿ ಮಾಡಲಿಲ್ಲವೇ ವಿಟ್ಠುಪೈಗಳೆ? ಮಂಜೇಶ್ವರ ಉಳ್ಳಾಲ ಮಂಗಳೂರಿಗೆ ಹೋಗಿ ನೋಡಿ. ನಿಮ್ಮವರು ಆಸ್ತಿಪಾಸ್ತಿ ಮಾಡಿಕೊಂಡಿದ್ದಾರೆ. ನೀವೂ ಏನೂ ಮಾಡಿಲ್ಲವೆಂದರೆ ಆಶ್ಚರ್ಯ"(ಸ್ವಪ್ನ ಸಾರಸ್ವತ- ಪುಟ, ೨೮೪) ಎಂದು ವಿಟ್ಠು ಪೈ ಬೀಗರಾದ ರಾಮಯ್ಯ ಶಾನಭಾಗರು ಅಂದಾಗಲೆಲ್ಲ ವಿಟ್ಠು ಪೈ ಮನಸ್ಸು ಎಲ್ಲಿಲ್ಲದಂತೆ ಕದಡುತ್ತಿತ್ತು. ಸಮಾಧಾನವೆಂಬತೆ ವಿಟ್ಠು ಪೈ "ಗೋವೆಯಲ್ಲಿ ನಮ್ಮದೂ ತುಂಡೂ ಆಸ್ತಿ ಇತ್ತು ಶಾನುಭಾಗರೇ. ಆದಾರೆ ಹೊರಟಾಗ ಏನುಳಿಯಿತು ಹೇಳಿ" (ಸ್ವಪ್ನ ಸಾರಸ್ವತ- ಪುಟ, ೨೮೪) ಎಂದು ಗೋವೆಯ ಮನೆ ಆಸ್ತಿ, ಹೊಲಗದ್ದೆಗಳನ್ನು ನೆನಪಿಸಿಕೊಂಡು ಮರಗುವುದು ಕಂಡುಬರುತ್ತದೆ. ತನ್ನ ಗೋವೆಯ ವೇರಣೆಯ ಮನೆ ನೆಲವನ್ನು ನೆನಪಿಸಿಕೊಂಡು ಸಮಾಧಾನವನ್ನು ತಂದುಕೊಂಡರು ಅವನಲ್ಲಿ ಸೂಪ್ತವಾಗಿ ಇಲ್ಲಿ ತನ್ನದೆಂಬ ನೆಲವನ್ನು ಮಾಡಿಕೊಳ್ಳಲಿಲ್ಲ ಎನ್ನುವ ಮಾನಸಿಕ ಅತೃಪ್ತಿಯು ಸಾಯುವವರೆಗೂ ಇದ್ದೆ ಇತ್ತು.



ಮನುಷ್ಯನಿಗೆ ತಾನು ನೆಲೆಯೂರಿದ ಅಸ್ತಿತ್ವನ್ನು ಕಂಡುಕೊಂಡ ನೆಲೆಯನ್ನು ಬಿಟ್ಟು ಹೋಗುವುದೆಂದರೆ ಅದೊಂದು ಅಸಾಧ್ಯವಾದದ್ದು. ಅದೊಂದು ದೊಡ್ಡ ಮಾನಸಿಕ ಹಿಂಸೆ. ಅನಿವಾರ್ಯತೆಗಳಿಗೆ ಸಿಲುಕಿ ಹೋಗಲೆ ಬೇಕಾದಾಗ ಮತ್ತು ಹೋಗುವಾಗ, ಹಾಗೂ ಹೋಗಿ ಹೊಸದೊಂದು ನೆಲೆಯಲ್ಲಿ ಹೊಂದಿಕೊಂಡು

ನೆಲೆಯೂರುವಾಗ ಅವರ ಮನಸ್ಸಿನ ಮೇಲೆ ಅನೇಕ ರೀತಿಯ ಪರಿಣಾಮಗಳನ್ನು ಉಂಟುಮಾಡುತ್ತದೆ. ಇಲ್ಲಿ ಮಹಿಳೆಯರನ್ನು ಮಕ್ಕಳನ್ನು ವೃದ್ಧರನ್ನು ಗಮನಿಸಬೇಕು. ಅನಾಥ ಭಾವ, ಪರಕೀಯ, ಒಂಟಿತನ, ಪರದೇಶಿ ಭಾವ, ಈ ಎಲ್ಲ ಮಾನಸಿಕ ಹಿಂಸೆಗಳಿಗೆ ತಳಮಳಗಳಿಗೆ ವಲಸೆ ಪ್ರಕ್ರಿಯೆ ತುತ್ತು ಮಾಡುತ್ತದೆ. ಇಂತಹ ಅನೇಕ ಸಂಗತಿಗಳು ವಲಸಿಗರಿಗೆ ಎದುರಾಗುವುದನ್ನು ಈ ಕಾದಂಬರಿಯಲ್ಲಿ ಕಂಡುಬರುತ್ತದೆ.

**ಪರಾಮರ್ಶನ ಗ್ರಂಥಗಳು**


೧. ಆಮೂರ ಜಿ.ಎಸ್. ೨೦೧೬. ಕನ್ನಡ ಕಥನ ಸಾಹಿತ್ಯ; ಕಾದಂಬರಿ. ಸಪ್ನ ಬುಕ್ ಹೌಸ್ ಬೆಂಗಳೂರು.

೨. ಕುರ್ತಕೋಟಿ ಕೀರ್ತಿನಾಥ. ೨೦೧೨. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ. ಕುರ್ತಕೋಟಿ ಮೆಮೊರಿಯಲ್ ಟ್ರಸ್ಟ್, ಧಾರಾವಾಡ.

೩. ಗೋವಿಂದರಾಜ ಗಿರಡ್ಡಿ. ೨೦೧೫. ಕಾದಂಬರಿ; ವಸ್ತು ಮತ್ತು ತಂತ್ರ. ಹೇಮಂತ ಸಾಹಿತ್ಯ ಬೆಂಗಳೂರು.

೪. ತಿರುಮಲೇಶ್.ಕೆ.ವಿ. ೨೦೧೬. ಅಸ್ತಿತ್ವವಾದ. ಅಭಿನವ ಪ್ರಕಾಶನ, ಬೆಂಗಳೂರು.

೫. ದೇವಿ. ಜಿ.ಎನ್. (ಅನು.) ಶಾರದ. ಬಿ.ಎ. ೨೦೧೫. ವಿಸ್ಮೃತಿಯ ನಂತರ. ಕುವೆಂಪು ಭಾರತಿ ಪ್ರಾಧಿಕಾರ.

೬. ಬಿಳಿಮಲೆ ಪುರುಷೋತ್ತಮ. ೨೦೧೯. ವಲಸೆ ಸಂಘರ್ಷ ಮತ್ತು ಸಮನ್ವಯ. ಆಕೃತಿ ಆಶಯ ಪಬ್ಲಿಕೇಶನ್ಸ್, ಮಂಗಳೂರು.

೭. ಹುಳಿಯಾರ್ ನಟರಾಜ್. ೨೦೧೭. ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ. ಪಲ್ಲವ ಪ್ರಕಾಶನ.

೮. ಶುಭದಾಯಿನಿ ಆರ್.ತಾರಿಣಿ. ೨೦೧೬. ಡಯಾಸ್ಪೊರಾ. ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಬೆಂಗಳೂರು.




# ಅಭಿನವ ಕಾಳಿದಾಸ :
# ಆಸ್ಥಾನ ವಿದ್ವಾಂಸ ಬಸವಪ್ಪ ಶಾಸ್ತ್ರಿಗಳ ಕೆಲ ಗೀತೆಗಳು



ಡಾ॥ ಬಿ. ನಂಜುಂಡಸ್ವಾಮಿ

ಕನ್ನಡ ನಾಡಿನ ಸಾಹಿತ್ಯ-ಸಂಸ್ಕೃತಿ ಬೆಳವಣಿಗೆಗೆ ಮೈಸೂರು ನಗರದ ವಿದ್ವಾಂಸರ ಕೊಡುಗೆ ಅಪಾರವಾದದ್ದು. ೧೮೯೦-೧೯೬೦ರ ಕಾಲಮಾನದ ಪ್ರಕಟಿತ ಪುಸ್ತಕಗಳು, ನಾಶವಾಗದೆ ಉಳಿದ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳು ಇವುಗಳ ಸೂಕ್ಷ್ಮವಾದ ಅಧ್ಯಯನ ಮಾಡಿದರೆ ನಮಗೆ ಗೊತ್ತಿಲ್ಲದ ವಿವರಗಳು ಲಭ್ಯವಾಗುತ್ತವೆ. ಯುವ ವಿದ್ವಾಂಸರು ಸೂಕ್ಷ್ಮವಾಗಿ ಅಧ್ಯಯನ ಮಾಡಬೇಕು.

ಮೈಸೂರು ನಗರದಲ್ಲಿದ್ದ "DEPARTMENT OF PUBLIC INSTRUCTION, MYSORE" ವತಿಯಿಂದ H.H. THE MAHARANI GIRL'S SCHOOL SERIES "ಬಾಲಿಕಾ ಗೀತಮುಕ್ತಾಕಲಾಪಾ" BALIKA GITAMUKTAKALAPA ೧೮೯೩ರಲ್ಲಿ ನಾಲ್ಕನೇ ಮುದ್ರಣ ಹೊರಬಂದಿದ್ದು ೩೦೦೦ ಪ್ರತಿಗಳನ್ನು ಮುದ್ರಣ ಮಾಡಲಾಗಿದೆ. ೧೧೫ ಪುಟದ ಈ ಪುಸ್ತಕ ಮುದ್ರಣವಾದ ಮುದ್ರಣಾಲಯ PRINTED AT THE GOVERNMENT BRANCH PRESS, MYSORE ಪ್ರಕಟಿತ ಪುಸ್ತಕಕ್ಕೆ ಒಂದು ಪುಟದ ಪೀಠಿಕೆ ಇದ್ದು ಅವನ್ನು ಯಥಾವತ್ತಾಗಿ ಕೊಡಲಾಗಿದೆ.

**ಪೀಠಿಕೆ**

ಮೈಸೂರು ಶ್ರೀಮನ್ಮಹಾರಾಣಿಯವರ ಬಾಲಿಕಾ ಪಾಠಶಾಲೆಯ ಉಪಯೋಗಾರ್ಥವಾಗಿ "ಗೀತಮುಕ್ತಾ ಕಲಾಪ"ವೆಂಬ ಈ ಪುಸ್ತಕವು ಶ್ರೀಮನ್ಮಹಾರಾಜರಾಜಾ ಸಾಹೇಬ್ಬಹದ್ದೂರವರ ದರಬಾರ್ ಬಕ್ಷಿಯವರಾದ

ವಿದ್ಯಾಭಿಮಾನಿಗಳಾದ ಮಹಾರಾಜಶ್ರೀ ರಾಯಬಹದೂರ್ ಅಂಬಿಲ್ ನರಸಿಹ್ಮಯ್ಯಂಗಾರ್ಯರವರ ಅಪ್ಪಣೇಮೇರೆ ಈ ಕೆಳಗೆ ಬರೆಯಲ್ಪಟ್ಟಿರುವ ಕವಿಗಳಿಂದ ರಚಿಸಲ್ಪಟ್ಟಿತ್ತು, ಮತ್ತು ಪ್ರತಿ ಪದಗಳ ಪ್ರಾರಂಭದಲ್ಲಿಯೂ ತೋರಿಸಿರುವ ಗುರುತುಗಳು ಅವುಗಳನ್ನು ರಚಿಸಿದ ಈ ಕವಿಗಳನ್ನು ತಿಳಿಸುತ್ತವೆ.

ಮೈಸೂರಲ್ಲಿರುವ ವೇ॥ ಮ॥ ಕವಿ ಗಿರಿಯಪ್ಪನವರು

ಮೈಸೂರಲ್ಲಿರುವ ವೇ॥ ಮ॥ ಗಿರಿಭಟ್ಟ ತಮ್ಮೈಯ್ಯನವರು

ಮೈಸೂರಲ್ಲಿರುವ ಅರಮನೇ ಸಂಗೀತವಿದ್ವಾಂಸರು ಮ॥ ಸದಾಶಿವರಾಯರು.

ಮೈಸೂರಲ್ಲಿರುವ ಅರಮನೇ ವಿದ್ವಾಂಸರು ವೇ॥ ನಂಜನಗೂಡು ಸುಬ್ಬಾಶಾಸ್ತ್ರಿಗಳು.

ಮೈಸೂರಲ್ಲಿರುವ ಅರಮನೇ ವಿದ್ವಾಂಸರು ವೇ॥ ಚಾ॥ ರಾಮಾಶಾಸ್ತ್ರಿಗಳು.

ಮೈಸೂರಲ್ಲಿರುವ ಅರಮನೇ ವಿದ್ವಾಂಸರು ವೇ॥ ಜಯರಾಯಾಚಾರ್ಯರು.

ಮೈಸೂರಲ್ಲಿರುವ ಅರಮನೇ ವಿದ್ವಾಂಸರು ಮ॥ ಬಸವಪ್ಪಶಾಸ್ತ್ರಿಗಳು.

ಮೈಸೂರಲ್ಲಿರುವ ಅರಮನೇ ವಿದ್ವಾಂಸರು ವೇ॥ ನರಸಿಹ್ಮಶಾಸ್ತ್ರಿಗಳು.

ಶ್ರೀಮನ್ಮಹಾರಾಣಿಯವರ ಬಾಲಿಕಾಪಾಠಶಾಲೆಯ ವಿ. ಮ॥ ಪದ್ಮನಾಭೈಯ್ಯನವರು.

(ಮೂಲದಲ್ಲಿರುವ ಈ ಗುರುತುಗಳನ್ನು ಯಥಾವತ್ತಾಗಿ ಕೊಡಲು ಸಾಧ್ಯವಾಗುವುದಿಲ್ಲ. ಡಿ.ಟಿ.ಪಿ ಆದ ನಂತರ ಆ ಗುರುತುಗಳು ಅಸ್ತವ್ಯಸ್ತವಾಗುತ್ತವೆ.)

ಆಸ್ಥಾನ ವಿದ್ವಾನ್ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಹೆಸರಾಂತ ಕವಿಗಳು, ವಿದ್ವಾಂಸರು, ಪುರೋಹಿತರು, ನಾಟಕಗಾರರು ಆಗಿದ್ದರು. ಅವರ ಪೂರ್ವಜರ ಊರು ಶಿವಗಂಗೆ ಬೆಟ್ಟದ ತಪ್ಪಲಿಗೆ ಹತ್ತಿರ ಇರುವ ಇಂದಿನ ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು ನಾರಸಂದ್ರ ಗ್ರಾಮ. ವೇದಮೂರ್ತಿ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು, ವೀರಶೈವ ಜಂಗಮ ಮನೆತನಕ್ಕೆ ಸೇರಿದವರು. ಶಾಸ್ತ್ರಿಗಳ ತಾತನ ಹೆಸರು ವೇದಮೂರ್ತಿ ಮುರುಡು ಬಸವಸ್ವಾಮಿಗಳು, ನಾರಸಂದ್ರದ ರುದ್ರಾಕ್ಷಿ ಮಠದೊಡೆಯರು. ಇವರದು ಪುತ್ರವರ್ಗ ಪರಂಪರೆ ಮಠವಿರಬೇಕು. ಶಾಸ್ತ್ರಿಗಳ ತಂದೆ ಹೆಸರು ಮಹದೇವಶಾಸ್ತ್ರಿಗಳು, ತಾಯಿಯ ಹೆಸರು ಶಿವಶರಣೆ ಬಸವಮ್ಮನವರು. ಮುಮ್ಮಡಿ ಕೃಷ್ಣರಾಜ ಒಡೆಯರು ಶಿವಗಂಗಾ ಕ್ಷೇತ್ರಕ್ಕೆ ಭೇಟಿ ಕೊಟ್ಟ ವಿಷಯ ಅವರ ಜೀವನಚರಿತ್ರೆಯಲ್ಲಿ ದಾಖಲಾಗಿದೆ. ಶಿವಗಂಗಾ ಬೆಟ್ಟಕ್ಕೆ ಹೋಗುವಾಗಲೂ ಅಥವಾ ವಾಪಸ್ಸು ಬರುವಾಗ ಮಹಾಜನತೆಯ ಅಭಿಮಾನದ

ಕೋರಿಕೆಯಂತೆ ನಾರಸಂದ್ರ ಗ್ರಾಮಕ್ಕೆ ಭೇಟಿ ಕೊಟ್ಟಾಗ ರುದ್ರಾಕ್ಷಿಮಠದ ಕರ್ತೃ ಗದ್ದುಗೆ ದರ್ಶನಕ್ಕೆ ಬಂದಾಗ, ಪುತ್ರವರ್ಗ ಪರಂಪರೆಯ ವೇದಮೂರ್ತಿ ಮಹದೇವಶಾಸ್ತ್ರಿಗಳು ಮಾಡಿದ ರಾಜಾಶೀರ್ವಾದ ಮಂತ್ರಗಳನ್ನು ಕೇಳಿ ಮುಮ್ಮಡಿ ಕೃಷ್ಣರಾಜ ಒಡೆಯರು ಮಂತ್ರಮುಗ್ಧರಾಗಿ ಜಂಗಮ ದಂಪತಿಗಳನ್ನು ಮೈಸೂರು ಅರಮನೆಗೆ ಸಮ್ಮುಖ ಪುರೋಹಿತರನ್ನಾಗಿ ಕರಸಿಕೊಂಡರು. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳ ದೌರ್ಭಾಗ್ಯ, ಬಾಲ್ಯದಲ್ಲಿ ಪಿತೃವಿಯೋಗವಾಯಿತು. ಸ್ವಲ್ಪ ಕಾಲದ ನಂತರ ಮಾತೃವಿಯೋಗವಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರವರ ಕೃಪಾಕಟಾಕ್ಷದಿಂದ, ಅಳಿಯ ಲಿಂಗರಾಜರ ಆಶ್ರಯದಲ್ಲಿ ಸಂಸ್ಕೃತ-ಕನ್ನಡ ಭಾಷೆಯ ಘನ ಪಂಡಿತರಾದರು. ಸಂಗೀತಾದಿ ಕಲೆಗಳಲ್ಲಿ ವೇದಾದಿ ದರ್ಶನಗಳಲ್ಲಿ ಘನ ಪಂಡಿತರಾದರು. ಇವರ ವಿದ್ಯಾಗುರುಗಳು ಸೋಸಲೆ ವೇದಮೂರ್ತಿ ಗರಳಪುರಿಶಾಸ್ತ್ರಿಗಳು, ವ್ಯಾಕರಣದ ಬಿ. ಮಲ್ಲಪ್ಪನವರು ಇನ್ನು ಮುಂತಾದವರು.

ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಮಹಾರಾಜಾ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರನ್ನು ಕುರಿತು 'ಕೃಷ್ಣರಾಜಾಭ್ಯುದಯ'ವೆಂಬ ಕೃತಿ ರಚಿಸಿದರು. ಆದರೆ ಆ ಕೃತಿ ಲಭ್ಯವಾಗಿಲ್ಲ. ಮಹಾರಾಜಾ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಉಪಯೋಗಕ್ಕಾಗಿ 'ಬಿಲ್ವವೃಕ್ಷ ಪೂಜಾವಿಧಿ' ಎಂಬ ಕೃತಿಯನ್ನು ಶಾಸ್ತ್ರ ಸಮ್ಮತವಾಗಿ ರಚಿಸಿದ್ದರು. ಈ ಎರಡು ಕೃತಿ ರಚಿಸಿದಾಗ ಬಸವಪ್ಪ ಶಾಸ್ತ್ರಿಗಳಿಗೆ ಹದಿನೆಂಟು ವರ್ಷ. ನಮ್ಮಗಳ ದೌರ್ಭಾಗ್ಯ 'ಬಿಲ್ವವೃಕ್ಷ ಪೂಜಾವಿಧಿ' ಪುಸ್ತಕವು ಲಭ್ಯವಿಲ್ಲ.

ಮುಮ್ಮಡಿ ಕೃಷ್ಣರಾಜ ಒಡೆಯರ ತರುವಾಯ ಪಟ್ಟಕ್ಕೆ ಬಂದ ದತ್ತುಪುತ್ರ ರಾಜಕುಮಾರ ಶ್ರೀ ಚಾಮರಾಜೇಂದ್ರ ಒಡೆಯರಿಗೆ ವಿದ್ಯಾಬೋಧಕರಾಗಿದ್ದರು. ಅಂದಿನ ದಿವಾನರಾಗಿದ್ದ ದಿವಾನ್ ರಂಗಾಚಾರ್ಯರು. ರಾವ್‌ಬಹದ್ದೂರ್ ಅಂಬಿಲ್ ನರಸಿಂಹಯ್ಯಂಗಾರರು ಸಾಹುಕಾರ್ ನೀಲಗಿರಿ ಪಾಪಣ್ಣ ಮುಂತಾದ ಮಹನೀಯರ ಪ್ರೋತ್ಸಾಹದಿಂದ ಹಲವು ಕೃತಿಗಳನ್ನು ರಚಿಸಿದರು.

ಮೈಸೂರು ಮಹಾರಾಜರಾಗಿದ್ದ ಶ್ರೀ ಚಾಮರಾಜೇಂದ್ರ ಒಡೆಯರವರ ನೆಚ್ಚಿನ ಕಲಾನುರಾಗದ ಕುರುಹಾಗಿ ಆರಂಭವಾದ ಅರಮನೆ ನಾಟಕ ಮಂಡಳಿಗೆ ಶಾಸ್ತ್ರಿಗಳು ಸಂಸ್ಕೃತ ಭಾಷೆಯ ನಾಟಕಗಳನ್ನು ಕನ್ನಡಿಸಿ ಕೊಡುತ್ತಿದ್ದರು. ಕಾಳಿದಾಸನ ಶಾಕುಂತಲಾ ಷೇಕ್ಸ್‌ಪಿಯರ್‌ನ Othello ನಾಟಕವನ್ನು 'ಶೂರಸೇನ ಚರಿತ್ರೆ'ವೆಂದು ಕನ್ನಡಕ್ಕೆ ಭಾಷಾಂತರಿಸಿಕೊಟ್ಟರು. ಈ ಕಾರಣದಿಂದ ಶಾಸ್ತ್ರಿಗಳನ್ನು ವಿದ್ವತ್‌ಜನತೆ ನಾಟಕ ಪ್ರೇಮಿಗಳು "ಕನ್ನಡ ನಾಟಕ ಪಿತಾಮಹ"ನೆಂದು ಕರೆದರು. ಶಾಸ್ತ್ರಿಗಳು ಶ್ರೇಷ್ಠ ಗಮಕಿಗಳು ಅವರ ಕಾವ್ಯವಾಚನ ಶಕ್ತಿ ಅಮೋಘವಾದದ್ದು ಎಂದು ಕವಿಚರಿತೆಗಾರರಾದ ಆರ್. ನರಸಿಂಹಾಚಾರ್ಯರ ತಮ್ಮ ಉಪನ್ಯಾಸದಲ್ಲಿ ಕೊಂಡಾಡಿದ್ದಾರೆ. ಕುಮಾರವ್ಯಾಸ ಭಾರತವನ್ನು ಅವರು ವಾಚನ ಮಾಡುವ ರೀತಿ

ವಾಚನ ಮಾಡುವವರನ್ನು ಮತ್ತೊಬ್ಬರನ್ನು ನಾನು ಕಂಡಿಲ್ಲ ಎಂದು ಕೊಂಡಾಡಿದ್ದಾರೆ. ೧೮೯೧ ಫೆಬ್ರವರಿ ತಿಂಗಳು ಕುದುರೆಗಾಡಿಯಲ್ಲಿ ವಾಯುಸಂಚಾರಕ್ಕೆ ಹೋದಾಗ, ಅಪಘಾತವಾಗಿ ಮಹಾಕವಿಯನ್ನು ನಾವು ಕಳೆದುಕೊಂಡೆವು. ಶಾಸ್ತ್ರಿಗಳು ಮಹಾಲಿಂಗದಲ್ಲಿ ಲೀನರಾದಾಗ ಅವರ ಪ್ರಿಯ ಶಿಷ್ಯ ಆಸ್ಥಾನ ಮಹಾವಿದ್ವಾನ್ ಕರ್ಣಾಟಕ ಭಾಷಾರತ್ನಂ ಪಿ.ಆರ್. ಕರಿಬಸವಶಾಸ್ತ್ರಿಗಳು ೨೬.೨.೧೮೯೧ ರಂದು ರಚಿಸಿದ ಚರಮಗೀತೆಯಲ್ಲಿ;

ನೆರೆ ಮರೆವ ವಿಕೃತಿಸಂವ
ತ್ಸರಗತಮಾಘಾಖ್ಯಮಾಸಸಿತಪಕ್ಷಪರಿ ।
ಸ್ಫರಿತತ್ರಯೋದಶೀತಿಥಿ
ವರಪೋಷಿತಕಮಲಮಿತ್ರಸುತವಾಸರದೊಳ ॥ ೧ ॥

ಸ್ಪಷ್ಟವಾಗಿ ತಿಳಿಸಿದ್ದಾರೆ.

ಶುಭಕೃದ್ವತ್ಸರದೊಳ್ಸ
ದ್ವಿಭವದೆ ಜನಿಸುತ್ತೆ ಬಾಲ್ಯದೊಳೆ ನಲವಿನಂ ।
ಉಭಯಸುಭಾಷಿಗಳೊಳ್ದು
ರ್ಲಭಮಪ್ರನಿಚಕ್ಷಣತೆಯನುರೆ ಕೈಕೇಂತಂ ॥ ೪ ॥

ಈ ಮಾಹಿತಿಯಿಂದ ಶಾಸ್ತ್ರಿಗಳು ಜನಿಸಿದ್ದು ೧೮೪೩ರಲ್ಲಿ ಮಹಾಲಿಂಗದಲ್ಲಿ ಲೀನವಾಗಿದ್ದು ಫೆಬ್ರವರಿ ೧೮೯೧ ಒಟ್ಟು ಜೀವಿತಾವದಿ ೪೮ ವರ್ಷ ಮಾತ್ರ. ಅಂದಿನ ಸಮಕಾಲೀನ ವಿದ್ವಾಂಸರು ಒಂದು ಸಂಸ್ಮರಣ ಗ್ರಂಥವನ್ನು ಹೊರತಂದಿದ್ದಾರೆ. ಸಾಕಷ್ಟು ಮಾಹಿತಿ ಉಳಿದು ಬರುತ್ತಾ ಇತ್ತು. ೧೯೭೭ ರಲ್ಲಿ ಮೈಸೂರು ನಗರದಲ್ಲಿ ನೆಲೆಸಿದ್ದ ಲಿಂ॥ ಆಸ್ಥಾನ ವಿದ್ವಾನ್ ಪ್ರೊ॥ ಎಂ.ಜಿ. ನಂಜುಂಡಾರಾಧ್ಯರು ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು ಸಮಗ್ರ ಕೃತಿಗಳನ್ನು ತಮ್ಮ ಪ್ರಬೋದ ಪುಸ್ತಕ ಮಾಲೆಯಿಂದ ಹೊರತಂದು ಮಹದುಪಕಾರ ಮಾಡಿದ್ದಾರೆ. ಹಳೆಯ ಪ್ರಕಟಿತ ಬಾಲಿಕಾ ಗೀತಮುಕ್ತಾಕಲಾಪ ಪರಿಶೀಲಿಸುವಾಗ ಬಸವಪ್ಪ ಶಾಸ್ತ್ರಿಗಳು ವಿರಚಿಸಿದ ಈ ಗೀತೆಗಳು ನನ್ನ ಪರಿಶೀಲನೆಗೆ ಲಭ್ಯವಾದವು. ಅವುಗಳನ್ನು ಯಥಾವತ್ತಾಗಿ ಕೊಡಲಾಗಿದೆ.

**ರಾಗ-ಬೆಹಾಗು** **ರೂಪಕತಾಳ**

ತ್ರಿಪುರಸುಂದರಿ । ತಾರಾಧೀಶ । ನೀಕಾಶಾನನೆ ॥ ಪ ॥

ಚಪಲಲೋಚನೆಚರಣಭಕ್ತ । ವಿಪದಪಹರಣೈಕಚತುರೆ ।

ವಿಪುಲದನುಜಬೃಂದದಮನಿ । ಲಪನವಿಜಿತಜಲಜ ನಿಕರೆ ॥ ೧ ॥

ಕಮಲಸಂಭವಮಘವದಾದಿ । ನಮದಮರ ಕಿರೀಟಖಚಿತ ।

ವಿಮಲಮಣಿರೀಚಿರುಚಿರ । ತಮಸುಚರಣನಳಿನಯುಗಳೆ ॥ ೨ ॥

ಗಿರಿವರಾರ್ಜಿತಸುಕೃತಸಾರ । ಪರಿಣತಿಮಯಮೂರ್ತಿಲಲಿತೆ ।

ನಿರುಪಮಕೃಪೆಪಾಹಿಮಾಮಿಹ । ನರಹರಿಕವಿವಿನುತಚರಿತೆ ॥ ೩ ॥

**ಶ್ರೀರಾಮನು ಸೀತಾದೇವಿಯನ್ನು ರಕ್ಷಿಸೆಂದು ಭೂದೇವಿಯನ್ನು ಸ್ತುತಿಸಿದ ಪದ**

**ರಾಗ-ಜಂಜೋಟಿ** **ಮಿಶ್ರಛಾಪುತಾಳ**

ದೇವಿಪಾಲಿಸು ವೈದೇಹಿಯ-ಭೂಮಿ ॥ ಪ ॥

ಇನವಂಶದರಸರ । ಮನೆಗೆಮಂಗಳೆಯಾದ ।

ಜನಕಕುಲಾಂಬುಧಿಲಕ್ಷ್ಮಿಯ ॥ ೧ ॥

ದೇವಯಾಗದೆ ಭೂ । ದೇವಿನೀನೇ ಪೆತ್ತ ।

ಪಾವನಳಾದ ಸೀತೆಯ ॥ ೨ ॥

ಮನದಿನಾಂ ಪರಮಪಾವನೆಯೆಂದು ತಿಳಿದರು ।

ಜನವಮೆಚ್ಚಿಸೆ । ಬಿಟ್ಟಸೀತೆಯ ॥ ೩ ॥

**ಶ್ರೀರಾಮನು ಗಂಗೆಯನ್ನು ಸ್ತುತಿಸಿದ ಪದ.**

**ರಾಗ-ಜಲಾಪು** **ಆದಿತಾಳ**

ಭಾಗೀರಥಿಮಹಾ । ಭಾಗೆವಂದಿಪೆನಾಂ ।

ನಾಗಭೂಷಣಶಿರೋ । ಭಾಗವಿಭೂಷೆ ॥ ಪ ॥

ಕಪಿಲಕೋಪಾಗ್ನಿಯಿಂ । ತಪಿಸಿದನಂಮಯ ।
ಪ್ರಪಿತಾಮಹರನು । ಕೃಪೆಯೊಳುಪೊರೆದ ॥ ೧ ॥
ಅಭಿವಂದಕಜನ । ಕಭಿಮತವೆನಿಸುವ ।
ಶುಭಫಲವೀಯುವ । ತರಿಭುವನಪಾವನೆ ॥ ೨ ॥
ಕ್ಷಿತಿಸುತೆಯೊಳಗರುಂ । ಧತಿಯೊಲು ನೀನು ।
ಹಿತವನುಚಿಂತಿಸು । ಶ್ರಿತಪರಿಪಾಲೆ ॥ ೩ ॥

**ಶ್ರೀರಾಮನು ಅಗಸ್ತ್ಯಾಶ್ರಮಕ್ಕೆ ಹೋಗುವದಕ್ಕಾಗಿ ಪಂಚವಟಿಯನ್ನು ಸ್ತುತಿಸಿ ಹೊರಟದ್ದು.**

**ರಾಗ–ಸುರಟ** **ರೂಪಕತಾಳ**

ಪಂಚವಟೀಮುನಿನಿಕರಸ । ಮಂಚಿತೆಮಹಾ ॥ ಪ ॥
ಶರಧಿಯನಾಚಮನಗೈದ । ಪರಮಮಹಿಮರು ।
ಬರುವದೆಂದುಪೇಳಿದರಾ । ವರಮುನೀಂದ್ರರು ॥ ೧ ॥
ಗುರುಜನೋಪರೋಧಗೈಯ । ದಿರುವರಾಮನ ।
ಪಿರಿದತಿಕ್ರಮವಸ್ಯೆ । ಸಿರುನೀನೀಕ್ಷಣ ॥ ೨ ॥
ಆಗುರುಗಳ ಸನ್ನಿಧಿಗನು । ರಾಗದಿಂದ ನಾಂ ।
ಪೋಗಿಬರುವೆನೀಗ ಸುಜನ । ಪೊಗಸನ್ನುತೆ ॥ ॥ ೩ ॥

**ರಾಗ–ಹಮೀರಣಕಲ್ಯಾಣಿ** **ರೂಪಕತಾಳ**

ಆಲಿಸುಭೂಪಾಲಕ ಕುಲಮೌಳಿರತ್ನನೆ ।
ಬಾಲೆಪೇಳ್ವಬಿನ್ನಪವ ಕೃ । ಪಾಲವಾಲನೆ ॥ ಪ ॥
ಉಳಿದೆನ್ನ ಮನೆ ಯೊಳೆನ್ನಯ ಪತಿತೆರಳತ್ತ ಬಳಿಕನಾಂ ।
ಫಲವಿಲ್ಲದುಪವಾಸವ ಮಾಡಿದವೊಲಾಯಿತು ॥ ೧ ॥
ಪತಿಸನ್ನಿಧಿಯೊಳಗಿಲ್ಲದೆ ನಿಮಿಷಾರ್ಧವನುಹಾ ।
ಅತಿಕಷ್ಟದಿಂದನೂಕುವೆ ಯುಗಕೆಣೆಯ ಮಾಡಿನಾಂ ॥ ೨ ॥

ಅದರಿಂದ ಪತಿಯಸಂಗಡನಾಂಪೋಗಲಾಜ್ಞೆ ಯಾ ।
ಮುದದಿಂದಕೊಟ್ಟು ಕಳುಹಿಪುವ್ಯೆ ಸದಯಹೃದಯನೆ ॥ ೩ ॥

**ಸೀತಾದೇವಿ ಲಕ್ಷ್ಮಣನ ಸಂಗಡ ಹೇಳುವ ಪದ.**

**ರಾಗ–ಕಾಂಭೋಜಿ** **ರೂಪಕತಾಳ**

ಆರನು ಆಡುವದೇತಕೆ ನನ್ನ । ಕ್ರೂರಕರ್ಮದಫಲವು ॥ ಪ ॥
ಕಡೆಗೆದಯಾಳುರಾಘವನಲ್ಲಿ ತಪ್ಪಿಲ್ಲ ।
ನುಡಿವುದೇನಣುಗನಿನ್ನಲ್ಲು ತಪ್ಪಿಲ್ಲ ॥
ಕಡುಪಾತಕಿನಾನು ಪೆಣ್ಣಾಗಿ ಪುಟ್ಟ ಬೆಂ ।
ದೊಡಲಪೊರೆವುದೆ ಯನ್ನದೆ ತಪ್ಪಲ್ಲದೆ ॥ ೧ ॥

**ಪತಿಭಕ್ತಿಯನ್ನು ಕುರಿತು ಹೇಳುವ ಪದಗಳು**

**ರಾಗ–ಮುಖಾರಿ** **ಆದಿತಾಳ**

ಆಲೀಸೈಯ್ಯಸತ್ಯ ಸು । ಶೀಲನೆ ನೀನು ।
ಪೇಳುವೆ ದೇವರಮುಂದೆ । ಪೇಳುವವೊಲ್ನಾನು ॥ ಪ ॥
ಮತಿಮನೋವಾಕ್ಕಾಯಕರ್ಮಂಗಳಿಂದಲಿ ।
ಪತಿಯಾ ಮೀರಿನಡೆದರಧೋಗತಿಯದಾಗಲಿ ॥ ೧ ॥
ಪಟ್ಟದರಸನೊಮ್ಮೆ ನಿರ್ದಯನಾಗಲು ನಾನು ।
ಬಿಟ್ಟರು ಬಿಡಲಾರೆನವನೊಳಿಟ್ಟಾಸೆಯನು ॥ ೨ ॥
ಇಂತು ನಿಜವಾಗಿನಾಂ ನಡೆಯುತಿರ್ದ್ದರು ।
ಕಾಂತನಂತಾಡಿದಮೆಲ್ನಾನೆಂತು ಬಾಳುವೆನು ॥ ೩ ॥

**ರಾಗ–ಕಾಂಭೋಜಿ** **ಮಿಶ್ರಛಾಪುತಾಳ**

ಅಕ್ಕಟಾ ದ್ರೋಹಿಯೆಂದಾಡಿದ ನಾರ್ಯಪುತ್ರನೆನ್ನನು ॥ ಪ ॥
ಪತಿಯೆಯನಗೆ ಪರದೈವೆನ್ನು ತನಾಂ ।
ಮತಿಯಲ್ಲಿತಿಳಿದಿರ್ಪುದೆ ದ್ರೋಹವೊ ।
ಮತಿಮನೋವಾಕ್ಕಾಯಂಗಳೊಳಾತನಾ ।
ಣತೆಯನುಮೀರದೆ ನಡೆದುದೆದ್ರೋಹವೊ ॥ ೧ ॥
ಪರಪುರುಷರ ಸಹೋ । ದರರೆಂದು
ಭಾವಿಸಿಬರಲಾದರಿಸಿದುದೆ ದ್ರೋಹವೊ ॥
ಪುರುಷನುಪೇಳದಿರ್ದರುಮಾತಿನಿಂಗಿತ ।
ವರಿತುನಾಂನಡೆದುದೇನಾದರು ದ್ರೋಹವೊ ॥ ೨ ॥
ಆತಂಗೆಬೇಸರಾಗುತ್ತ ಪೇಳಿದಾಗ ಸಂ ।
ಗೀತವ ಪಾಡಿದುದೆದ್ರೋಹವೊ ॥
ನೂತನಕಾವ್ಯಕಲಾಚಿತ್ರ ಕೌಶಲ್ಯ ।
ರೀತಿಯನಾನರಿತಿರ್ಪುದೆ ದ್ರೋಹವೊ ॥ ೩ ॥
ಆಪತ್ತಡಸಿದಜನದೊಳುನಾನು ।
ತಾಪವನಾಂತುನಾಂ ನಡೆದುದೆ ದ್ರೋಹವೊ ॥
ಕೋಪದಿಪೊಡೆಯೆ ಸೈರಿಸಿಪ್ಪುದೆದ್ರೋಹವೊ ।
ರೂಪಾತಿಶಯುವನಾಂ ಪಡೆದುದೆ ದ್ರೋಹವೊ ॥ ೪ ॥





# ಬಸವಣ್ಣ ಮತ್ತು ವಿಜ್ಞಾನ



ಡಾ. ರಾಜಶೇಖರ ಜಮದಂಡಿ

ವಿಜ್ಞಾನ ಮತ್ತು ಧರ್ಮ ಒಂದಕ್ಕೊಂದು ಪೂರಕವಾಗಿರುವ ಹಾಗೆ ಬಳಸಿಕೊಳ್ಳುವುದು, ಧಾರ್ಮಿಕ ನಂಬಿಕೆ, ವೈಜ್ಞಾನಿಕ ಹಿನ್ನೆಲೆಯನ್ನೊಳಗೊಂಡಿದ್ದರೂ ಮೇಲ್ನೋಟದಲ್ಲಿ ಅರಿವಿಗೆ ಬಾರದೇ ಇರಬಹುದು. ನಮ್ಮ ಪೂರ್ವಿಕರು ಪ್ರತಿಯೊಂದು ಕಟ್ಟಳೆಗಳನ್ನು ಧಾರ್ಮಿಕ ಚೌಕಟ್ಟಿನೊಳಗಿನಿಂದ ಕಾಣಲ್ಪಡುತ್ತಿದ್ದರು. ಅವುಗಳಿಗೆ ವಿಜ್ಞಾನದ ಸ್ಪರ್ಷವಿದ್ದೇ ಇರುತ್ತಿತ್ತು. ವಿಜ್ಞಾನವೆಂದರೆ ವಿಶ್ವದ ರಚನೆಯಲ್ಲಿ ಯಾವ ವಸ್ತು-ಪದಾರ್ಥ ಎಷ್ಟೆಲ್ಲಾ ವಿಶೇಷವಾಗಿದೆ, ಹೇಗೆ ಕಾರ್ಯ ನಿರ್ವಹಿಸುತ್ತದೆ? ಎಂಬುದನ್ನು ಅರ್ಥೈಸಿಕೊಳ್ಳುವ ಒಂದು ಪ್ರಯತ್ನ. ಧರ್ಮವೆಂದರೆ ನಮ್ಮನ್ನೊಳಗೊಂಡು ಯಾವ ಉದ್ದೇಶ, ಅರ್ಥವನ್ನರಿಯುವ ಒಂದು ಪ್ರಯತ್ನ. ಜಗತ್ತಿಗೆ ಒಂದು ಉದ್ದೇಶ-ಅರ್ಥ ಇರುವುದಾದರೆ ಜಗತ್ತಿನಲ್ಲಿರುವ ಮನುಷ್ಯನಿಗೂ ಒಂದು ಅರ್ಥವಿರಬೇಕಲ್ಲವೆ?

'ವಿಜ್ಞಾನ ವಿನಾಶದ ಮೂಲ ಧರ್ಮ ಶಾಂತಿಯ ಮೂಲ'ವೆಂಬದು ಕೆಲವರ ಅಭಿಪ್ರಾಯ. ಇವುಗಳಲ್ಲಿ ಅನೇಕ ವ್ಯತ್ಯಾಸಗಳಿದ್ದರೂ ಇವು ನಾಣ್ಯದ ಎರಡು ಮುಖಗಳು. ಎರೆಡೂ ಜಗತ್ತನ್ನು ನಿಯಂತ್ರಿಸುವ ಬಲವಾದ ಶಕ್ತಿಯನ್ನು ಪಡೆದಿವೆ. ಅಂದರೆ ಗೆಲಿಲಿಯೋ ಸೌರವ್ಯೂಹದ ಸಿದ್ಧಾಂತವನ್ನು ಮಂಡಿಸಿದಾಗ, ಡಾರ್ವಿನ್ನನು ಜೀವವಿಕಾಸನ ಸಿದ್ಧಾಂತವನ್ನು ಪ್ರಕಟಿಸಿದಾಗ ಮತ್ತು ಗ್ರೀಕ್ ತತ್ವಜ್ಞಾನಿ ಸಾಕ್ರೇಟಿಸ್‌ನ ಸಂಶೋಧನೆಗಳೆಲ್ಲಾ ಧರ್ಮದ ವಿರುದ್ಧವೆಂದಾಗ ಕೆಲ ಧರ್ಮಗುರುಗಳು ವಿರೋಧಿಸಿದರು. ಎರೆಡನ್ನೂ ಸರಿಯಾದ ರೀತಿಯಲ್ಲಿ ಅರ್ಥೈಸಿಕೊಂಡು ಬದುಕಿನಲ್ಲಿ

ಬಳಸಿಕೊಳ್ಳುವುದು ಮುಖ್ಯ. ಮಗು ಬೆಳೆದಂತೆ ಮನುಷ್ಯನಾಗುವ ಹಂತದಲ್ಲಿ ಹೆಜ್ಜೆಹೆಜ್ಜೆಗೆ ಈ ಎರಡೂ ಶಕ್ತಿಗಳ ಪರಿಚಯ ಮಾಡಿಕೊಳ್ಳುತ್ತಾ ಸಾಗುತ್ತದೆ. ಮನುಷ್ಯನ ಆಲೋಚನಾ ಶಕ್ತಿಯಲ್ಲಿರುವ ಈ ವೈರುಧ್ಯಗಳು ಅತ್ಯಂತ ಗಂಭೀರ ವಿಷಯಗಳಾಗಿವೆ. ಇವುಗಳು ಮೇಲ್ನೋಟದಲ್ಲಿ ಅಮೃತದಂತೆ ಕಂಡರೂ ವಿಪರೀತವಾದಾಗ ವಿಷವಾಗಿ ಪರಿಣಮಿಸುತ್ತವೆ.

**ಉದಾಹರಣೆಗೆ:** ದೇಶದಲ್ಲಿ ಧರ್ಮಯುದ್ಧದಿಂದ ಅನಾಹುತಗಳು ಸಂಭವಿಸಿದಂತೆ ವಿಜ್ಞಾನೋತ್ಪಾದನೆಯಿಂದಲೂ ಯುದ್ಧಗಳು ಸಂಭವಿಸಿವೆ. ಇವುಗಳ ಬಳಕೆಯಲ್ಲಿನ ಕ್ರಮದಲ್ಲಿ ಜವಾಬ್ದಾರಿಯಿದ್ದಂತೆ ನಿಯಂತ್ರಣವೂ ಎಚ್ಚರವಾಗಿರಬೇಕು. ಜೀವನದಲ್ಲಿ ಸಾಧನೆಗೆ 'ಜ್ಞಾನ ಮತ್ತು ವಿಜ್ಞಾನ'ಗಳು ಮುಖ್ಯ. ವಿಜ್ಞಾನದಲ್ಲಿ ಭೌತಿಕವಾದವಿದ್ದಂತೆಯೆ ಧರ್ಮದಲ್ಲಿ ಅಂತರಂಗದ ಅಸ್ತಿತ್ವವನ್ನು ಕಾಣಬಹುದು. ವಿಜ್ಞಾನವೆಂದರೆ ಪ್ರಶ್ನೆ ಮತ್ತು ವಿಸ್ಮಯ. ವಿಶ್ವದ ರಚನೆಯಲ್ಲಿ ನಮ್ಮನ್ನೊಳಗೊಂಡು ಅದು ಹೇಗೆ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಅರ್ಥೈಸಿಕೊಡುವ ಒಂದು ಪ್ರಯತ್ನ. ಭೂಮಿ-ಆಕಾಶಗಳ ಮಡಿಲಲ್ಲಡಗಿರುವ ಸೃಷ್ಟಿಯ ವೈಚಿತ್ರ್ಯಗಳನ್ನು ಬೆರಗುಗಣ್ಣಿನಿಂದ ನೋಡುತ್ತ ಬಂದ ಬಸವಣ್ಣನವರು ತಮ್ಮ ಅನುಭವದಲ್ಲಿ ಇವುಗಳನ್ನು ವಿಶ್ಲೇಷಿಸಲು ಯತ್ನಿಸಿದ್ದಾರೆ. ತಮ್ಮ ಬದುಕಿನುದ್ದಕ್ಕೂ ನಿಸರ್ಗದಲ್ಲಿ ಸೃಷ್ಟಿ ಸ್ಥಿತಿ ಲಯಗಳನ್ನು ನಿರಂತರ ಕಾಣುತ್ತಾ ಬಂದಿರುವುದುಂಟು. ಹೀಗಾಗಿ ಅವರ ಅನುಭಾವದ ಅಭಿವ್ಯಕ್ತಿಗಳು ವಚನಗಳ ಮೂಲಕ ಅನಾವರಣಗೊಂಡಿವೆ.



ಬಸವಣ್ಣನವರು ಬರೀ ಪ್ರಗತಿಪರವಾಗಿ ಯೋಚಿಸಿದಂತೆಯೆ, ತಮ್ಮ ಸುತ್ತಲಿನ ಮೌಢ್ಯತೆಯ ವಿಷಯಗಳನ್ನು ಅವಲೋಕಿಸಿ ಅವುಗಳನ್ನು ಪ್ರಾಯೋಗಿಕವಾಗಿ ತೊಲಗಿಸಲು ತಾತ್ವಿಕ ಮತ್ತು ಸೈದ್ಧಾಂತಿಕ ಚಿಂತನೆಯಲ್ಲಿ ತೊಡಗಿಸಿಕೊಂಡವರು. ಅವರ ವಿಜ್ಞಾನದ ಮನಸ್ಸು ಪರಿಸರ ಮತ್ತು ಪಂಚಭೂತಗಳನ್ನು ಅರಿತಂತೆಯೆ ಅವರ ಆಧ್ಯಾತ್ಮಿಕತೆಯು ದೇವರನ್ನು ಅರಿಯುವುದಕ್ಕೆ ಹಾತೊರೆದಿದೆ. ಕಣ್ಣಿಗೆ ಕಾಣದೆ ಅಗೋಚರವಾದ ನಿಲುವಿವಲ್ಲಿ ಹಾಗೂ ಸೂಕ್ಷ್ಮವಾಗಿ ಗಾಳಿಯಂತಿರುವ ಭಗವಂತನ ಬಗೆಗಿರುವ ಈ ವಚನ:

**ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ**
**ಪಾತಳದಿಂದತ್ತತ್ತ ನಿಮ್ಮ ಶ್ರೀಚರಣ**
**ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ**
**ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ**
**ಕೂಡಲಸಂಗಮದೇವಯ್ಯ**
**ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ.**

ಇಲ್ಲಿಯ ಪದಗಳನ್ನು ಅರ್ಥ ಮಾಡಿಕೊಳ್ಳುವಾಗ ವಿಶ್ವದ ಅಗಾಧತೆ ಅರಿವಾಗುತ್ತದೆ. ಬ್ರಹ್ಮಾಂಡದಲ್ಲಿರುವ ಲಕ್ಷ ಲಕ್ಷ ಗ್ರಹಗಳಲ್ಲಿ ಭೂಮಿಯೂ ಒಂದು. ಜಗತ್ತು ಲಕ್ಷಕೋಟಿ ಗ್ರಹಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು ಊಹಿಸಲು ಆಗದಷ್ಟು ದೊಡ್ಡದು. (ಸುಮಾರು ೧೭೦ ಶತಕೋಟಿಯಿಂದ ೨೦೦ ಶತಕೋಟಿ ಬ್ರಹ್ಮಾಂಡಗಳು ನಮ್ಮ ವಿಶ್ವದಲ್ಲಿದೆಯೆಂದು ವಿಜ್ಞಾನಿಗಳು ಊಹಿಸಿದ್ದಾರೆ.) ಅಮೇರಿಕಾದ ಎಡ್ವಿನ್ ಪೋವೇಲ್ ಹಬ್ಬಲ್ ಎಂಬ ವಿಜ್ಞಾನಿಯು 'ವಿಶ್ವವು ಸತತವಾಗಿ ಹಿಗ್ಗುತ್ತಿದೆ' ಎಂದು ತಿಳಿಸುವವರೆಗೆ ನಮಗೆ ಅದರ ವಿಸ್ತಾರತೆಯ ಅರಿವಿರಲಿಲ್ಲ. ಇದಕ್ಕೊಂದು ಸರಳ ಉದಾಹರಣೆಗೆ ನೋಡುವುದಾದರೆ ಒಂದು ಬಲೂನಿನ ಮೇಲೆ ಅಲ್ಲಲ್ಲಿ ಬಣ್ಣದ ಹನಿಗಳನ್ನು ಹಾಕಿ ಅದರಲ್ಲಿ ಗಾಳಿ ತುಂಬಿಸಿದಾಗ ಆ ಎಲ್ಲ ಹನಿಗಳು ಒಂದಕ್ಕೊಂದು ದೂರದಲ್ಲಿರುವುದು ಕಂಡುಬರುವುದು. ಹಾಗೆಯೇ ಬ್ರಹ್ಮಾಂಡ ಹಿಗ್ಗುತ್ತಿದೆ. ಹೀಗೆ ಹಿಗ್ಗುವಿಕೆಯಲ್ಲಿ ಈ ಗ್ಯಾಲಕ್ಸಿಗಳನ್ನು (ಬ್ರಹ್ಮಾಂಡದ ನಕ್ಷತ್ರಗಳು) ದೂರ ಸರಿಸುವ ಶಕ್ತಿಯ ಅರಿವಿದ್ದ ಬಸವಣ್ಣನವರು, ಅನುಭಾವದ ದೃಷ್ಟಿಯಲ್ಲಿ ಲಿಂಗರೂಪದ ಕೂಡಲಸಂಗಮ ದೇವನೆಂಬ ಶಕ್ತಿಯನ್ನು ತಮ್ಮ ಕರಸ್ಥಳದಲ್ಲಿ ಚುಳುಕಾಗಿ ಸ್ಥಾಪಿಸಿಕೊಂಡು ಇಡೀ ಜಗತ್ತನ್ನು ಅಪ್ಪಿಕೊಳ್ಳುವಂತೆ ಅಂತರ್ಮುಖಿಯಾಗಿದ್ದಾರೆ.

ಗಾಳಿಯ ಸ್ಪರ್ಶ ಅನುಭವವಿದ್ದರೂ ಹಿಡಿಯಲಾಗದು, ಬೆಳಕು ಕಣ್ಣಿಗೆ ಕಂಡರೂ ಅಪ್ಪಿಕೊಳ್ಳಲಾಗದು. ಆದರೆ ವೈಜ್ಞಾನಿಕವಾಗಿ ಇವುಗಳು ಸತ್ಯ. ಇವುಗಳಿಲ್ಲದೆ ಬದುಕೇ ಇಲ್ಲ. ಜಗತ್ತನ್ನಾವರಿಸಿಕೊಂಡಿರುವ ಸೃಷ್ಟಿಕರ್ತನೆಂಬ ಅಗೋಚರವಾದ ಶಕ್ತಿಯ ವಿವೇಚನೆ ಮಾಡಬೇಕಾದರೆ ಆಧ್ಯಾತ್ಮಿಕತೆಯ ಮೆಟ್ಟಿಲು ಹತ್ತಲೇಬೇಕು. ಆಕಾಶದಲ್ಲಿನ ಸೂರ್ಯ-ಚಂದ್ರ-ನಕ್ಷತ್ರ ಮಂಡಲವನ್ನು(ನೂರುಲಕ್ಷಕೋಟಿ) ವೈಜ್ಞಾನಿಕವಾಗಿ ವಿಶ್ಲೇಷಿಸಬಹುದು. ಇವುಗಳನ್ನು ಬಸವಣ್ಣನವರು ಭಗವಂತನ ಶ್ರೀಮುಕುಟವೆಂದು, ಪಾತಾಳಲೋಕವೆಂದು, ಅಂದರೆ ಭೂಗ್ರಹ(ಶ್ರೀಚರಣ)ದಿಂದ ನಕ್ಷತ್ರ ಮಂಡಲ(ಶ್ರೀಮುಖುಟ)ದವರೆಗೆ ಆವರಿಸಿಕೊಂಡಿರುವ ಭಗವಂತ ಅಗೋಚರವೆಂದು ಭಾವಿಸಿಕೊಂಡು ಅವು ಆಳದಲ್ಲಿ ಅಗಮ್ಯ-ಅಪ್ರತಿಮದ ಪ್ರತೀಕಗಳು. ನಮ್ಮ ದೂರದೃಷ್ಟಿ ಹರಿಯುವವರೆಗೂ ಸೃಷ್ಟಿ ಗೋಚರವಾಗುತ್ತಿದ್ದರೂ ಅದೇ ಅಂತಿಮವಲ್ಲ, ಅದರಾಚೆಗೂ ಸೃಷ್ಟಿಯಿದೆ. ಇಂಥ ಅಸಾಮಾನ್ಯ ಶಕ್ತಿಯ(ದೇವರ)ನ್ನು ಸಾಂಕೇತಿಕ ರೂಪದಲ್ಲಿ ಇಷ್ಟಲಿಂಗವಾಗಿರಿಸಿ ಕರಸ್ಥಲದಲ್ಲಿ ಪೂಜಿಸುವ ಪರಿಕಲ್ಪನೆಯೇ ವಿಶೇಷ. 'ಬಲಗೈ ಶ್ರೇಷ್ಠ ಎಡಗೈ ಕನಿಷ್ಠ' ಎಂಬ ಮೌಢ್ಯತೆಗುತ್ತರವಾಗಿ ಎಡಗೈಯಲ್ಲಿ ಇಷ್ಟಲಿಂಗವಿಡಿದು ಪೂಜಿಸಿಕೊಳ್ಳಲು ತಿಳಿಸಿದರು. ಹೀಗೆ ಸರ್ವವ್ಯಾಪಿಯಾದ (ಕರಿಯು ಕನ್ನಡಿಯೊಳಡಗಿದಂತೆ)ದೇವನನ್ನು ಸೂಕ್ಷ್ಮರೂಪಿಯಾಗಿ ಅಂಗೈಯಲ್ಲಿ ಲಿಂಗದಾಕಾರಗೊಳಿಸಿರುವ ಅವರ ಅದ್ಭುತ ಆಲೋಚನೆ ನೋಡಿದರೆ ಅವರಿಗೆ ಖಗೋಳಜ್ಞಾನ ಗೊತ್ತಿರುವಂತೆ ಕಾಣುತ್ತದೆ.

ಲಘು ತರಂಗಾಂತರದ ಕಿರಣಗಳು ಹೆಚ್ಚು ಚದುರಿ ಉದ್ದ ತರಂಗಾಂತರದ (ಕೆಂಪು) ಕಿರಣಗಳು ಕಡಿಮೆ ಚದುರವುದರಿಂದ, ಚದುರಿದ ನೀಲ ನೇರಳೆ ಕಿರಣಗಳು

ನಮ್ಮ ಕಣ್ಣಿನಲ್ಲಿ ಸೇರಿ ಆಕಾಶ ನೀಲವಾಗಿ ಕಾಣುವುದು. ಆದರೆ ಪೃಥ್ವಿಯ ವಾತಾವರಣ ದಾಟಿ ಮೇಲಕ್ಕೆ ಹೋದರೆ, ಹವೆಯು ಕಣಗಳು ವಿರಳವಾಗಿರುವದರಿಂದ ಸೂರ್ಯ ಕಿರಣಗಳ ಚದುರುವಿಕೆ ಅತಿ ಕಡಿಮೆಯಾಗಿ ಆಕಾಶ ಕಪ್ಪಾಗಿ ಕಾಣುವುದು. ಆದ್ದರಿಂದ ಲಿಂಗವು ಕಪ್ಪು ಬಣ್ಣದ್ದಾಗಿದೆ.

**ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ**
**ಧರೆಹತ್ತಿ ಉರಿದೊಡೆ ನಿಲಲುಬಾರದು**
**ಏರಿ ನೀರುಂಬಡೆ ಬೇಲಿ ಕೆಯ್ಯ ಮೇವಡೆ**
**ನಾರಿ ತನ್ನ ಮನೆಯಲ್ಲಿ ಕಳುವಡೆ**
**ತಾಯ ಮೊಲೆವಾಲು ನಂಜಾಗಿ ಕೊಲುವಡೆ**
**ಇನ್ನಾರಿಗೆ ದೂರುವೆನಯ್ಯಾ ಕೂಡಲಸಂಗಮದೇವಾ?**

ಆಹಾರ ಬೇಯಿಸಲು ಬೇಕಾಗುವ ಬೆಂಕಿ ಒಂದು ಹಂತದಲ್ಲಿ ಉರಿದರೆ ಉಪಯೋಗ. ಇದೇ ಬೆಂಕಿ ಕಾಡಿಗೆ ಹತ್ತಿ ಉರಿಯಲಾರಂಭಿಸಿದರೆ ಜೀವರಾಶಿಗಳ ಮಾರಣಹೋಮ. ನೀರು ಅನಾವಶ್ಯಕವಾಗಿ ಪೋಲಾಗಬಾರದೆಂದು ತಡೆಗೋಡೆ ನಿರ್ಮಿಸಿದಾಗ ಅಥವಾ ಬೆಳೆ ರಕ್ಷಣೆಗೆ ಬೇಲಿ ಕಟ್ಟಿದಾಗ ಅವುಗಳಿಂದಲೇ ಅನಾಹುತ ಸಂಭವಿಸಿದರೆ ಎಂತಹ ಘೋರ? ಹೀಗಾಗಿ ನಿಯಂತ್ರಿತವಾದ ಶಕ್ತಿಯು ಜೀವಪೋಷಕವಾಗಿದ್ದರೆ ಒಳಿತು. ಅನಿಯಂತ್ರಿತವಾದರೆ ಅಪಾಯ ಕಟ್ಟಿಟ್ಟ ಬುತ್ತಿ. ಇದೇರೀತಿ ಪರಮಾಣುಬಾಂಬ್‌ಗಳನ್ನು ಒಳಿತಿಗಾಗಿ ಬಳಸಿದರೆ ಓಕೆ. ಇಲ್ಲದಿದ್ದರೆ ಅಘಾತ. ಹಾಗೆಯೇ ತಾಯಿ ಮೊಲೆ ಹಾಲೇ ನಂಜಾದರೆ ಶಿಶು ಬದುಕುವುದೆಂತು? ಅಂದರೆ ವೈಜ್ಞಾನಿಕವಾಗಿ ಈ ವಚನ ವಿಶ್ಲೇಷಣೆ ಮಾಡಿದಾಗ ಮನುಷ್ಯನ ಅತಿಯಾಸೆಗಳ ವೈಜ್ಞಾನಿಕ ಆವಿಷ್ಕಾರಗಳಿಂದ ತನ್ನ ಅಂತ್ಯವನ್ನು ತಾನೇ ತಂದುಕೊಂಡಿದ್ದಾನೆ. ಇದರಿಂದ ಜಗತ್ತಿನ ಅಥವಾ ನಿಸರ್ಗದ ಜೀವಿಗಳ ಕೊಂಡಿಯೆಲ್ಲಾ ಜರ್ಜರಿತವಾಗಿ ದುರಂತಗಳು ಸಂಭವಿಸುತ್ತಿವೆ.

ಸಾಪೇಕ್ಷ ಕಾಲ ಕೊಡುವ ಪರಿಮಿತ ಲೌಕಿಕ ಅನುಭವಗಳನ್ನು ಮೀರಿದ ಅಪರಿಮಿತ ಮಹಾಪ್ರಜ್ಞೆಯ ನಿರಪೇಕ್ಷವಾದ ಪರಮತತ್ತ್ವ, ಇಂತಹ ಕಾಲಾತೀತ ಕಲ್ಪನೆಯನ್ನು ಬಸವಣ್ಣನವರು:

**ವಾರವೆಂದರಿಯೆ ದಿನವೆಂದರಿಯೆ**
**ಏನೆಂದರಿಯೆನಯ್ಯಾ**
**ಇರುಳೆಂದರಿಯೆ ಹಗಲೆಂದರಿಯೆ**
**ಏನೆಂದರಿಯೆನಯ್ಯಾ**

**ನಿಮ್ಮ ಪೂಜಿಸಿ ಎನ್ನುವ ಮರೆದೆ**

**ಕೂಡಲಸಂಗಮದೇವಾ**

ಕತ್ತಲು ಮಾಯವಾಗಿ ಬೆಳಕು ಹರಿಯುತ್ತದೆ. ಬೆಳಕು ಕೊನೆಗೊಂಡು ಕತ್ತಲು ಆವರಿಸುತ್ತದೆ. ಇವು ನಿರಂತರ ಬರುವುದಕ್ಕೆ ಸೂರ್ಯ-ಚಂದ್ರರೇ ಕಾರಣ. ಇವರಿಬ್ಬರ ನಡುವಿನಲ್ಲಿ ದಿನಗಳು ಉರುಳುತ್ತವೆ. ಹೀಗೆ ಏಳು ದಿನಗಳು ಉರುಳಿದ ನಂತರ ವಾರವೆಂದು ಗುರುತಿಸುವುದುಂಟು. ಕಾಲಚಕ್ರವು ತನ್ನಷ್ಟಕ್ಕೆ ತಾನೆ ಒಂದೇ ಸವನೇ ತಿರುಗುತ್ತಲಿದ್ದರೂ ಪರಮತತ್ತ್ವದ ಅಸ್ತಿತ್ವವು ಕಾಲಾತೀತವಾಗಿರುತ್ತದೆ. ಇದರ ಸಾಧಕ ಕೂಡಲಸಂಗಮದೇವನ ಪೂಜೆಯನ್ನು ಮತ್ತು ಕಾಲದ ಪ್ರಜ್ಞೆಯನ್ನು ಮರೆತು ಮುಂದುವರಿಸಿ ತನ್ನನ್ನು ತಾನೆ ಮರೆಯುವ ಸ್ಥಿತಿಗೆ ತಲುಪುತ್ತಾನೆ.

**ಉಳ್ಳವರು ಶಿವಾಲಯ ಮಾಡಿಹರು,**

**ನಾನೇನು ಮಾಡುವೆ ಬಡವನಯ್ಯಾ,**

**ಎನ್ನ ಕಾಲೆ ಕಂಬ, ದೇಹವೇ ದೇಗುಲ,**

**ಶಿರವೇ ಹೊನ್ನ ಕಳಶವಯ್ಯಾ,**

**ಕೂಡಲಸಮಗಮದೇವಾ ಕೇಳಯ್ಯ,**

**ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.**

ಇಲ್ಲಿ ಶಕ್ತಿಯ ನಿತ್ಯತ್ವ (Principle of conservation of energy) ನೋಡಬಹುದು. ಈ ವಚನದ ಮೊದಲ ಸಾಲು ಆಧ್ಯಾತ್ಮವಾದದ್ದು, ಎರಡನೇ ಸಾಲು ಲೌಕಿಕವಾದದ್ದು. ಜಂಗಮ ಸ್ಥಿತಿಯನ್ನು ವಿವರಿಸುವ ಇದು ಚಲನಶೀಲತೆಯನ್ನು ಅನಾವರಣಗೊಳಿಸಿದೆ. ಸ್ಥಾವರವು ದೃಶ್ಯ ಮತ್ತು ಸ್ಪರ್ಶವಾದರೆ, ಜಂಗಮವು ಅದೃಶ್ಯ ಮತ್ತು ಚಲನಶೀಲತೆ. ಹೀಗಾಗಿ ಯಾವ ಶಕ್ತಿ ಕಾಣುತ್ತದೆಯೋ ಅದು ವಿನಾಶ. ಕಾಣಲಾರದ್ದು ಶಾಶ್ವತ. ಶಕ್ತಿಯು ವಿನಾಶ ಹೊಂದುವುದಿಲ್ಲ. ಶಕ್ತಿಯ ಒಟ್ಟು ಮೊತ್ತ ಸ್ಥಿರವಾಗಿರುತ್ತದೆ. 'ಜಂಗಮಕ್ಕಳಿವಿಲ್ಲ' ಅಗಾಧವಾದ ಶಕ್ತಿಯನ್ನು ಧ್ವಂಸ ಮಾಡಲು ಸಾಧ್ಯವಿಲ್ಲ(Energy can not be destroyed) ಎಂಬುದಾಗಿದೆ. ಇದನ್ನೇ ಮುಂದುವರೆದು ಹೇಳುವುದಾದರೆ ಐನ್‌ಸ್ಟೀನ್‌ರ ವಿಶಿಷ್ಟ ಸಾಕ್ಷೇಪ ಸಿದ್ಧಾಂತ (Special theory of relativity)ದಲ್ಲಿ ಸಿದ್ಧಗೊಂಡ ದ್ರವ್ಯರಾಶಿ ಮತ್ತು ಶಕ್ತಿಗಳು ಒಂದೇ ವಸ್ತುವಿನ ಎರಡು ರೂಪಗಳು. ಇವುಗಳನ್ನು ಒಂದರಿಂದ ಇನ್ನೊಂದು ರೂಪಕ್ಕೆ ಪರಿವರ್ತಿಸಬಹುದೆಂಬ ತತ್ವವನ್ನು ಅನುಕರಿಸಿದಾಗ 'ಸ್ಥಾವರಕ್ಕಳಿವುಂಟು' ಎಂಬುದರ ಅರ್ಥ ಖಚಿತವಾಗುತ್ತದೆ. ಅಂದರೆ ದ್ರವ್ಯರಾಶಿಯು ಶಕ್ತಿಯಾಗಿ ಪರಿವರ್ತನೆಗೊಳ್ಳುವಿಕೆಯನ್ನು ಅನೇಕ ಪ್ರಮಾಣ ಪ್ರಯೋಗಗಳಿಂದ ಸಿದ್ಧಪಡಿಸಲಾಗಿದೆ. 'ಪಾಪದಿಂದನರಕ-ಪುಣ್ಯದಿಂದಸ್ವರ್ಗ' ಈ ಕಲ್ಪನೆಗಳೇ

ಖಚಿತವೆಂಬುದು ಜನಪದರಲ್ಲಿದೆ. ಪುರಾಣಗಳೂ ಸಹ ಮನುಷ್ಯನ ಕರ್ಮಾನುಸಾರವಾಗಿ ಕಾಲ ಕಾಲಕ್ಕೆ ಹೌದೆಂದು ಹೇಳುತ್ತಾ ಬಂದಿವೆ. ಇಂತಹ ಭ್ರಮೆಯನ್ನು ಹೋಗಲಾಡಿಸುವ ಬಸವಣ್ಣನವರ ವೈಜ್ಞಾನಿಕ ವಚನವೊಂದು ಹೀಗಿದೆ:

**ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ?**

**ಈ ಲೋಕದೊಳಗೆ ಮತ್ತೆ ಅನಂತಲೋಕ,**

**ಶಿವಲೋಕ ಶಿವಾಚಾರವಯ್ಯಾ,**

**ಶಿವಭಕ್ತನಿದ್ದ ಠಾವೇ ದೇವಲೋಕ,**

**ಭಕ್ತನಂಗಣವೆ ವಾರಣಾಸಿ, ಕಾಯಕವೇ ಕೈಲಾಸ**

**ಇದು ಸತ್ಯ, ಕೂಡಲಸಂಗಮದೇವ.**

ಬ್ರಹ್ಮಾಂಡವು ಇಡ್ಲಿಯಾಕಾರದಲ್ಲಿರುವುದಲ್ಲದೆ, ಸುಮಾರು ೨೦೦ರಿಂದ ೪೦೦ ಶತಕೋಟಿ ನಕ್ಷತ್ರಗಳು ಹಾಗೂ ಸುಮಾರು ೧೦೦ಶತಕೋಟಿ ಗ್ರಹಗಳೂ ಇವೆ. ಇದು ಅಂತರತಾರಾ ಅನಿಲ ಧೂಳು ಮತ್ತು ಕೃಷ್ಣ ದ್ರವ್ಯ ಇವೆಲ್ಲದರ ಪರಸ್ಪರ ಗುರುತ್ವಬಲದ ಸೆಳೆತಕ್ಕೆ ಒಳಗಾಗಿರುವ ವ್ಯವಸ್ಥೆ. ಇದರ ವ್ಯಾಸ ಸುಮಾರು ೧ಲಕ್ಷ ಜ್ಯೋತಿರ್ ವರ್ಷಗಳು. ದಪ್ಪ ಸುಮಾರು ೧೦,೦೦೦ ಜ್ಯೋತಿರ್ವರ್ಷಗಳು. ಬ್ರಹ್ಮಾಂಡಗಳು ನೂರು ಟ್ರಿಲಿಯನ್ ನಕ್ಷತ್ರಗಳ(೧೦೧೪) ದೈತ್ಯ ಬ್ರಹ್ಮಾಂಡಗಳಿಂದ ಹಿಡಿದು ಕೆಲವೇ ಸಾವಿರ ನಕ್ಷತ್ರಗಳ ಕುಬ್ಜ ಗಾತ್ರದವರೆಗೂ ಇವೆ. ಬ್ರಹ್ಮಾಂಡವು ೧೦೦೦ದಿಂದ ೧೦೦.೦೦೦ ಪಾರಸೆಕ್ ಇದ್ದು ಮತ್ತು ಒಂದರಿಂದ ಮತ್ತೊಂದು ಲಕ್ಷಾಂತರ ಸೂರ್ಯ ದೂರಮಾನ ದೂರದಿಂದ ಬೇರ್ಪಡಿಸಲಾಗಿರುತ್ತದೆ. ಬ್ರಹ್ಮಾಂಡಗಳ ನಡುವಿನ ಜಾಗವನ್ನು ಒಂದು ಪ್ರತಿ ಘನಮೀಟರ್ ಒಂದು ಪರಮಾಣುವಿನ ಸರಾಸರಿ ಸಾಂದ್ರತೆಯನ್ನು ಹೊಂದಿರುವ ಅತಿ ಸೂಕ್ಷ್ಮ ಅನಿಲವು ತುಂಬಿರುತ್ತದೆ. ಹೀಗೆ ಖಗೋಳ ವಿಜ್ಞಾನ ಬಯಲಿನ ಸ್ವರೂಪವನ್ನು ವಿಜ್ಞಾನಿಗಳು ಸಂಶೋಧಿಸಿದ್ದಾರೆ.

ಈಗ ತಿಳಿದಿರುವ ಪ್ರಕಾರ ನೀಹಾರಿಕೆಗಳು ಅಂದರೆ ನಕ್ಷತ್ರಪುಂಜಗಳ ಸಂಖ್ಯೆ ೧ಸಾವಿರಕೋಟಿ. ಆಕಾಶದ ಅನಂತ ವಿಸ್ತಾರದಲ್ಲಿ ಎಲ್ಲಿಯೂ ಜೀವಿಗಳಿರುವ ಮಾಹಿತಿ ದೊರಕಿಲ್ಲ. ಈ ಸ್ವರ್ಗ–ನರಕದ ಕಲ್ಪನೆ ಇತರೇ ಲೋಕಗಳಲಿಲ್ಲ. ಈ ರೀತಿಯಾಗಿ ಅಳೆದು ತೂಗಿ ನೋಡಿರುವ ವಿಜ್ಞಾನಿಗಳ ಚಿಂತನೆಯನ್ನು ಬಸವಣ್ಣನವರು, ನಮ್ಮ ನಡವಳಿಕೆಯಿಂದ ನಾವು ಅನೇಕ ಲೋಕಗಳನ್ನು ಸೃಷ್ಟಿಸಿಕೊಂಡಿದ್ದೇವೆ. ಶಿವಭಕ್ತರಾದರೆ ಈ ಲೋಕವೇ ಶಿವಲೋಕವಾಗುತ್ತದೆಯಷ್ಟೆ. ಸಮಾಜದಲ್ಲಿ ವೈಜ್ಞಾನಿಕ ಮನೋಭಾವ ಬೆಳೆದಂತೆಲ್ಲಾ ಮೂಢನಂಬಿಕೆಗಳು ಇನ್ನೂ ಬಲವಾಗಿವೆ. ಈ ಕುರಿತು ಅನೇಕ ಮಾಧ್ಯಮಗಳಲ್ಲಿ ಒಬ್ಬರು ಒಂದು ಹೇಳುತ್ತಾ ಮತ್ತೊಬ್ಬರು ಇನ್ನೊಂದು ಹೇಳುತ್ತಾ ಮುಗ್ಧ ಜನರನ್ನು ಹಾದಿ ತಪ್ಪಿಸುತ್ತಿದ್ದಾರೆ.

ಈಗಲೂ ಶುಭಕಾರ್ಯ ಮಾಡುವಾಗ ವಾರ, ತಿಥಿ, ನಕ್ಷತ್ರಗಳ ಕುರಿತಂತೆ ಪಂಚಾಂಗವನ್ನು ನೋಡಿ ಮದುವೆ ಮಾಡುವುದು, ಆಕಾಶದಲ್ಲಿ ಕ್ಷಿಪಣಿಗಳನ್ನು ಹಾರಿ ಬಿಡುವುದು ನಡದೇ ಇದೆ. ಇದಕ್ಕೆ ಪೂರಕ ವಚನ ಹೀಗಿದೆ:

**ಅಂದು ಇಂದು ಮತ್ತೊಂದೆನಬೇಡ**

**ದಿನವಿಂದೇ ಶಿವ ಶರಣೆಂಬವಂಗೆ**

**ದಿನವಿಂದೇ ಹರ ಶರಣೆಂಬುವಗೆ**

**ದಿನವಿಂದೇ ಕೂಡಲಸಂಗನ ಮಾಣದೆ ನೆನೆವಂಗೆ.**

ಕಾಲ ಯಾರನ್ನೂ ಕಾಯಲಾರದು. ಅದು ಪರತತ್ವದ ಅದೀನ. ಕಾಲ ಕೆಟ್ಟದ್ದಾಗಿ ಬಳಸಿಕೊಂಡರೆ ಕೆಟ್ಟದ್ದಾಗುತ್ತದೆ. ರಾಹುಕಾಲ, ಗುಳಿಕಕಾಲ, ಯಮಗಂಡಕಾಲಗಳು ನಾವು ಕಲ್ಪಿಸಿಕೊಂಡಿರುವಂಥವುಗಳಷ್ಟೆ. ದೇವನನ್ನು ನೆನೆಯಲು ಶುಭದಿನಕ್ಕಾಗಿ ಕಾಯಬೇಕಾಗಿಲ್ಲ. ಸಹಜ ಉಸಿರಾಟದಂತಿರಬೇಕು. ಹಾಗೆಯೆ ಗ್ರಹ-ನಕ್ಷತ್ರಗಳ ಪರಿಣಾಮವು ಜೀವನದಲ್ಲಿ ಹುಟ್ಟು-ಸಾವುಗಳ ಮೇಲಾಗುತ್ತದೆಂಬ ನಂಬಿಕೆ ಅವೈಜ್ಞಾನಿಕವಾದುದು. ಗ್ರಹಗಳು ಕೋಟ್ಯಾಂತರ ಮೈಲಿಗಳಷ್ಟು ದೂರದಲ್ಲಿರುವುದರಿಂದ ಗುರುತ್ವಾಕರ್ಷಣದ ಪ್ರಭಾವ ಬೀರದು. ನಾವು ಮಾನಸಿಕವಾಗಿ ಗಟ್ಟಿಯಾಗಿದ್ದರೆ(ಸದಾ ಭಗವಂತನ ಧ್ಯಾನದಲ್ಲಿದ್ದರೆ) ಯಾವ ನಕ್ಷತ್ರಗಳು ನಮ್ಮನೇನು ಮಾಡಲಾರವೆಂಬ ಮಾತು ಸತ್ಯಕ್ಕೆ ಹತ್ತಿರವಾಗಿದೆ. ಇದು ವೈಜ್ಞಾನಿಕ ದೃಷ್ಟಿಯೂ ಸಹ. ಈರೀತಿ ಬಸವಣ್ಣನವರ ವಚನಗಳಲ್ಲಿರುವ ವೈಜ್ಞಾನಿಕ ದೃಷ್ಟಿ ಬದುಕಿಗೂ ಹತ್ತಿರವಾಗಿರುವಂಥದ್ದು. ನಮ್ಮಲ್ಲಿರುವ ಭ್ರಮೆಗಳನ್ನು ಕಳೆದು ವಾಸ್ತವತೆಯ ಅರಿವು ಮೂಡಿಸುವ ನೂರಾರು ವಚನಗಳನ್ನು ಅವರಲ್ಲಿ ಕಾಣಬಹುದು.

**ಆಕರ ಗ್ರಂಥಗಳು:**

೧. ವಚನಗಳಲ್ಲಿ ವಿಜ್ಞಾನ: ಸಂಪಾದಕರು: ಡಾ. ವೀರಣ್ಣ ರಾಜೂರ, ಶ್ರೀ ಬಸವರಾಜ ಹೂಗಾರ. ಶ್ರೀ ಮುರುಗೋಡ ಮಹಾಂತ ಶಿವಯೋಗೀಶ್ವರ ಶತಮಾನೋತ್ಸವ ಸ್ಮಾರಕ ಶ್ರೀ ಬಸವೇಶ್ವರಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೧೦.

ಬಸವಯುಗದ ಮಹಾಸಂಪುಟ-೧, ಸಂ. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೧೬



# ಬಿ.ಎಂ.ಶ್ರೀಕಂಠಯ್ಯನವರು ಮತ್ತು ಕರ್ನಾಟಕ ಹಿತೈಷಿಣಿ ಗ್ರಂಥಮಾಲೆ



**ಡಾ. ಜಿ. ಎಂ. ಹೆಗಡೆ**

ಬಿ.ಎಂ.ಶ್ರೀಕಂಠಯ್ಯನವರು ಕನ್ನಡಕ್ಕೆ ನವೋದಯ ತಂದ ಯುಗ ಪ್ರವರ್ತಕರು. ಅವರ 'ಇಂಗ್ಲಿಷ್ ಗೀತಗಳು' ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಹೊಸ ಕಾವ್ಯದ ಉದಯಕ್ಕೆ ಪ್ರೇರಕವಾಯಿತು. ಕನ್ನಡ ಕಾವ್ಯಕ್ಕೆ ಹೊಸ ಭಾವ, ಭಾಷೆ, ಛಂದಸ್ಸು ನಾದಲಯಗಳು ಬರುವದಕ್ಕೆ ಶ್ರೀಯವರು ದೀಪದರ್ಶಿಯಾದರು. ಭಾವಗೀತೆಯ ಯುಗಸಾಕ್ಷಿಯಾಗಿ ಶ್ರೀಯವರು ಅಮೋಘ ಕಾರ್ಯ ಮಾಡಿದರು. ಅವರ ಮಂಜುಳವಾಣಿಗೆ ಕವಿಕೋಗಿಲೆಗಳು ತಲೆದೂಗಿ ಹಾಡಲು ತೊಡಗಿದವು. ೧೯೦೯ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿ ವೃತ್ತಿಜೀವನ ಆರಂಭಿಸಿದ ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯನವರು ಇಂಗ್ಲೀಷ್, ಗ್ರೀಕ್, ಸಂಸ್ಕೃತ, ತಮಿಳು, ಕನ್ನಡ ಹೀಗೆ ಬಹುಭಾಷಾ ವಿದ್ವಾಂಸರಾಗಿ ಸರ್ವಭಾಷಾ ಭಾವ ಶ್ರೀಮಂತಿಕೆಯನ್ನು ಪ್ರಚುರಪಡಿಸುತ್ತಿದ್ದರು. ಇಂಗ್ಲೀಷ್ ಸಾಹಿತ್ಯದ ಅಧ್ಯಯನದಿಂದ ಶ್ರೀಕಂಠಯ್ಯನವರಿಗೆ ಕನ್ನಡ ಭಾಷೆ ಸಾಹಿತ್ಯದ ಪ್ರಾಚೀನ ವೈಭವ ಜನತೆಯಿಂದ ದೂರವಾಗಿರುವ ಬಗ್ಗೆ ವೇದನೆ ಉಂಟಾಯಿತು. ದೇಶಾದ್ಯಂತ ಬ್ರಿಟಿಶ್ ಸತ್ತೆಯ ವಿರುದ್ಧ ಆಂದೋಲನ ಆರಂಭವಾಗಿತ್ತು. ಶ್ರೀಕಂಠಯ್ಯನವರು ಕನ್ನಡ ನಾಡು ಹರಿದುಹಂಚಿಹೋಗಿದ್ದ ಸಂದರ್ಭದಲ್ಲಿ ಕರ್ನಾಟಕ ಏಕೀಕರಣ ಆಗಬೇಕು ಎಂದು ಜನತೆಯಲ್ಲಿ ಉದ್ಬೋಧಕ ಭಾಷಣ ಮಾಡಿ ಎಚ್ಚರಿಸಿದರು. ಅವರ ಶ್ರೀಕಂಠದಿಂದ ಹೊರಹೊಮ್ಮುತ್ತಿದ್ದ ಕನ್ನಡ ನುಡಿಯ ಮೋಹಕತೆಗೆ ಜನ ತಲೆದೂಗಿದರು. ಅದ್ಭುತವಾಗ್ಮಿಗಳಾದ ಅವರ ಕನ್ನಡ ಸಾಹಿತ್ಯ ಭಾಷಣಗಳು ಜನಪ್ರಿಯವಾದವು

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಬಿ.ಎಂ.ಶ್ರೀಕಂಠಯ್ಯನವರು 'ಕನ್ನಡ ಮಾತು ತಲೆ ಎತ್ತುವ ಬಗೆ' ಕುರಿತು ೧೯೧೧ರಲ್ಲಿ ಮಾಡಿದ ಭಾಷಣ ಕನ್ನಡ ಚಳವಳಿಯ ಚರಿತ್ರೆಯಲ್ಲಿಯೇ ಚಾರಿತ್ರಿಕವಾದದ್ದು, ಎಲ್ಲೆಲ್ಲೂ ಇಂಗ್ಲೀಷ್ಮಯವಾದ ಪರಿಸರದಲ್ಲಿ ಕನ್ನಡದ ಉತ್ಕರ್ಷಕ್ಕೆ ಶ್ರೀಕಂಠಯ್ಯನವರು ಜನತೆಯನ್ನು ಎಚ್ಚರಿಸುವ ಕಾರ್ಯ ಮಾಡುತ್ತಿದ್ದರು. ನಾಡಿನಾದ್ಯಂತ ಅವರ ಅಭಿಮಾನಿಗಳು ಹುಟ್ಟಿಕೊಂಡರು. ಶ್ರೀಯವರ ಇಂಗ್ಲೀಷ್ ಉಪನ್ಯಾಸ ಎಷ್ಟು ವಿದ್ವತ್ಪೂರ್ಣವಾಗಿತ್ತೋ ಅದಕ್ಕಿಂತ ಹೆಚ್ಚಾಗಿ ಕನ್ನಡ ಸಾಹಿತ್ಯ ಭಾಷಣಗಳು ಜನರ ಹೃದಯಕ್ಕೆ ಹತ್ತಿರವಾದವು. ಈಗ ನಾವು ಬಹುಮಾಧ್ಯಮಗಳ ಕಾಲದಲ್ಲಿದ್ದೇವೆ. ಆದರೆ ಶ್ರೀಯವರು ಯಾವ ಮಾಧ್ಯಮದ ನೆರವಿಲ್ಲದೆ ಕನ್ನಡದ ಮಾನ ಪ್ರತಿಷ್ಠೆಯನ್ನು ಹೆಚ್ಚಿಸಲು ಊರೂರು ಸುತ್ತಿ ಭಾಷಣ ಮಾಡುತ್ತಿದ್ದರು. ಜನ ಸಂಪರ್ಕ ಸಾಧಿಸುತ್ತ ನಡೆದ ಶ್ರೀಕಂಠಯ್ಯನವರು ಇಂಗ್ಲೀಷ್ ಪ್ರಾಧ್ಯಾಪಕರಾಗಿ ಕನ್ನಡದಲ್ಲಿ ಹೊಸ ಕಾವ್ಯ ಬರಬೇಕಾದ ಅಗತ್ಯವನ್ನು ಪ್ರತಿಪಾದಿಸಿದರು. ಕನ್ನಡವು ಪ್ರಾಚೀನ ಕಾವ್ಯದ ಕಥನ ಮಾದರಿಯನ್ನು ಬಿಟ್ಟು ಭಾವಗೀತದ ರೊಮ್ಯಾಂಟಿಕ್ ಮಾದರಿಯಾಗಿ ಪರಿವರ್ತನೆಗೊಳ್ಳುವ ಆಶಯವನ್ನು ಅವರು ತಿಳಿಯಪಡಿಸಿದರು. ಇದರಿಂದ ಕವಿತೆಯ ಛಂದಸ್ಸು ಬದಲಾಯಿತು. ವ್ಯಕ್ತಿನಿಷ್ಠ ಅನುಭವಗಳು ಕವಿತೆಯಾಗಿ ಹೊರಹೊಮ್ಮಿತು. ಇಂಗ್ಲೀಷ್‌ನಲ್ಲಿದ್ದುದನ್ನೆಲ್ಲ ಕನ್ನಡಕ್ಕೆ ತರುವ ಕನ್ನಡದಲ್ಲಿದ್ದುದನ್ನು ಇಂಗ್ಲೀಷ್‌ಗೆ ಕೊಡುವ (ಇವಳ ಸೊಬಗನವಳಿಗಿಟ್ಟು ನೋಡಬಯಸಿದೆ...) ಅವರ ಸಾಹಿತ್ಯಾದರ್ಶ ನವಮನ್ವಂತಕ್ಕೆ ಕಾರಣವಾಯಿತು. ಬಿ.ಎಂ.ಶ್ರೀಕಂಠಯ್ಯನವರ ಸಾಹಿತ್ಯ ವ್ಯಕ್ತಿತ್ವ ಸಾಧನೆಗಳನ್ನು ಸಮೀಕ್ಷಿಸುತ್ತ 'ಶ್ರೀನಿಧಿ' ಪ್ರಸ್ತಾವನೆಯಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪ ಅವರು ಹೀಗೆ ತಮ್ಮ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಭಾರತೀಯ ನವೋದಯದ ಪ್ರಮುಖವಾದ ಧಾರೆ ಎಂದರೆ ರಾಷ್ಟ್ರೀಯತೆ ಮತ್ತು ಆ ಮೂಲಕ ಎಚ್ಚರಗೊಂಡ ಸಾಮಾಜಿಕ ನಿಲುವುಗಳು. ಶ್ರೀಯವರಲ್ಲಿ ಕಂಡು ಬರುವ ಸಾಮಾಜಿಕ–ಧಾರ್ಮಿಕ ಉದಾರವಾದ, ಇಂಗ್ಲೀಷ್ ಶಿಕ್ಷಣದ ಪರಿಣಾಮವೇ ಹೊರತು ಅದು ರಾಷ್ಟ್ರಾದ್ಯಂತ ವ್ಯಾಪಿಸಿದ್ದ ರಾಷ್ಟ್ರೀಯತೆಯ ಪರಿಣಾಮದಿಂದ ರೂಪುಗೊಂಡದ್ದಲ್ಲ. ಅವರ ಸಮಕಾಲೀನರಾದ ಪಂಜೆ, ಗೋವಿಂದಪೈ, ಬೇಂದ್ರೆ, ಕುವೆಂಪು ಇಂಥ ಕವಿಗಳಲ್ಲಿ ಉಜ್ವಲವಾಗಿ ಹಾಗೂ ಧೈರ್ಯವಾಗಿ ರಾಷ್ಟ್ರೀಯ ಭಾವನೆಗಳು ಮುಖ್ಯವಾಗಿ ಭಾರತೀಯ ಸ್ವಾತಂತ್ರ್ಯ ಸಂಪಾದನೆ ಮತ್ತು ಚಳುವಳಿಗಳನ್ನು ಕುರಿತು ಆ ಚಳುವಳಿಯಲ್ಲಿ ತೊಡಗಿದ ಮಹಾನಾಯಕರ ವ್ಯಕ್ತಿತ್ವವನ್ನು ಕುರಿತು–ಅಭಿವ್ಯಕ್ತದಂತೆ. ಶ್ರೀಯವರಲ್ಲಿ ಅಭಿವ್ಯಕ್ತವಾಗಲಿಲ್ಲ ಅನ್ನುವುದು ತೀರಾ ವಿಲಕ್ಷಣವಾಗಿ ತೋರುತ್ತದೆ. ಹೀಗಾಗಿ ಶ್ರೀ ಅವರ ನವೋದಯ ನಿಜವಾದ ಅರ್ಥದಲ್ಲಿ ಪಡೆದುಕೊಳ್ಳಬಹುದಾಗಿದ್ದ ಆಯಾಮವನ್ನು ಪಡೆದು ಕೊಳ್ಳಲಿಲ್ಲ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಕಾವಿನಲ್ಲೂ ಶ್ರೀ ಅವರು ಇಷ್ಟೊಂದು ತಣ್ಣಗಿರಬೇಕಾದ ಅಗತ್ಯವಿರಲಿಲ್ಲ. ಒಂದು ವೇಳೆ

ಅವರ ಸಾಹಿತ್ಯ ಹಾಗೂ ವ್ಯಕ್ತಿತ್ವ ಭಾರತೀಯ ನವೋದಯದ ಮುಖ್ಯಧಾರೆಯಾದ ರಾಷ್ಟ್ರೀಯತೆಯನ್ನೂ ಒಳಗೊಂಡಿದ್ದರೆ, ಅವರ ಸಾಹಿತ್ಯಕ್ಕೆ ಪ್ರಾಪ್ತವಾಗ ಬಹುದಾಗಿದ್ದ ತೂಕ ಬೇರೆಯೇ ಆಗಬಹುದಾಗಿತ್ತು ಎಂದು ಭಾವಿಸುವುದು ಅನಿವಾರ್ಯವಾಗಿದೆ. ಆದರೂ ಶ್ರೀಯವರ ವ್ಯಕ್ತಿತ್ವ ಹಾಗೂ ಸಾಹಿತ್ಯಿಕ ಸಾಧನೆಗಳ ತೂಕ ಇದರಿಂದ ಕಡಿಮೆಯೇನೂ ಆಗುವುದಿಲ್ಲ. ಕನ್ನಡಕ್ಕಾಗಿ ಅವರೇನು ಮಾಡಿದ್ದಾರೋ, ಅದರ ಪರಿಣಾಮ ತುಂಬ ಗಾಢವಾದದ್ದಾಗಿದೆ. ಪ್ರಾತಃಸ್ಮರಣೀಯವಾಗಿದೆ. ಶ್ರೀ ಅವರು 'ಕನ್ನಡ ನವೋದಯಕ್ಕೆ ನಾಂದೀ ಸ್ವರೂಪರಾದವರು ಎಂದು ಅವರ ಶಿಷ್ಯರಾದ ಕುವೆಂಪು ಅವರು ಹೇಳಿದ ಮಾತು ತುಂಬ ಅರ್ಥಪೂರ್ಣವಾಗಿದೆ.' ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಿ.ಎಂ.ಶ್ರೀಕಂಠಯ್ಯನವರು ತಣ್ಣಗಾಗಿರಲಿಲ್ಲ ಅವರು ದೇಶಭಕ್ತರಿಗೆ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಪೂರ್ತಿ ಬೆಂಬಲ ಕೊಟ್ಟವರು. ಕರ್ನಾಟಕ ಏಕೀಕರಣ ಆಗಬೇಕೆಂದು ಹಂಬಲಿಸಿ ಕನ್ನಡಿಗರ ಆತ್ಮ ಪ್ರಜ್ಞೆಯನ್ನು ಜಾಗೃತಗೊಳಿಸಿದವರು. ಕನ್ನಡ ನಾಡಿಗೆ ಕನ್ನಡವೇ ಗತಿ ಅನ್ಯಥಾನಾಸ್ತಿ ಎಂದು ಕರೆಕೊಟ್ಟವರು. ಸಿರಿಗನ್ನಡಂ ಬಾಳ್ಗೆ ಎಂಬ ದಿವ್ಯಮಂತ್ರ ಜಪಿಸಿದರು. ಶ್ರೀಕಂಠಯ್ಯನವರು ಕನ್ನಡ ನವೋದಯದ ಮುಖ್ಯ ಧಾರೆಗಳಾದ ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆಯ ವಿಚಾರಗಳನ್ನು ತಮ್ಮ ಭಾಷಣಗಳಲ್ಲಿ ಪ್ರಸ್ತಾಪ ಮಾಡಿದ್ದಾರೆ. ಇದಕ್ಕೆ ದಾಖಲೆಗಳು ಸಿಗುತ್ತವೆ. ಅವರು ದೇಶದ ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳುವಳಿಗೆ ಬೆಂಬಲವಾಗಿ ನಿಂತವರು. ಧಾರವಾಡದ 'ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ' ಪ್ರಕಟಿಸಿದ 'ಶ್ರೀಮಂತ ನಾನಾ ಸಾಹೇಬ ಪೇಶವೆ' ಗ್ರಂಥಕ್ಕೆ ೧೯೩೩ರಲ್ಲಿ ಬರೆದ ಮುನ್ನುಡಿ ಈಗ ದೊರಕಿದ್ದು ಅದು ಶ್ರೀಯವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತದೆ. ನಾರಾಯಣ ವೆಂಕಟೇಶಕುರಡಿಯವರು ಧಾರವಾಡ ಶಿಕ್ಷಕರ ತರಬೇತಿ ಕಾಲೇಜಿನಲ್ಲಿ ಶಿಕ್ಷಕ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದವರು ಅವರು ಧಾರವಾಡದಲ್ಲಿ 'ಕರ್ನಾಟಕ ಹಿತೈಷಿಣಿ ಗ್ರಂಥಮಾಲೆ' ಮತ್ತು 'ಸರಸ್ವತಿ ಮುದ್ರಣಾಲಯ'ಗಳನ್ನು ಆರಂಭಿಸಿ ಶ್ರೀಯವರ 'ಇಂಗ್ಲೀಷ್ ಗೀತಗಳು' (೧೯೨೧) ಬಂದ ಮರುವರ್ಷ ಕರ್ನಾಟಕ 'ಕವಿತಾ ಕುಸುಮ ಮಂಜರಿ' ಭಾಗ೧ (೧೯೨೨) ಕರ್ನಾಟಕ ಕವಿತಾ ಕುಸುಮ ಮಂಜರಿ ಭಾಗ೨ (೧೯೨೨) ಕವಿತಾ ಪಾಠಮಾಲೆ(೧೯೨೨) ರವೀಂದ್ರರು ಕಣ್ಮರೆಯಾದರು (೧೯೨೨) ಪ್ರಕಟಿಸಿದರು. ದಾಕ್ಷಾಯಣಿ (ಪ್ರಪಂಚ ಧರ್ಮ ಭಾಗ೧ (೧೯೨೧) ಧಾರವಾಡ ಜಿಲ್ಲೆಯ ವರ್ಣನೆ, ಮುಂಬಯಿ ಕರ್ನಾಟಕ ಸಂಕ್ಷಿಪ್ತವರ್ಣನೆ ಸಹಿತ. (೧೯೨೯) ಪಾರ್ವತಿ ಕಥೆ(ಪ್ರಪಂಚ ಧರ್ಮ ಭಾಗ ೨(೧೯೨೦) ವಾಚನ ಪಾಠಮಾಲೆ(೧೯೩೩)ಹೊರತಂದರು.

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ವೀರರಾಣಿಯಾದ ಝಾಂಸಿ 'ಮಹಾರಾಣಿ ಲಕ್ಷ್ಮೀಬಾಯಿ ಕಥೆ(ಸಚಿತ್ರ) ೧೯೨೭ರಲ್ಲಿ ಪ್ರಕಟಿಸಿದರು. ಶ್ರೀಕೃಷ್ಣದೇವರಾಯ ಕಾದಂಬರಿ ೧೯೩೩ರಲ್ಲಿ ರಚಿಸಿದರು.

ನಾರಾಯಣ ವೆಂಕಟೇಶ ಕುರಡಿ ಅವರ 'ಶ್ರೀಮಂತ ನಾನಾ ಸಾಹೇಬ ಪೇಶವೆ' ಗ್ರಂಥಕ್ಕೆ ಬಿ.ಎಂ.ಶ್ರೀಕಂಠಯ್ಯನವರು ಮುನ್ನುಡಿಯನ್ನು ಬರೆದಿದ್ದಾರೆ. ಅದರ ಪೂರ್ತಿಪಾಠ ಈ ಕೆಳಗಿನಂತಿದೆ.

**ಮುನ್ನುಡಿ**

ಶ್ರೀ ನಾರಾಯಣ ವೆಂಕಟೇಶ ಕುರಡಿಯವರು ಈಗಾಗಲೇ ಅನೇಕ ಗ್ರಂಥಗಳನ್ನು ರಚಿಸಿ ಅಖಿಲ ಕರ್ಣಾಟಕದಲ್ಲಿ ಸುಪ್ರಸಿದ್ಧರಾದ ಗ್ರಂಥಕರ್ತರಾಗಿರುತ್ತಾರೆ. ಅವರ, ನನ್ನ ಮೈತ್ರಿಯ ಗುರುತಾಗಿ ಈ ಹೊಸ ಗ್ರಂಥಕ್ಕೆ ನಾನು ಒಂದು ಮುನ್ನುಡಿಯನ್ನು ಸೇರಿಸಬೇಕೆಂದು ಅವರು ಅಪೇಕ್ಷೆಪಟ್ಟದ್ದರಿಂದ, ಸಂತೋಷದಿಂದಲೂ, ಕೃತಜ್ಞತೆಯಿಂದಲೂ ಈ ಎರಡು ಮಾತುಗಳನ್ನು ಬರೆಯುತ್ತಿದ್ದೇನೆ.

ಶ್ರೀ ಕುರಡಿಯವರು "ಶ್ರೀಮಂತ ನಾನಾಸಾಹೇಬ ಪೇಶವೆ" ಎಂಬ ಗ್ರಂಥದಲ್ಲಿ ಭರತ ಖಂಡದ ಚರಿತ್ರೆಯ ಒಂದು ಮಹತ್ವವುಳ್ಳ ವಿಷಮ ಸಂಧಿಯನ್ನು ರಮ್ಯವಾಗಿ ವಿವರಿಸಿರುತ್ತಾರೆ. ಇಂಗ್ಲಿಷ್, ಬಂಗಾಳಿ, ಮರಾಠಿ ಭಾಷೆಗಳಲ್ಲಿರುವ ಇತಿಹಾಸ ಗ್ರಂಥಗಳಿಂದ ಸತ್ಯಾಂಶಗಳನ್ನು ಆಯ್ದುಕೊಂಡು, ಬರಿಯ ಒಣಚರಿತ್ರೆ ಮಾತ್ರವೆನ್ನಿಸದೆ, ಕಾದಂಬರಿಯ ರಸ ರಂಜನೆಗಳು ಸ್ಫುರಿಸುವಂತೆ ಕಥೆಯನ್ನು ನೆಯ್ದಿದ್ದಾರೆ. ಇವರ ಕಲಾ ಕೌಶಲ್ಯದಿಂದ ಚರಿತ್ರೆ ರಂಜನಕಥೆಯಂತೆ ಮನಸ್ಸನ್ನು ಸೆಳೆಯುತ್ತದೆ.

ಶ್ರೀ ಕುರಡಿಯವರ ಗ್ರಂಥಗಳಲ್ಲಿ ಮೂರು ಶ್ಲಾಘ್ಯವಾದ ಗುಣಗಳು ಎದ್ದು ಕಾಣಿಸುತ್ತವೆ ಎಂದು ಹೇಳಬಹುದು. ಅವು ಯಾವುವೆಂದರೆ–ಸ್ವಧರ್ಮ ಶ್ರದ್ಧೆ; ಸ್ವದೇಶ ಭಕ್ತಿ; ಸ್ವಭಾಷಾಪ್ರೇಮ. ಭಾರತಭೂಮಿಯನ್ನು ಪವಿತ್ರ ಮಾಡಿದ ಮಹರ್ಷಿಗಳ ಸನಾತನ ಧರ್ಮದ ಸಾರವನ್ನು ಒಂದಲ್ಲ ಒಂದು ಸಂದರ್ಭದಲ್ಲಿ ಅವಕಾಶಮಾಡಿಕೊಂಡು, ತಮ್ಮ ಗ್ರಂಥಗಳಲ್ಲಿ ಇವರು ತುಂಬಿರುತ್ತಾರೆ. ಇವರ ನಾಯಕ ನಾಯಕಿಯರು ಉದಾತ್ತಚರಿತರು–ಸಾವಿತ್ರಿ ಸತ್ಯವಾನ; ದಾಕ್ಷಾಯಣಿ, ಪಾರ್ವತಿ; ಪದ್ಮಿನಿ, ಲಕ್ಷ್ಮೀಬಾಯಿ; ಶ್ರೀರಾಮಕೃಷ್ಣ ಪರಮಹಂಸರು–ಭಾರತಭೂಮಿಯನ್ನು ಪ್ರಕಾಶಗೊಳಿಸಿರುವ ಪೂಜ್ಯರಾದ ದೇವತೆಗಳು, ವೀರ ಸ್ತ್ರೀಪುರುಷರು, ಧರ್ಮಬೋಧಕರು, ಇಂಥ ಮಹಾವ್ಯಕ್ತಿಗಳಿಂದಲೂ, ಅವರು ಸಾಧಿಸಿದ ಮಹಾಕಾರ್ಯಗಳಿಂದಲೂ, ಭರತಖಂಡದ ಇತಿಹಾಸ ಪುರಾಣ ಸನ್ನಿವೇಶಗಳಿಂದಲೂ, ಸ್ವದೇಶಪ್ರೇಮವನ್ನು ಉಕ್ಕಿಸುವದರಲ್ಲಿ ಶ್ರೀ.ಕುರಡಿಯವರು ಚತುರರು. ಈ ಗ್ರಂಥದಲ್ಲಿಯೂ, ಮಿಕ್ಕ ಸ್ಥಳಗಳಲ್ಲಿಯೂ, ಇವರು ತಮ್ಮ ದೇಶೀಯರ ದೋಷ ದುರ್ಬಲತೆಗಳನ್ನು ಮುಚ್ಚದೆ, ಅನ್ಯದೇಶೀಯರ ಕುಂದುಕೊರತೆಗಳನ್ನು

ಮಾತ್ರ ಎತ್ತಿಹಿಡಿಯದೆ, ಒಂದು ಕಡೆ ಎಲ್ಲಾ ಧರ್ಮ, ಮತ್ತೊಂದು ಕಡೆ ಎಲ್ಲಾ ಅಧರ್ಮ ಎಂಬ ಪಕ್ಷಪಾತವನ್ನು ಹೃದಯದಲ್ಲಿ ಬೇರೂರಲಿಸದೆ, ಸರ್ವಸಮತಾದೃಷ್ಟಿಯಿಂದ ವಿಮರ್ಶೆ ಮಾಡಿ, ನಮ್ಮ ಸ್ವಾತಂತ್ರ್ಯಸಂಗ್ರಾಮದಲ್ಲಿ ಸೋಲಾದ್ದಕ್ಕೆ ಕಾರಣಗಳನ್ನು ಸೂಚಿಸಿ, ಮುಂದೆ ಗೆಲವಾಗುವ ನಂಬಿಕೆಗೆ ಆಧಾರವಾದ ಗುಣ ಶಕ್ತಿಗಳನ್ನು ಸ್ಪಷ್ಟಪಡಿಸಿ, ಸರ್ವರ ಮೈತ್ರಿಯಲ್ಲಿ ದೇಶದ ಕಲ್ಯಾಣವನ್ನು ಬಯಸುತ್ತಾರೆ. ಈ ಮನೋಭಾವದಲ್ಲಿ ಇವರ ಸಾತ್ವಿಕ ಸ್ವಭಾವ ಚೆನ್ನಾಗಿ ಕಾಣಬರುತ್ತದೆ.

ಇನ್ನು ಇವರ ಕನ್ನಡದ ಅಕ್ಕರೆ, ಹಿಂದಿನ ಸಾಹಿತ್ಯದಲ್ಲಿ ಹೇಗೆ ಕವಿಗಳು ಭಾಷಾಶುದ್ಧಿಗೆ ಮನಸ್ಸುಕೊಟ್ಟ ಕನ್ನಡ ನಾಡಿನಲ್ಲೆಲ್ಲಾ ಒಂದೇ ಭಾಷೆ, ಒಂದೇ ಕಟ್ಟು ಸಲ್ಲುವಂತೆ ಮಾಡಿದ್ದರೋ, ಹಾಗೆಯೇ ಈಗಿನ ಹೊಸ ಸಾಹಿತ್ಯದಲ್ಲೂ ಕನ್ನಡ ನಾಡಿನಲ್ಲೆಲ್ಲಾ ಒಂದೇ ಭಾಷೆ, ಒಂದೇ ಕಟ್ಟು ನಡೆಯಬೇಕೆಂದು ನಿಶ್ಚಯಿಸಿರುವವರಲ್ಲಿ ಶ್ರೀ. ಕುರಡಿಯವರೂ ಒಬ್ಬರು. ಮೊದಲಿನಿಂದಲೂ ಇವರು ಈ ಸೂತ್ರವನ್ನು ಮೀರದೆ, ಅದನ್ನು ಸಾಧಿಸುವುದಕ್ಕಾಗಿ ಒಂದೇ ಸಮವಾಗಿ ಪ್ರಯತ್ನವನ್ನು ಮಾಡುತ್ತಿದ್ದಾರೆ. ಇವರ ಭಾಷಾಶೈಲಿ ಎಷ್ಟು ಸರಳ, ಎಷ್ಟು ಹಿತ, ಎಲ್ಲಾ ಪ್ರಾಂತಗಳ ಕನ್ನಡಿಗರೂ ಎಷ್ಟು ಸ್ಪಷ್ಟ ಎಂಬುದು ಇವರ ಗ್ರಂಥಗಳನ್ನು ನೋಡಿದವರೆಲ್ಲರೂ ಬಲ್ಲ ಸಂಗತಿ; ಎಲ್ಲಾ ಪ್ರಾಂತಗಳಲ್ಲಿಯೂ ಅವನ್ನು ಪಾಠದ ಪುಸ್ತಕಗಳಾಗಿ ನಿಯಮಿಸುತ್ತಿರುವುದೇ ಇದಕ್ಕೆ ಸಾಕ್ಷಿ.

ಭಾಷಾವಿಷಯದಲ್ಲಿಯೂ, ವಸ್ತುವಿಷಯದಲ್ಲಿಯೂ ಈ ಬಗೆಯ ಉತ್ತಮ ಧ್ಯೇಯಗಳನ್ನುಳ್ಳ ಶ್ರೀ. ಕುರಡಿಯವರಂಥ ಶ್ರೇಷ್ಠಸಾಹಿತಿಗಳ ನಿರಂತರ ಸೇವೆಯಿಂದ "ಸಿರಿಗನ್ನಡಂ ಗೆಲ್ಗೆ" ಎಂದು ಪ್ರಾರ್ಥಿಸಿ ಈ ಮುನ್ನುಡಿಯನ್ನು ಸಲ್ಲಿಸುತ್ತೇನೆ.

ಬೆಂಗಳೂರು **ಬಿ.ಎಂ. ಶ್ರೀಕಂಠಯ್ಯ**
೧೯೩೩

ಬಿ.ಎಂ.ಶ್ರೀಕಂಠಯ್ಯನವರ ಮುನ್ನುಡಿಗೆ ನಾರಾಯಣ ವೆಂಕಟೇಶ ಕಾರ್ ಅವರು ಬರೆದ ನಿವೇದನೆಯಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ.

ಕನ್ನಡದ ಏಕೀಕರಣವೇ ನಮ್ಮ ಗುರಿ. ಅದಕ್ಕಾಗಿ ಈಗ ೧೦-೨೦ ವರ್ಷಗಳಿಂದಲೂ ಪ್ರಯತ್ನಿಸುತ್ತಿದ್ದೇವೆ. ಅದೇ ಗುರಿಯನ್ನಿಟ್ಟು ಕೊಂಡೇ ಈ ಗ್ರಂಥವನ್ನು ಕೂಡ ಬರೆದಿರುವೆನು. ಮೈಸೂರು ಮದ್ರಾಸ ಪ್ರಾಂತಗಳ ಕನ್ನಡಿಗರಿಗೆ ಅರ್ಥವಾಗದ ಮತ್ತು ಶ್ರವಣಕಟುವಾದ ಪದ ಪ್ರಯೋಗಾದಿಗಳನ್ನೂ ಸಾಧ್ಯವಾದಷ್ಟೂ ಬಿಟ್ಟುಬಿಡಲು ಯತ್ನಿಸಿರುವೆನು. ಮೈಸೂರಿನ ಆಧುನಿಕ ಕಾವ್ಯ ಸಹೃದಯ ಧುರೀಣದಲ್ಲಿ ಗಣ್ಯರಾಗಿ ಭಾಷಾದ್ವಯ (ಇಂಗ್ಲಿಷು, ಕನ್ನಡ)

ವಿಶಾರದರೆನಿಸಿಕೊಂಡ ಶ್ರೀಮಾನ್ ಬಿ.ಎಂ.ಶ್ರೀಂಕಠಯ್ಯನವರೂ ಧಾರವಾಡದ ಕನ್ನಡ ಪಂಡಿತ ಶ್ರೀಮಾನ್ ಪೂಜಾರರವರೂ ಹಸ್ತಲಿಖಿತ ಪ್ರತಿಯನ್ನು ಸಾದ್ಯಂತವಾಗಿ ಓದಿನೋಡಿ ತಮ್ಮ ಸಲಹೆಗಳನ್ನು ಕೊಟ್ಟಿರುವರು; ಅಲ್ಲದೆ ಗ್ರಂಥವನ್ನು ಯಾವ ದೃಷ್ಟಿಯಿಂದ ಓದಬೇಕೆಂಬುದನ್ನು ಶ್ರೀಮಾನ್ ಶ್ರೀಕಂಠಯ್ಯನವರು ತಮ್ಮ ಅಮೂಲ್ಯವಾದ ಮುನ್ನುಡಿಯಲ್ಲಿ ಹೇಳಿರುವರು. ಅದರಲ್ಲಿ ಅವರು ಹೇಳಿರುವ ಗುಣಗಳು ಈ ಗ್ರಂಥದಲ್ಲಿವೆಯೆಂದು ನಾನು ಹೇಳಲಾರೆನಾದರೂ ಇದರಿಂದ ಅಖಿಲ ಕರ್ನಾಟಕ ಈ ವಿಧದ ಭಕ್ತಿ-ಶ್ರದ್ಧೆ-ಪ್ರೇಮಗಳನ್ನು ತಳೆದು ಗ್ರಂಥರಚನೆ ಮಾಡಬೇಕೆಂದು ದಾರಿ ತೋರಿಸಿದಂತಾಗಿದೆ. ಇದಕ್ಕೆ ಮೊದಲು ನಾನು ಬರೆದು ಪ್ರಕಟಿಸಿದ ಅನೇಕ ಕೃತಿಗಳಂತೆಯೇ ಇದೂ ಬಹುಜನ ಮಾನ್ಯವಾಗಲಿ, ಕರ್ನಾಟಕ ವಾಣೀದೇವಿಯು ನನಗೆ ಶಕ್ತಿಯನ್ನಿತ್ತು ಇದಕ್ಕೂ ಮಿಗಿಲಾದ ಸೇವೆಯನ್ನು ಸ್ವೀಕರಿಸಲಿ ಎಂದು ಕೋರಿ ಪ್ರಾರ್ಥಿಸುವೆನು.

ನಾನೊಬ್ಬ ಸಾಮಾನ್ಯ ವ್ಯಕ್ತಿ; ನನ್ನ ಗ್ರಂಥವೂ ಅಂಥದೇ. ಏನೂ ಅರಿಯದವನಾಗಿ ಎಲ್ಲವನ್ನೂ ಬಲ್ಲವನಂತೆ ನಟಿಸಲು ಹೊರಟ ನನ್ನನ್ನೂ ನನ್ನ ಕೃತಿಯನ್ನೂ ಉದಾರಬುದ್ಧಿಯಿಂದ ನೋಡಿ, ಅಭಿಮಾನದಿಂದ ಎತ್ತಿ ಆದರದಿಂದ ಬಣ್ಣಿಸಿ, ಕತ್ತಲೆಯ ಮನೆಯನ್ನು ಮಣಿದೀಪದಿಂದ ಬೆಳಗಿಸಿದಂತೆ ತಮ್ಮ ಅಮೂಲ್ಯ ಮುನ್ನುಡಿಯಿಂದ ಬೆಳಕುಬೀರಿ, ಕಥಾಮಂದಿರದ ಪ್ರವೇಶಕ್ಕೆ ದಾರಿ ತೋರಿ, ಕನ್ನಡಿಗರ ಮುಂದಿರಿಸಿದ ಶ್ರೀಮಾನ್ ಶ್ರೀಕಂಠಯ್ಯನವರ ಸೌಜನ್ಯವನ್ನೂ ಭಾಷಾಪ್ರೇಮ ನಿರಭಿಮಾನಗಳನ್ನೂ ಏನೆಂದು ಅಭಿನಂದಿಸಲಿ, ಅವರ ಉಪಕಾರವನ್ನು ಹೇಗೆ ಸ್ಮರಿಸಿ ಕೃತಜ್ಞನಾಗಲಿ, ಎಂಬುದೇ ನನಗೆ ತಿಳಿಯದ ಮಾತಾಗಿದೆ. ಶ್ರೀಮಾನ್ ಪಂಡಿತ ಪೂಜಾರರವರಿಗೂ ನನ್ನ ಅನೇಕಾನೇಕ ವಂದನೆಗಳು.

**ಶ್ರೀ ಸರಸ್ವತೀ ಮಂದಿರಮ್,**
**ಧಾರವಾಡ, ಮಹಾಶಿವರಾತ್ರಿ, ೧೯೫೫**
**ದೇಶಭಾಷಾಸೇವಕರ ಕಿಂಕರ,**
**-ನಾರಾಯಣ**

ನಾರಾಯಣ ವೆಂಕಟೇಶ ಕುರಡಿಯವರ 'ಶ್ರೀಮಂತ ನಾನಾ ಸಾಹೇಬ ಪೇಶವೆ' ಗ್ರಂಥವು ೧೯೩೬ ಇಸವಿಯ ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಟರ್ ಮಿಡಿಯಟ್ ತರಗತಿಗಳಿಗೆ ಇದನ್ನು ಪಠ್ಯಗ್ರಂಥವಾಗಿ ಇಡಲಾಗಿತ್ತು. ಇದರಿಂದಾಗಿ ಹತ್ತುಸಾವಿರ ಪ್ರತಿಗಳು ಮುದ್ರಣಗೊಂಡವು. ಇದಕ್ಕೆ ಬಿ.ಎಂ.ಶ್ರೀಕಂಠಯ್ಯನವರ ಪ್ರೋತ್ಸಾಹವೇ ಕಾರಣ. 'ಇದು ನಾನಾಸಾಹೇಬ ಪೇಶವೆಯ ಜೀವನ ಚರಿತ್ರೆಯೆಂದು ಭಾಸವಾಗುವಂತಿದ್ದರೂ ಭರತಖಂಡದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಎಲ್ಲ

ಐತಿಹಾಸಿಕ ಘಟನೆಗಳು ಇದರಲ್ಲಿ ಸಮಾವೇಶವಾಗಿರುವದರಿಂದಲೂ, ನಮ್ಮವರ ಅಭಿಮಾನಕ್ಕೆ ಕಾರಣವಾದ ಹಲವು ಐತಿಹಾಸಿಕ ಸಂಗತಿಗಳು ಬಯಲಿಗೆ ಬಂದು, ನಾನಾ ಸಾಹೇಬನ ಸಂಬಂಧದಿಂದಲೂ ಆ ಕಾಲದ ಮಿಕ್ಕ ಐತಿಹಾಸಿಕ ವಿಷಯದಲ್ಲಿಯೂ ನಮ್ಮವರಲ್ಲಿ ಉಂಟಾಗಬಹುದಾದ ತಪ್ಪು ತಿಳಿವಳಿಕೆಗಳು ಬಯಲಾಗುವುದರಿಂದಲೂ ಇತಿಹಾಸ ಪ್ರಿಯರೂ ದೇಶಾಭಿಮಾನಿಗಳೂ ಇದನ್ನ ಅವಶ್ಯವಾಗಿ ಓದಬೇಕೆಂದು ಬಿಎಂಶ್ರೀಂಯುವರಂಥ ವಿದ್ವಾಂಸರು ಅಭಿಪ್ರಾಯಪಟ್ಟಿರುವುದನ್ನು ಎರಡನೆಯ ಮುದ್ರಣಕ್ಕೆ ಬರೆದ ನಿವೇದನೆಯಲ್ಲಿ ಕುರಡಿ ಅವರು ಹೇಳಿದ್ದಾರೆ. ಭಾರತ ಸ್ವಾತಂತ್ರ್ಯ ಹೋರಾಟ, ರಾಷ್ಟ್ರೀಯತೆ, ದೇಶಾಭಿಮಾನ ವಿಚಾರವನ್ನು ವಿದ್ಯಾರ್ಥಿಗಳಲ್ಲಿ ಬಿತ್ತಲು ಬಿ.ಎಂ.ಶ್ರೀಕಂಠಯ್ಯನವರು ಆಶಿಸಿದ್ದರು. ೧೮೫೭ರ ಸಿಪಾಯಿದಂಗೆ ಅದರ ಪರಿಣಾಮಗಳು ಸ್ವಾತಂತ್ರ್ಯ ಹೋರಾಟದಲ್ಲಿ ಭಾರತೀಯ ಪ್ರಜೆಗಳಿಗೆ ಆದ ಸೋಲು. ಅದರ ಪರಾಮರ್ಶೆ ಜೊತೆಗೆ ಈ ಸೋಲಿನಿಂದ ಪಾಠ ಕಲಿತು ಮುಂದಿನ ಹೋರಾಟದಲ್ಲಿ ಹೇಗೆ ಹೆಜ್ಜೆ ಇಡಬೇಕೆಂದು ಚಿಂತಿಸಿದ್ದನ್ನು ಈ ಗ್ರಂಥ ಹೇಳುತ್ತದೆ. ನಾರಾಯಣ ವೆಂಕಟೇಶ ಕುರುಡಿಯವರು ಶ್ರೀಹರ್ಷನ ನಾಗಾನಂದ, ಪ್ರಿಯದರ್ಶಿಕೆ, ರತ್ನಾವಳಿ ನಾಟಕಗಳ ಅನುವಾದವನ್ನು ಮಾಡಿದವರು. ಶ್ರೀರಾಮಕೃಷ್ಣ ಪರಮಹಂಸರ ನೀತಿಕಥೆಗಳು ಭಾಗ೧, ಭಾಗ೨, ಭಾಗ೩, ಭಾಗ೪, ಸತ್ಕಥಾ ಕುಸುಮಮಂಜರಿ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದಾರೆ. ಆಕಾಲದಲ್ಲಿ ಬಂಗಾಲಿ ಸಾಹಿತ್ಯ, ಸಂಸ್ಕೃತ ಸಾಹಿತ್ಯ ರಾಷ್ಟ್ರೀಯತೆಯ ಪ್ರಚೋದನೆಗೆ ಕಾರಣವಾಗಿದ್ದವು. ರವೀಂದ್ರರು, ಪರಮಹಂಸರ ಬಗ್ಗೆ ರಾಷ್ಟ್ರೀಯ ಚರ್ಚೆ ನಡೆಯುತ್ತಲಿದ್ದ ದಿನಗಳವು ನಾರಾಯಣ ವೆಂಕಟೇಶ ಕುರುಡಿಯವರು ತಮ್ಮ ಪುಸ್ತಕಗಳ ಹೊದಿಕೆಯಲ್ಲೂ ಕರ್ನಾಟಕ ಹಿತೈಷಿಣಿ ಗ್ರಂಥಮಾಲೆಯ ಬಗೆಗೆ ಹೀಗೆ ದಾಖಲಿಸಿದ್ದಾರೆ.

**ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ**

೧. ಕನ್ನಡದ ಏಕೀಕರಣವೇ ನಮ್ಮ ಗುರಿ'. ಇದು ನಮ್ಮ ಲೇಖನ ವ್ಯವಸಾಯದ ಮುಖ್ಯ ಧ್ಯೇಯ. 'ಪರಭಾಷೆಯ ಪದಗಳನ್ನು ಸಾಧ್ಯವಾದಷ್ಟು ಬಿಟ್ಟು ಬಿಡು; ವ್ಯಾಕರಣ ವಿರುದ್ಧ ಪದಪ್ರಯೋಗಾದಿಗಳನ್ನು ದೂರಿರಿಸು; ಪುಸ್ತಕದ ಸಂಸ್ಕೃತ ಪದಗಳನ್ನು ಕಡಿಮೆ ಮಾಡಿ ಸರಳವಾದ ಕನ್ನಡ ನುಡಿಯಲ್ಲಿ ಬರೆ. ಹಾಗಾದರೆ ನಮ್ಮ ಏಕೀಕರಣ. ಗುರಿಯು ಸಹಜವಾಗಿ ಸಾಧಿಸುವುದು" ಇದು ಮೈಸೂರಿನ ವಿದ್ವಾಂಸರೊಬ್ಬರು ನಮಗೆ ಬಹು ದಿನಗಳ ಹಿಂದೆಯೇ ಹೇಳಿದ ಕಿವಿಮಾತು; ಈ ಸೂತ್ರಗಳನ್ನು ಸದಾ ಲಕ್ಷ್ಯದಲ್ಲಿಟ್ಟಿರುವುದರಿಂದಲೇ ನಮ್ಮ ಬರೆಹವು ಅಖಿಲಕರ್ನಾಟಕದಲ್ಲಿಯೂ ಮಾನ್ಯತೆ ಪಡೆಯುತ್ತ ಬಂದಿದೆಯೆಂದು ನಮ್ಮ ಭಾವನೆ.

೨. ಹಳೆಯ ಮಾತನ್ನು ಹೊಸದೃಷ್ಟಿಯಿಂದ ನೋಡುವುದು ನಮ್ಮ ಕಥೆ ಕಾದಂಬರಿಗಳ ರಚನೆಯ ಇನ್ನೊಂದು ಗುಟ್ಟು. ಪೌರಾಣಿಕ ಕಥೆಯೇ ಇರಲಿ, ಐತಿಹಾಸಿಕ ಘಟನೆಯೇ ಆಗಲಿ, ಅದರಲ್ಲಿರುವ ನಮ್ಮ ಇಂದಿನ ಜೀವನದ ತಿರುಳನ್ನು ಕಂಡು, ಅದನ್ನೇ ಭೂಮಿಕೆಯಾಗಿಟ್ಟುಕೊಂಡು, ನಮ್ಮ ಬಾಳಿನ ಬೆಳಕು ನೆರಳುಗಳನ್ನು ಚಿತ್ತರಿಸುವಂತೆ ಅದನ್ನು ಪ್ರತಿರೂಪಿಸುವುದು ನಮ್ಮ ಮಾಲೆಯೊಳಗಿನ ಗ್ರಂಥಗಳ ಇನ್ನೊಂದು ರಹಸ್ಯ.

೩. ಅಚ್ಚಿನ ತಪ್ಪುಗಳು ಹೆಚ್ಚಾಗಿರದ ಮೆಚ್ಚಿಗೆಯ ಅಚ್ಚು, ಒಳ್ಳೆಯ ಕಾಗದ, ಸಂದರ್ಭಾನುಗುಣವಾದ ಚಿತ್ರಗಳು ಇವುಗಳಿಂದ ಬಾಹ್ಯಂಗವು ಅಂದವಾಗಿರುವುದು ನಮ್ಮ ಎಲ್ಲ ಗ್ರಂಥಗಳ ಮೂರನೆಯ ವೈಶಿಷ್ಟ್ಯ.

ಆದುದರಿಂದಲೇ ನಮ್ಮ ಒಂದೊಂದು ಪುಸ್ತಕದ ಹತ್ತು ಹತ್ತು ಸಾವಿರ ಪ್ರತಿಗಳು ಕನ್ನಡ ನಾಡಿನ ಮೂಲೆ ಮೂಲೆಯನ್ನು ಸೇರಿದವು. ಅಖಿಲ ಕರ್ನಾಟಕಾಂತರ್ಯಾಮಿಯಾದ ಭಗವಂತನು ಹಿಂದಿನಂತೆಯೇ ನಮ್ಮ ತಾಯ್ನುಡಿಯ ಅಲ್ಪಸೇವೆಯನ್ನು ಮುಂದೆ ಸಾಗಿಸಲಿ! ಕರುಣಿಸಲಿ!

**ಶ್ರೀಸರಸ್ವತೀ, ಮಂದಿರಮ್ ನಾ.ವೆಂ.ಕುರಡಿ**
**ಧಾರವಾಡ**

ನಾರಾಯಣ ವೆಂಕಟೇಶ ಕುರಡಿಯವರ 'ಮಹಾರಾಣಿ ಲಕ್ಷ್ಮೀಬಾಯಿ', ಸಾವಿತ್ರಿ ಸತ್ಯವಾನ್ ಕೃತಿಗಳು ಮುಂಬಯಿ ಹಾಗೂ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪಠ್ಯವಾಗಿದ್ದವು. ಕವಿತಾ ಕುಸುಮ ಮಂಜರಿಯ ಎರಡೂ ಭಾಗಗಳು ಮುಂಬಯಿ ವಿಶ್ವವಿದ್ಯಾಲಯದ ಎಂಎ ತರಗತಿಯ ಪಠ್ಯವಾಗಿದ್ದವು. ಶ್ರೀಮಂತ ನಾನಾ ಸಾಹೇಬ ಪೇಶವೆ ಮೈಸೂರು ವಿಶ್ವವಿದ್ಯಾಲಯದ ಇಂಟರ್‌ಗೆ ಪಠ್ಯಗ್ರಂಥವಾಗಿತ್ತು. ಇದಕ್ಕೆ ಬಿ.ಎಂ.ಶ್ರೀಕಂಠಯ್ಯ ಅವರ ಮುನ್ನುಡಿ ಮತ್ತು ಉತ್ತೇಜನವೇ ಕಾರಣ. ಬಿ.ಎಂ.ಶ್ರೀಂಕಠಯ್ಯ 'ಭರತಮಾತೆಯೇ ಭರತಮಾತೆಯೇ ಎಂದು ನೀ ತಲೆ ಎತ್ತುವೆ' ಎಂಬ ಉದ್ಬೋಧಕ ಕವಿತೆ ಬರೆದರು. ಅವರು ತಮ್ಮ ಪ್ರತಿಭೆ ಪಾಂಡಿತ್ಯವನ್ನು ಕನ್ನಡದ ಅಭಿಮಾನದ ಜಾಗೃತಿಗಾಗಿ, ಏಕೀಕರಣ ಚಳವಳಿಗಾಗಿ ಸವೆಸಿದರು. ಅವರು ಮೈಸೂರು ರಾಜಪ್ರಭುತ್ವದಲ್ಲಿದ್ದ ಚಾರಿತ್ರಿಕ ಸನ್ನಿವೇಶಗಳನ್ನು ನಾವು ಅರ್ಥಮಾಡಿಕೊಳ್ಳಬೇಕು. ಶ್ರೀಕಂಠಯ್ಯನವರು ರಾಷ್ಟ್ರೀಯತೆ ಉಪರಾಷ್ಟ್ರೀಯತೆಯ ಜನಶಿಕ್ಷಣ ನೀಡಲು ಹೊರಟಿದ್ದರಿಂದ ಅವರ ಸ್ವಂತ ಸಾಹಿತ್ಯ ಸೃಷ್ಟಿಗೆ ದೊಡ್ಡ ಹೊಡೆತ ಬಿತ್ತು. ಎಂಬುದು ವಾಸ್ತವ ವಿಚಾರ. ಬಿ.ಎಂ.ಶ್ರೀಕಂಠಯ್ಯನವರು ಮೈಸೂರಿನಿಂದ ತುಂಗಭದ್ರಾ ನದಿ ದಾಟಿ ಉತ್ತರಕ್ಕೆ ಬಂದು ಕನ್ನಡ ಕಟ್ಟುವ ಮನಸ್ಸು ರೂಪಿಸಿದರು. ದಕ್ಷಿಣದಲ್ಲಿ ಹುಟ್ಟಿ ಉತ್ತರ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಧಾರವಾಡದಲ್ಲಿ ಮುಪ್ಪಿನ ಸಂಕಟದಲ್ಲಿ ರಕ್ತದೊತ್ತಡ, ಸಿಹಿ ಮೂತ್ರ ರೋಗಗಳು, ಕೌಟುಂಬಿಕ

ದುರಂತಗಳನ್ನು ಇಟ್ಟುಕೊಂಡು ಕುರ್ತುಕೋಟಿ ಮೊಕಾಶಿಯವರಂಥ ಶಿಷ್ಯರನ್ನು ಪ್ರೇರಿಸಿ ಕನ್ನಡಕ್ಕೆ ಕೊಟ್ಟು ದಿವಂಗತರಾದರು. ಶ್ರೀಕಂಠಯ್ಯನವರು ನಾರಾಯಣ ವೆಂಕಟೇಶ ಕುರಡಿಯವರಂಥ ಬರಹಗಾರರನ್ನು ಪ್ರೋತ್ಸಾಹಿಸಿದ್ದು, ಭಾರತ ಸ್ವಾತಂತ್ರ್ಯ ಹೋರಾಟ ಕರ್ನಾಟಕ ಏಕೀಕರಣಕ್ಕೆ ಅನೇಕ ಕವಿಕೋಗಿಲೆಗಳು ಹಾಡುವಂತೆ ಮಾಡಿದ್ದು ನಾಡಿನ ಸಾಹಿತ್ಯ ಚರಿತ್ರೆಯಲ್ಲಿ ಹೇಳಬೇಕಾದ ಮಹತ್ವದ ವಿಚಾರವಾಗಿದೆ. ನವೋದಯ ಸಾಹಿತ್ಯದ ನಂತರ ಬಂದ ನವ್ಯ ಸಾಹಿತ್ಯ ಸಂದರ್ಭದಲ್ಲಿ ನಡೆದು ಬಂದ ದಾರಿಯತ್ತ ಹಿಂದಿರುಗಿ ನೋಡಬೇಡ ಎಂಬ ಪಿತೃಹತ್ಯಾ ಮನೋಭಾವ ನವ್ಯವಿಮರ್ಶಕರಲ್ಲಿ ಬಂದದ್ದನ್ನು ಹೊಸಸಾಹಿತ್ಯದ ಇತಿಹಾಸದಲ್ಲಿ ನಾವು ನೋಡುತ್ತೇವೆ. ಟಿ.ಎಸ್. ಇಲಿಯಟ್ ಕೂಡ ಕವಿಯಾದವನಿಗೆ ಚಾರಿತ್ರಿಕ ಪ್ರಜ್ಞೆ(Historical sense) ಇರಬೇಕು ಎಂದು ಹೇಳಿರುವುದನ್ನು ಇಲ್ಲಿ ಗಮನಿಸಬೇಕು. ಬಿ.ಎಂ.ಶ್ರೀಕಂಠಯ್ಯನವರು ಭಾರತದ ರಾಷ್ಟ್ರೀಯ ಚಳುವಳಿಗೆ ಗುಪ್ತಗಾಮಿಯಾಗಿ, ಏನೇನು ಮಾಡಿದರು ಎಂಬುದನ್ನು ಸಂಶೋಧಿಸುವ, ಪುನರ್ವ್ಯಾಖ್ಯಾನಿಸುವ ಅಗತ್ಯವಿದೆ. ಅವರ ಮುನ್ನುಡಿ, ಭಾಷಣ, ಇತರ ದಾಖಲೆಗಳನ್ನು ಮರು ಪರಿಶೀಲನೆ ನಡೆಸಿ ಆಲೋಚಿಸುವ ಅಗತ್ಯ ಬಹುವಾಗಿದೆ. ನಾರಾಯಣ ವೆಂಕಟೇಶ ಕುರಡಿ ಅವರು ಬರೆದ ಎಲ್ಲ ಕೃತಿಗಳು ಈಗ ಅನುಪಲಬ್ಧವಾಗಿವೆ. ಕರ್ನಾಟಕ ಹಿತೈಷಿಣಿ ಗ್ರಂಥಮಾಲೆಯ ವಿವರ ನಾರಾಯಣ ಶಾನಭಾಗರು ಸಂಪಾದಿಸಿದ ಉತ್ತರ ಕನ್ನಡ ಜಿಲ್ಲಾ ಗ್ರಂಥಕಾರರ ಕೃತಿಕೋಶ(೨೦೧೬)ದಲ್ಲಿ ದಾಖಲಾಗಿದೆ. ಅದಕ್ಕಾಗಿ ಅವರಿಗೆ ಕೃತಜ್ಞತೆಗಳು. ನಾರಾಯಣ ವೆಂಕಟೇಶ ಕುರಡಿಯವರು ನಾಲ್ಕನೆಯ ಮುದ್ರಣಕ್ಕೆ ಬರೆದ ನಿವೇದನೆಯಲ್ಲಿ ಸ್ವಾತಂತ್ರ್ಯ ಸಮರದಲ್ಲಿ ಯಶದೊರೆಯದಿದ್ದಕ್ಕೆ ಕಾರಣಗಳನ್ನು ಹೀಗೆ ಪಟ್ಟಿಮಾಡಿ ವಿಶ್ಲೇಷಿಸಿದ್ದಾರೆ.

**ನಾಲ್ಕನೆಯ ಮುದ್ರಣಕ್ಕೆ ನಿವೇದನೆ**

ನಮ್ಮ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ನಾನು ಬರೆದು ಪ್ರಕಟಿಸಿದ 'ಮಹಾರಾಣಿ ಲಕ್ಷ್ಮೀಬಾಯಿ' ಅಷ್ಟೇ ಏಕೆ ಅದಕ್ಕಿಂತ ತುಸು ಹೆಚ್ಚಾಗಿಯೇ 'ನಾನಾ ಸಾಹೇಬ ಪೇಶವೆ' ಜನಪ್ರಿಯವಾಗಿತ್ತು. ಆಗಣ ಮೈಸೂರು ವಿದ್ಯಾಇಲಾಖೆಯವರು ಇದನ್ನು S.S.L.C ಪರೀಕ್ಷೆಗೂ, ವಿಶ್ವವಿದ್ಯಾನಿಲಯದವರು ಇಂಟರಮೀಡಿಯಟ್ ಪರೀಕ್ಷೆಗೂ ಪಠ್ಯ ಪುಸ್ತಕವಾಗಿ ಆರಿಸಿದ್ದರು.

ಹೀಗಾಗಿ ಹಿಂದಿನ ಮುದ್ರಣದ ಪ್ರತಿಗಳೆಲ್ಲ ಮುಗಿದು ಈ ನಾಲ್ಕನೆಯ ಮುದ್ರಣವನ್ನು ಆರಂಭಿಸಿ ಬಹುದಿನಗಳಾದರೂ ಪುಸ್ತಕಗಳು ಹೊರಗೆ ಬರಲೇ ಇಲ್ಲ ಎಲ್ಲ ಪುಟಗಳು. ಹೊದಿಕೆ, ಚಿತ್ರಗಳು ಮುದ್ರಿತವಾಗಿ ಮುಂದಿನ ಕೆಲಸ ಕೈಕೊಂಡಾಗ ಮುದ್ರಿತವಾದ ಹಲವು ಪುಟಗಳು ಇಟ್ಟಲ್ಲೇ ಅದೃಶ್ಯವಾಗಿದ್ದವು ಇದೇನು ದೈವ ಸಂಕಲ್ಪವೋ ಇನ್ನೇನೋ ತಿಳಿಯಲಿಲ್ಲ.

ಮೊನ್ನೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಮೂರು ನಾಲ್ಕು ಸಾವಿರ ರೂಪಾಯಿ ಬೆಲೆಬಾಳುವ ನಮ್ಮ ಪ್ರಕಟನೆಗಳ ಸಂಗ್ರಹವನ್ನು ಕಾಣಿಕೆಯಾಗಿ ಅರ್ಪಿಸಿದಾಗ ಉಳಿದಿರುವ ಈ ಪುಟಗಳನ್ನು ಹಿಂದೆ ಉಳಿದಿದ್ದ ಕಾಗದಗಳಿಂದಲೇ ಪುನಃ ಮುದ್ರಿಸಿ ಪ್ರಕಟಿಸಲು ಮುಂದೆ ಬಂದೆವು.

ನನ್ನನ್ನು ಈ ಎಂಬತ್ತು ವರುಷಗಳಿಗಿಂತ ಹೆಚ್ಚು ಕಾಲ ಚೆನ್ನಾಗಿ ಬಾಳಿಸಿ ಬದುಕಿಸಿದ ಆ ಪರಮಾತ್ಮನಕರುಣೆಯ ಕುರುಹೆಂದು ಈ ಪುಸ್ತಕದ ಕೆಲವು ಪ್ರತಿಗಳನ್ನು ಉಚಿತವಾಗಿ ಹಂಚಬೇಕೆಂದು ನನ್ನ ಮಕ್ಕಳು ಬಯಸುತ್ತಿದ್ದಾರೆ. ಹಿಂದೆ ನನಗೆ ೬೦ವರುಷಗಳು ತುಂಬಿದಾಗ ನನ್ನ ಕವಿತಾ ಕುಸುಮ ಮಂಜರಿಯ ಹಲವು ಪ್ರತಿಗಳನ್ನು ಹಾಗೇ ಹಂಚಿದ್ದರು.

ನಮ್ಮ ಸ್ವಾತಂತ್ರ್ಯಸಮರವೆಂದು ಹೆಸರಾದ ಆ ಘನಘೋರ ಸಂಗ್ರಾಮದಲ್ಲಿ ನಮ್ಮವರಿಗೆ ಯಶದೊರೆಯಲಿಲ್ಲ. ಅದಕ್ಕೆ ಕಾರಣಗಳು ಹಲವು:

೧. ಆಗ ಮುಂದಾಳುಗಳೆಂದು ಹೇಳಬಹುದಾದ ಎಲ್ಲರೂ ಪರಸ್ಪರ ಹೊಂದಾಣಿಕೆಯಿಂದ ಕೆಲಸ ಮಾಡಲಿಲ್ಲ. ಯುದ್ಧದಲ್ಲಿ ತೊಡಗಿದ ಸೈನಿಕರಲ್ಲಿ ಶೌರ್ಯ ಸಾಹಸಗಳಿದ್ದರೂ ಪಟ್ಟು ಹಿಡಿದು ಜಿಗಟುತನದಿಂದ ಕೊನೆ ತನಕ ಹೋರಾಡಲಿಲ್ಲ.

೨. ಅತ್ತ ನಮ್ಮ ಸೈನಿಕರು ಹೋರಾಡುತ್ತಿರುವಾಗ ಸಾಮಾನ್ಯ ಜನತೆ ಔದಾಸೀನ್ಯದಿಂದಿದ್ದು ಬ್ರಿಟಿಷರಿಗೆ ಅನುಕೂಲವಾಗಿದ್ದಿತು.

೩. ಜಾತೀಯತೆ ಅಧಿಕಾರಲಾಲಸೆ ಸ್ವಾರ್ಥಗಳು ನಮ್ಮವರ ಅಪಯಶಸ್ಸಿಗೆ ಪ್ರಬಲ ಕಾರಣಗಳಾದುವು.

೪. ಬ್ರಿಟಿಷರು ನಮ್ಮವರನ್ನೇ ನಮ್ಮ ವಿರುದ್ಧ ಪ್ರೇರೇಪಿಸಿದರು. ನಮ್ಮವರು ಕವಡೆಯ ಸ್ವಾರ್ಥಕ್ಕಾಗಿ ಕೊಡಲಿಯ ಕಾವಿನಂತೆ ಕೆಲಸ ಮಾಡಿದರು.

ಹಿಂದಿನ ಸ್ವಾತಂತ್ರ್ಯದ ಹೋರಾಟದಲ್ಲಿ ಘಟಿಸಿದ ತಪ್ಪುಗಳೇ ಇಂದಿನ ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಕೂಡ ನಮ್ಮಲ್ಲಿ ಕಂಡುಬರುತ್ತಿವೆ; ಇತಿಹಾಸದ ಪುನರಾವೃತ್ತಿಯಾಗುತ್ತಿದೆ; ನಮ್ಮವರು ಇತಿಹಾಸವನ್ನು ಓದಿ ಅದರಿಂದ ಕಲಿಯಬೇಕಾದ ಪಾಠಗಳನ್ನು ಕಲಿತಿಲ್ಲ, ಎಂದು ನಮ್ಮೊಳಗಿನ ವಿವೇಕಿಗಳು ಹೇಳುತ್ತಿದ್ದಾರೆ. ವಿಷಾದ!

ನಾವಿಂದು ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ಯಾವಾಗ ಎಲ್ಲಿ ಎರಗಬೇಕೋ ಎಂದು ಹೊಂಚು ಹಾಕುತ್ತಿವೆ. ಪಾಕಿಸ್ತಾನವು ನಮ್ಮ ಪಕ್ಕ–ಶೂಲೆಗೆ ಕಾರಣವಾಗಿ ಎಡಬಲಗಳಲ್ಲಿ ಚುಂಚು ಪ್ರವೇಶ ಮಾಡುತ್ತಿದೆ. ಇಂಥ ಕಠಿಣ

ಪ್ರಸಂಗವಿದ್ದರೂ ನಮ್ಮಲ್ಲಿ ಹೊಂದಾಣಿಕೆಯಿದೆಯೇ? ಬಾಯಲ್ಲಿ ಭಾವೈಕ್ಯತೆ; ಕೈಯಲ್ಲಿ? ಭಾಷೆಯ ಗೊಂದಲ ಪ್ರಾಂತೀಯತೆ, ಪ್ರಾಂತ ಪ್ರಾಂತಗಳ ನಡುವಿನ ಗಡಿ ಹೋರಾಟ ಇವೆಲ್ಲ ಯಾತರ ಕುರುಹುಗಳು? ಜಾತ್ಯತೀತ ರಾಷ್ಟ್ರದವರೆಂದು ಹೇಳಿಕೊಳ್ಳುವ ನಮ್ಮ ಜಾತ್ಯತೀಯತೆಯನ್ನು ಚುನಾವಣೆಗಳಲ್ಲಿಯೇ ನೋಡಬೇಕು! ಆಡಳಿತದಲ್ಲಿಯ ಪಕ್ಷ ಪಂಗಡಗಳು ಯಾತರ ನಿದರ್ಶನ? ಕಮ್ಯುನಿಷ್ಟರಿಗೆ ಚೀನದಿಂದ ಹಣದ ಹೊಳೆ ಹರಿದು ಬರುತ್ತಿದೆಯೆಂದು ಹೇಳುತ್ತಾರಲ್ಲ! ಇದೇನು ರಾಜಕೀಯಕ್ಕಿಳಿದಿರಲ್ಲ, ಎನ್ನಬೇಡಿ, ಈ ಪುಸ್ತಕವನ್ನು ಸರಿಯಾದ ಬೆಳಕಿನಲ್ಲಿ ಓದಿ; ಆಸ್ಥೆಯಿಂದ ಓದಿ; ತರುಣ ಪೀಳಿಗೆಗೆ ಇದೇ ನಮ್ಮ ಭಿನ್ನಹ.

"ಪರಿಹರಿಸೊ ಭವಬಂಧವನು ಕೊಂಡೀಸುಮಾಂಜಲಿಯ" ಎಂದು ಆ ಸರ್ವಾಂತರ್ಯಾಮಿಯಾದ ಭಗವಂತನನ್ನು ಪ್ರಾರ್ಥಿಸಿ ವಿರಮಿಸೋಣ.

ಯುಗಾದಿ ೧೯೬೧
ಕುರಡಿ ನಾರಾಯಣ

ಹೊಸಗನ್ನಡ ಗದ್ಯಕಣ್ಣು ತೆರೆಯುತ್ತಿದ್ದ ಸಂಧರ್ಭದಲ್ಲಿ 'ಕರ್ನಾಟಕ ಹಿತೈಷಿಣಿ ಗ್ರಂಥಮಾಲೆ' ಕನ್ನಡ ಭಾಷೆಯ ಬಳಕೆಯನ್ನು ಹೇಗೆ ಜಾರಿಗೆ ತಂದಿತೆಂಬುದು ಗಮನಿಸುವ ಅಂಶವಾಗಿದೆ. ನಾರಾಯಣ ವೆಂಕಟೇಶ ಕುರಡಿಯವರ ಗ್ರಂಥಗಳನ್ನೋದುವಾಗ ನವೋದಯ ಗದ್ಯಭಾಷೆಯ ಆರಂಭದ ಕಾಲದ ಸ್ಥಿತಿಸ್ವರೂಪಗಳು ಅರಿವಿಗೆ ಬರುತ್ತವೆ. ಇತಿಹಾಸದ ಘಟನೆಗಳು ಗ್ರಂಥರೂಪ ತಾಳಿ ಯುವಜನರ ಮನಸ್ಸನ್ನು ರಾಷ್ಟ್ರೀಯತೆಗೆ ಉಪರಾಷ್ಟ್ರೀಯತೆಗೆ ಸಜ್ಜುಗೊಳಿಸಿದ ಬಗೆ ಆಲೋಚನೀಯವಾದದ್ದು. ನಾರಾಯಣ ವೆಂಕಟೇಶ ಕುರಡಿಯವರು ಮತ್ತು 'ಕರ್ನಾಟಕ ಹಿತೈಷಿಣಿ ಗ್ರಂಥಮಾಲೆ'ಯ ಬಗೆಗೆ ಪ್ರತ್ಯೇಕ ಗ್ರಂಥ ಚರ್ಚೆ ಆಗಬೇಕಾಗಿದೆ.

ಬಿ.ಎಂ.ಶ್ರೀಕಂಠಯ್ಯನವರು ವ್ಯಕ್ತಿಗಳ, ಸಾಹಿತಿಗಳ, ಕನ್ನಡ ಜನತೆಯ ಪ್ರತಿಮಾಶಿಲ್ಪಿಯಾದರು. ಅಜ್ಞಾತವಾದ ನವೋದಯ ಕಾಲದ ಲೇಖಕರ ಸಾಧನೆಯ ಬಗೆಗೆ ಮರುಚಿಂತನೆ ನಡೆಸುವುದು ವರ್ತಮಾನದ ಪ್ರಸ್ತುತತೆಯಾಗಿದೆ.



# ಪ್ರಧಾನ ವೆಂಕಪ್ಪಯ್ಯನವರ ಜೀವನ ವೃತ್ತಾಂತ



**ಡಾ. ಲ.ನ. ಸ್ವಾಮಿ**

ಅಕ್ಕಿರಾಮಪುರವು ತುಮಕೂರು ಜಿಲ್ಲೆಯ ಪ್ರಮುಖ ನದಿ ಜಯಮಂಗಲಿಯ ದಕ್ಷಿಣ ತೀರದಲ್ಲಿದೆ. ಅಕ್ಕಿರಾಮಪುರ ತಾಲ್ಲೂಕು ಕೇಂದ್ರ ಕೊರಟಗೆರೆಯಿಂದ ೯ ಕಿ.ಮೀ. ದೂರದಲ್ಲಿದೆ. ಪ್ರಧಾನರ ಮೂಲ ಪುರುಷರು ಇದೇ ಗ್ರಾಮದವರು. ಇಲ್ಲಿನ ಸ್ಮಾರಕಗಳು ಈ ಗ್ರಾಮದ ಪ್ರಾಚೀನತೆಯನ್ನು ಸಾರುತ್ತವೆ. ಇಲ್ಲಿ ದ್ರಾವಿಡ ಶೈಲಿಯ ವೆಂಕಟರಮಣನ ಆಲಯ, ಜೈನ ಬಸದಿ, ಆಂಜನೇಯನ ದೇವಾಲಯವಿದ್ದಂತೆ ತಿಳಿದುಬರುತ್ತದೆ. ಪ್ರಾಚೀನ ನಿವೇಶನದಿಂದ ಪ್ರಸ್ತುತ ಗ್ರಾಮ ಸ್ಥಳಾಂತರಗೊಂಡು ಪ್ರಧಾನ ವೆಂಕಪ್ಪಯ್ಯನವರ ಅವಧಿಯಲ್ಲಿ ನೂತನವಾಗಿ ನಿರ್ಮಾಣಗೊಂಡಿತೆಂದು ತಿಳಿದುಬರುತ್ತದೆ.

ಪ್ರಧಾನ ವೆಂಕಪ್ಪಯ್ಯನವರ ಪೂರ್ವಜರು ಪ್ರಾರಂಭದಲ್ಲಿ ಗೋದಾವರಿ ತೀರದಿಂದ ವಲಸೆ ಬಂದವರೆಂದು ತಿಳಿದುಬರುತ್ತದೆ. ದಕ್ಷಿಣ ಭಾರತದ ಆರ್ಯಕರಣದ ಹಿನ್ನೆಲೆಯಲ್ಲಿ ಬರುವ ಅಗಸ್ತ್ಯ ಮುನಿಯ ಪುರಾಣ ಕಥೆ ಇದಕ್ಕೆ ಪುಷ್ಟಿ ನೀಡುತ್ತದೆ. ಅಗಸ್ತ್ಯರು ನೇರವಾಗಿ ವಿಂಧ್ಯ ಪರ್ವತ ದಾಟಿ ಬಂದರೆಂದು ಪುರಾಣಗಳು ತಿಳಿಸುತ್ತವೆ. ಆದರೆ ಪ್ರಾಚೀನ ಯತಿಗಳು ಕಾಶೀಯಾತ್ರೆಗೆ ಪೂರ್ವದ ವ್ಯಾಪಾರ ಪಥವನ್ನು ಅನುಸರಿಸುತ್ತಿದ್ದರು. ಅದಕ್ಕೆ ಹಲವಾರು ಶಾಸನಗಳಲ್ಲಿ ದಾಖಲೆಗಳಿವೆ.

ಪ್ರಧಾನ ವೆಂಕಪ್ಪಯ್ಯನವರ ಮೂಲ ಪುರುಷರು ಗೋದಾವರೀ ತೀರದ ಪಂಪಾನದಿ ಕ್ಷೇತ್ರದಿಂದ ಹಂಪಾಕ್ಷೇತ್ರಕ್ಕೆ, ಅನಂತರ ತುಮಕೂರಿಗೆ ಅಂದರೆ

ಕೊರಟಗೆರೆ ಪ್ರದೇಶಕ್ಕೆ ವಲಸೆ ಬಂದರೆಂದು ತಿಳಿದುಬರುತ್ತದೆ. ಪ್ರಧಾನ ವೆಂಕಪ್ಪಯ್ಯನ ವಂಶಸ್ಥರು ಹಂಪಣಾರ್ಯ, ಹಂಪಾರ್ಯ, ವೆಂಕಾಮಾರ್ಯ ಮುಂತಾದ ಹೆಸರುಗಳನ್ನು ಹೊಂದಿರುತ್ತಿದ್ದರೆಂದು ತಿಳಿದುಬರುತ್ತದೆ. ಪ್ರಧಾನ ವೆಂಕಪ್ಪಯ್ಯನವರ ಪೂರ್ವಜರು ಉತ್ತರ ದೇಶದಿಂದ ಇಲ್ಲಿಗೆ ವಲಸೆ ಬಂದ ಬ್ರಾಹ್ಮಣ ಕುಲದವರೆಂದು ಅಕ್ಕಿರಾಮಪುರದ ಸ್ಥಳೀಯ ಪುರಾಣ ಕೃತಿಯಲ್ಲಿ ದಾಖಲಿಸಲಾಗಿದೆ.

'ಶ್ರೀ ಮದ್ರಾಮಪುರಿ ಕರಿಶ್ರೀ ವೆಂಕಟೇಶ್ವರ ಮಹಾತ್ಮೆ' ಎಂಬ ಗ್ರಂಥದ ತಾಳೆಗರಿಯ ಹಸ್ತಪ್ರತಿಯು ಮೈಸೂರಿನ ಪ್ರಾಚ್ಯ ವಿದ್ಯಾಸಂಸ್ಥೆಯಲ್ಲಿ ಸಂರಕ್ಷಿತವಾಗಿದೆ. ಅದರ ಯಥಾಪ್ರತಿಯೂ ಪ್ರಕಟವಾಗಿದೆ. ಈ ಕೃತಿಯ ಗ್ರಂಥಕರ್ತನು ಭವಿಷ್ಯೋತ್ತರ ಪುರಾಣದ ಬ್ರಹ್ಮ ನಾರದ ಸಂವಾದದಲ್ಲಿ ಉಲ್ಲೇಖಿಸಲ್ಪಟ್ಟಿರುವುದೆಂದು ಈ ಕೆಳಗಿನಂತೆ ದಾಖಲಿಸುತ್ತಾನೆ.[1] ಇತಿ ಶ್ರೀ ಭವಿಷ್ಯೋತ್ತರ ಪುರಾಣೇ ಬ್ರಹ್ಮ ನಾರದ ಸಂವಾದೇ ಕರಿಶ್ರೀ ವೆಂಕಟೇಶ್ವರ ಮಹಾತ್ಮ್ಯೇ ಕ್ಷೇತ್ರ ಮಹಿಮಾ ವರ್ಣನಂ ನಾಮ ಪ್ರಥಮೋಽಧ್ಯಾಯಃ ॥ ಈ ಕೃತಿಯಲ್ಲಿ ಕರಿಗಿರಿ ಕ್ಷೇತ್ರವಾದ ಅಕ್ಕಿರಾಮಪುರದ ಸ್ಥಳಪುರಾಣ ಹೇಳಲಾಗಿದ್ದು, ಕೃತಿಯ ಕರ್ತೃವಾದ ವೆಂಕಮಾತ್ಯರ ವಂಶಾವಳಿಯನ್ನು ಈ ವಂಶದ ಮೂಲಪುರುಷನಾದ ಹಂಪಾರ್ಯ ಮುಂತಾದವರ ಉಲ್ಲೇಖಗಳನ್ನು ಇದರಲ್ಲಿ ಕಾಣಬಹುದು. ಇದರಲ್ಲಿ ಮುಮ್ಮಡಿ ವೆಂಕಾಮಾತ್ಯ ಅಥವಾ ವೆಂಕಾಮಾರ್ಯನ ಗುಣಗಳನ್ನು ವಿವರಿಸಲಾಗಿದೆ. ಕೃತಿಯಲ್ಲಿ ಉಲ್ಲೇಖವಾಗುವ ವೆಂಕಾಮಾರ್ಯನ ವಂಶಾವಳಿ ಈ ಕೆಳಗಿನಂತಿದೆ. ಪ್ರಾರಂಭದ ಹಂಪೆಯಾಮಾತ್ಯನ ಬಳಿಕ ಆತನ ವಂಶಾವಳಿಯ ಉಲ್ಲೇಖ ಮೊದಲನೆ ವೆಂಕಾರ್ಯನಿಂದ ಮುಮ್ಮಡಿ ವೆಂಕಾರ್ಯನ ಬಗೆಗೆ ಹೀಗೆ ಹೇಳಲ್ಪಟ್ಟಿದೆ.[2]

**ಯಷ್ಮದ್ವಂಶೇ ವೇಂಕಯಾರ್ಯಸ್ಸಪ್ತಮಃ ಪುರುಷೋ ಭವೇತ್ ॥**
**ಸೋಮಾತ್ಯಪದಮಾಸಾದ್ಯ ಜೀರ್ಣೋದ್ಧಾರಂ ಕರಿಷ್ಯತಿ ॥**
**ತತಸ್ಸಪ್ತಮೋ ಹಂಪಯಾರ್ಯಸ್ತಥಾ ಕುರ್ಯಾನ್ಮಹಾಮತಿಃ ।**
**ತತಸ್ಸಪ್ತಮೋ ವೇಂಕಯಾರ್ಯೋ ಮದಂಶೇನೈವ ಜಾಯತೇ ॥**
**ಮಾಹಾತ್ಮ್ಯ ಜ್ಞಾನವಾ ಭೂಮೌ ಪ್ರಸಿದ್ಧೋಮಾನವೇಷ್ವಪಿ ।**
**ವೇದವೇದಾಂಗತತ್ವ ಜ್ಞಸ್ಸರ್ವವಿದ್ಯಾವಿಶಾರದಃ ॥**
**ಸೋಮಾತ್ಯಪದವೀಮೇತ್ಯ ವೇಂಕಯಾಮಾತ್ಯನಾಮಕಃ।**
**ಮದಲಾಯಂ ಪುರೀಂ ಚೈವ ಜೀರ್ಣೋದ್ಧಾರಂ ಪುನಶ್ಚರೇತ್॥**

ವೆಂಕಾಮಾತ್ಯನದೆಂದು ತಿಳಿದು ಬರುವ ಹಾಗೂ ಇತರ ಕೃತಿಗಳಲ್ಲಿ ಕಂಡುಬರುವ ವೈಯಕ್ತಿಕ ವಿವರಗಳು ಇಲ್ಲಿಯೂ ಉಲ್ಲೇಖವಾಗಿವೆ. ಹಾಗಾಗಿ, ಇದನ್ನು ವೆಂಕಾಮಾತ್ಯ ಅಥವಾ ಪ್ರಧಾನ ವೆಂಕಪ್ಪಯ್ಯನವರದೆಂದು

ಗುರುತಿಸಬಹುದು. ಪ್ರಧಾನ ವೆಂಕಪ್ಪಯ್ಯನವರ ಮೂಲ ಪುರುಷರು ಇಂದಿನ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ, ಅಕ್ಕಿರಾಮಪುರದಲ್ಲಿ ಬಂದು ನೆಲೆಸಿದರೆಂದು ಅವರ ಜೀವನ ಚರಿತ್ರೆಯ ಹಸ್ತಪ್ರತಿ ಮತ್ತು ಅವರ ಇತರ ಕೃತಿಗಳಲ್ಲಿ ದಾಖಲಾಗಿದೆ.[೩]

ಇದೇ ಬಗೆಯಲ್ಲಿ ಮೈಸೂರು ಒಡೆಯರು ಗೋದಾವರಿ ನದಿಯ ಉಪನದಿಯಾದ ಪಂಪಾನದಿ ತೀರದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದು ಅದೃಷ್ಟ ಪರೀಕ್ಷೆಯಲ್ಲಿ ಗೆದ್ದು ಆಡಳಿತ ನಡೆಸಿ ಯಶಸ್ವಿಯಾಗಿರುವುದನ್ನು ಆಧಾರಸಹಿತ ಈಗಾಗಲೇ ನಿರೂಪಿಸಲಾಗಿದೆ.[೪] ಹಂಪಾ ಕ್ಷೇತ್ರವೆನ್ನುವ ಹೆಸರಿನ ಎರಡು ಕ್ಷೇತ್ರಗಳು ನಮಗೆ ಕಂಡುಬರುತ್ತವೆ. ಒಂದು ತುಂಗಭದ್ರಾ ನದಿಯ ತೀರದಲ್ಲಿರುವ ಹಂಪಾ/ಪಂಪಾಕ್ಷೇತ್ರ. ಅದಲ್ಲದೆ ಗೋದಾವರಿ ನದಿ ತೀರದಲ್ಲಿ ಪಂಪಾನದಿಯಿದ್ದು, ಅದು ಅತ್ಯಂತ ಪ್ರಸಿದ್ಧ ಪ್ರಾಚೀನ ಸಂಸ್ಕೃತಿಯ ಕೇಂದ್ರವಾಗಿದೆ.[೫] ಮೈಸೂರು ಒಡೆಯರಾದ ಕಂಠೀರವ ನರಸರಾಜರ ಗೆಜ್ಜಗನ ಹಳ್ಳಿ ತಾಮ್ರ ಶಾಸನದಲ್ಲಿ ಮೇಲೆ ಹೇಳಿರುವ ಎಲ್ಲ ವಿವರಗಳೂ ದಾಖಲಾಗಿವೆ.

೨೪ ...ಉಲ್ಲಾಸಯನ್ ಸುಮನಸಾಂ ನಿವಹಂ ಮಹೀಂದ್ರ

೨೫ ಶ್ರೀವೀರವೇಂಕಟನೃಪಃ ಪೃಥಿವೀಂ ಪ್ರಶಾಸ್ತಿ ॥ ರಾಜಾ

೨೬ ಧಿರಾಜವರರಾಜ ಮಹೇಶ್ವರೇಸ್ಮಿನ್ ಶ್ರೀವೀರವೇಂಕ

೨೭ ಡಮಹೀಪತಿದೇವರಾಯೇ ॥ ಪೃಥ್ವೀಂ ಪ್ರಶಾಸತಿ ಪೃಥಾಸು

೨೮ ತವಿಕ್ರಮೇ ಸದ್ಧರ್ಮಾಭಿವರ್ಧನಪರೇ ಘನಶೈಲಪೀ

೨೯ ಠೇ ॥ ಪೂರ್ವಂ ಗೋದಾವರೀತೀರಭೂಪಾಲಾ ಭೂ

೩೦ ರಿತೇಜಸಃ ॥ ಏತತ್ಪೂರ್ವೈರ್ಮಂಡಲೇಂದ್ರೈಃ ಸಾದರಂ ಪ್ರೇರಿತಾಃ

೩೧ ಪುನಃ ॥ ಪಾತುಂ ಕರ್ನಾಟಕಭೂಭಾಗಂ ಪ್ರಾಪ್ತಾಃ ಪ್ರಥಿತತೇಜಸಃ ॥

೩೨ ಆತ್ರೇಯಾನ್ವಯಸಂಭೂತಾ ಆಶ್ವಲಾಯನಸೂತ್ರಿಣಃ ॥ ಋಗ್ವೇ

೩೩ ದಿನೋ ಮಹಾಭಾಗಾ ಮಹಿಷಾಪೂರ್ನಿವಾಸಿನಃ ॥ ಚಾಮರಾಜಮ

೩೪ ಹೀಪಾಲಸ್ತೇಷು ಪ್ರಥತವಿಕ್ರಮಃ ॥

ಅದನ್ನು ಅನುಸರಿಸಿ ಅವರ ಗೋತ್ರ, ಸೂತ್ರ, ಆಚಾರ ಕ್ರಮ, ಸೈನಿಕ ದಂಡಯಾತ್ರೆಗಳ ಕಾಲದಲ್ಲಿ ಹೊಸ ಪ್ರದೇಶದಲ್ಲಿ ವಿದ್ಯಾಪಕ್ಷಪಾತಿಗಳು ಹೊಸ ಅವಕಾಶಗಳನ್ನು ಅರಸಿ, ವಲಸೆಯಾದ ವಿವರಗಳನ್ನು ದಾಖಲಿಸಿ, ಪರಿಶೀಲಿಸಿ ನಿರ್ಣಯಕ್ಕೆ ಬರಲಾಗಿದೆ.[೭] ಅದರಂತೆ ಪ್ರಧಾನರ ಕುಟುಂಬ ಸಹ ಸುಮಾರು ಒಂಭತ್ತನೆಯ ಶತಮಾನದ ಅಂತ್ಯದ ದಿನಗಳಲ್ಲಿ, ಅಂದರೆ, ರಾಷ್ಟ್ರಕೂಟ ಅಮೋಘವರ್ಷ ವೆಲನಿಯ ಚಾಲುಕ್ಯರೊಂದಿಗೆ ಶಾಂತಿ–ಸಂಧಾನ ಮಾಡಿಕೊಂಡು,

ನೊಳಂಬರು-ಗಂಗರು ಅತ್ಯಂತ ನೆಮ್ಮದಿಯಿಂದ ಬದುಕುತ್ತಿದ್ದ ಸಮಯದಲ್ಲಿ ಗೋದಾವರಿ ತೀರದಿಂದ ಜ್ಞಾನಿಗಳು ದೇಶಸಂಚಾರಾರ್ಥವಾಗಿ ಬಂದು, ತಮ್ಮ ಜ್ಞಾನವನ್ನು ಪ್ರದರ್ಶಿಸಿ, ಇಲ್ಲಿ ನೆಲೆ ನಿಂತಿರುವುದನ್ನು ತಳ್ಳಿ ಹಾಕುವಂತಿಲ್ಲ.

ಪ್ರಧಾನ ವೆಂಕಪ್ಪಯ್ಯನವರ ಜೀವನ ಚರಿತ್ರೆಯಲ್ಲಿ ಹಾಗೂ ಅಕ್ಕಿರಾಮಪುರದ ಸ್ಥಳ ಪುರಾಣದಲ್ಲಿ ದಾಖಲಿಸಿರುವಂತೆ ಪ್ರಧಾನ ವೆಂಕಪ್ಪಯ್ಯನವರು ಅವರ ಮೂಲ ಪುರುಷರಾದ ಹಂಪಣಾರ್ಯರಿಂದ ೨೮ನೆಯ ತಲೆಮಾರಿನವರು.[೮] ಪ್ರತಿ ತಲೆಮಾರಿಗೆ ೩೦ ವರ್ಷಗಳನ್ನು ಗುರುತಿಸಿ ಹಂಪಣಾರ್ಯ ಅವರ ವಲಸೆಯನ್ನು ಗುರುತಿಸಲು ಯತ್ನಿಸಿದಾಗ ಅದು ಒಂಭತ್ತನೆಯ ಶತಮಾನದ ಅಂತ್ಯಕ್ಕೆ ಬಂದು ನಿಲ್ಲುತ್ತದೆ. ನೊಳಂಬರು ಗಂಗರು ತುಮಕೂರು ಪ್ರದೇಶದ ಮೇಲೆ ಅಧಿಕಾರ ನಡೆಸುತ್ತಿದ್ದ ಕಾಲ ಹಾಗೂ ರಾಷ್ಟ್ರಕೂಟ ಎರಡನೆಯ ಕೃಷ್ಣನ ಆಡಳಿತಾವಧಿಯೊಂದಿಗೆ (೮೭೮-೯೧೪) ಈ ಅವಧಿ ತಾಳೆ ಹಾಕಿಕೊಳ್ಳುತ್ತದೆ. ಹಸ್ತಪ್ರತಿಯಲ್ಲಿ ಪ್ರಧಾನ ವೆಂಕಪ್ಪಯ್ಯನವರು, ಮತ್ತು ಅವರ ಹಿಂದಿನ ಏಳನೆಯ ತಲೆಯವರು, ಹಾಗೂ ಅವರ ಹಿಂದಿನ ಏಳನೆಯ ತಲೆಯವರು ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ್ದರೆಂದು ದಾಖಲಿಸುತ್ತದೆ. ಇದಕ್ಕೆ ಪೂರಕವಾಗಿ ಅಕ್ಕಿರಾಮಪುರದಲ್ಲಿ ಇಂದು ಪೂಜೆಗೊಳ್ಳುತ್ತಿರುವ ವೆಂಕಟರಮಣನ ವಿಗ್ರಹವನ್ನು ಶೈಲಿಯ ಆಧಾರದ ಮೇಲೆ ಪ್ರಧಾನರ ಕಾಲಕ್ಕೆ ಖಚಿತವಾಗಿ ದಾಖಲಿಸಬಹುದಾಗಿದೆ. ಅಲ್ಲದೆ ಅದೇ ದೇವಾಲಯದಲ್ಲಿ ಇರುವ ವಜ್ರಪರ್ಯಂಕಾಸನದಲ್ಲಿ ಕುಳಿತ ಆದಿಮೂರ್ತಿ ವಿಷ್ಣುವಿನ ವಿಗ್ರಹವನ್ನು ೧೪ನೆಯ ಶತಮಾನದ್ದೆಂದು ತಜ್ಞರು ಗುರುತಿಸಿದ್ದಾರೆ. ಅಂದರೆ ಪ್ರಧಾನ ವೆಂಕಾಮಾತ್ಯರಿಂದ ಹಿಂದಿನ ೧೪ನೆಯ ತಲೆಮಾರಿನವರಾದ ಇಮ್ಮಡಿ ಹಂಪಣಾರ್ಯರವರ ಕಾಲದಲ್ಲಿ ವಜ್ರಪರ್ಯಂಕಾಸನದಲ್ಲಿ ಕುಳಿತ, ಆದಿಮೂರ್ತಿ ವಿಷ್ಣುವಿನ ವಿಗ್ರಹ ಅದೇ ಕಾಲದ ಶೈಲಿಯ ದೇವಾಲಯದಲ್ಲಿ ಅಲ್ಲಿಯೇ ಪೂಜೆಗೊಳ್ಳುತ್ತಿದ್ದುದಕ್ಕೆ ಸಾಕ್ಷಿಯಾಗಿದೆ. ಅಂದಮೇಲೆ ವೆಂಕಾಮಾತ್ಯರರ ಚರಿತ್ರೆಯಲ್ಲಿ ದಾಖಲಾಗಿರುವ ಮೂರು ಹಂತಗಳ ನವೀಕರಣ ಖಚಿತವಾಯಿತು. ಈ ಹಿನ್ನೆಲೆಯಲ್ಲಿ ವೆಂಕಮಾತ್ಯರ ಜೀವನಚರಿತ್ರೆಯ ಕೃತಿ ವಿಶ್ವಾಸಾರ್ಹತೆಗೆ ಪಾತ್ರವಾಗುತ್ತದೆ. ಪ್ರಧಾನ ವೆಂಕಪ್ಪಯ್ಯನವರ ಮೂಲ ನೆಲೆಯನ್ನು ಗುರುತಿಸುತ್ತ ಎಂ.ಪಿ.ಎಲ್. ಶಾಸ್ತ್ರಿಗಳು ತಮ್ಮ ಲೇಖನದಲ್ಲಿ ಹೀಗೆ ದಾಖಲಿಸುತ್ತಾರೆ ಅದರ ಕನ್ನಡ ರೂಪಾಂತರ ಹೀಗಿದೆ.

ವೆಂಕಪ್ಪಯ್ಯ ಹದಿನೆಂಟನೆಯ ಶತಮಾನದ ಮೈಸೂರಿನ ಇತಿಹಾಸದಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದರು. ಈತನು ರಾಮಪುರ ಗ್ರಾಮಕ್ಕೆ ಸೇರಿದವನು. ಇದನ್ನು ಆತನು ತನ್ನ ಎಲ್ಲ ಕೃತಿಗಳಲ್ಲೂ ದಾಖಲಿಸಿರುತ್ತಾನೆ ಮತ್ತು ರಾಮಪುರಗ್ರಾಮ ಕಪಿನೀ ನದಿಯ ತೀರದಲ್ಲಿ ಮೈಸೂರಿನಿಂದ ೧೦ ಮೈಲಿ ದೂರದಲ್ಲಿ ನೈರುತ್ಯ ದಿಕ್ಕಿನಲ್ಲಿರುವ ಚಟ್ಟನಹಳ್ಳಿಯ ಸಮೀಪದಲ್ಲಿ ಸ್ಥಿತವಾಗಿದೆ.[೯]

ಶಾಸ್ತ್ರಿಗಳು ಉಲ್ಲೇಖಿಸುವ ರಾಂಪುರ ಗ್ರಾಮವು ಕಪಿಲಾನದಿಯ ಉತ್ತರ ದಿಕ್ಕಿನಲ್ಲಿದ್ದು ನಂಜನಗೂಡು ತಾಲ್ಲೂಕಿನ ಹಂಪಾಪುರಕ್ಕೆ ಸಮೀಪದಲ್ಲಿ ಇರುವುದು. ಅವರ ಈ ಗುರುತಿಸುವಿಕೆ ತೊಡಕಾಗಿದೆ. ಅಲ್ಲದೆ ಶಾಸ್ತ್ರಿಯವರು ವೆಂಕಪ್ಪಯ್ಯನ ಬಗ್ಗೆ ಬರೆಯುವ ಹೊತ್ತಿಗೆ ಹೈದರನಾಮೆ ಪೂರ್ಣವಾಗಿ ಪ್ರಕಟವಾಗಿರಲಿಲ್ಲ. ಅಲ್ಲದೆ ಮೈಸೂರಿನ ಇತಿಹಾಸದಲ್ಲಿ ಬಾಗಿಲು ಕಂದಾಚಾರದ ಕನ್ನಂಬಾಡಿ ವೆಂಕಪ್ಪಯ್ಯನ್ನು ಮಧುಗಿರಿ ವೆಂಕಮಾತ್ಯನೊಂದಿಗೆ ಸಮೀಕರಿಸಲಾಗಿದೆ. ಇವೆರಡು ಇತರ ಕೃತಿಗಳಲ್ಲಿ ಅಥವಾ ಆಕರಗಳಲ್ಲಿ ಖಚಿತವಾಗದ ಹಿನ್ನೆಲೆಯಲ್ಲಿ ಇದನ್ನು ತಿರಸ್ಕರಿಸಬೇಕಾಗುತ್ತದೆ.[೧೦]

ಪ್ರಧಾನ ವೆಂಕಪ್ಪಯ್ಯನವರು ಮದ್ಗಿರಿ ವೆಂಕಪ್ಪಯ್ಯ, ಮದ್ದಗಿರಿ ವೆಂಕಪ್ಪಯ್ಯನೆಂದು ಅಲ್ಲದೆ ತುಮಕೂರು ವೆಂಕಪ್ಪಯ್ಯ, ವೆಂಕಾಮಾತ್ಯ, ವೆಂಕಮಾರ್ಯ ಎಂದೂ ಇತಿಹಾಸ ಕೃತಿಗಳಲ್ಲಿ ಗುರುತಿಸಲ್ಪಟ್ಟಿದ್ದಾರೆ. ಕರ್ನಾಟಕ ಕವಿಚರಿತ್ರೆಯ ಲೇಖಕರು ವೆಂಕಮಾತ್ಯ (ಸಾ.ಶ.ಸು. ೧೭೭೦) ರಾಮಾಯಣ, ರಾಮಾಭ್ಯುದಯ, ಹನುಮದ್ವಿಲಾಸ ಕೃತಿಗಳನ್ನು ಬರೆದಿರುವ ಬ್ರಾಹ್ಮಣ ಕವಿ. ವೆಂಕಮಾತ್ಯ ರಾಮಪುರೀ ಹಂಪೆಯಾಮಾತ್ಯ ಮತ್ತು ವಾಲಾಂಬೆ / ವಾಮಾಂಬೆ / ವಾಬಾಂಬೆ ದಂಪತಿಗಳ ಪುತ್ರನೆಂದು ದಾಖಲಿಸುತ್ತಾರೆ.[೧೧] ಪ್ರಧಾನ ವೆಂಕಪ್ಪಯ್ಯನವರು ರಾಮಪುರಿ ಕ್ಷೇತ್ರದ ಸ್ಥಳಪುರಾಣ ಹಸ್ತಪ್ರತಿಯ ಕರ್ತೃ ಸಹ.೧೨ ಇವರು ವೆಂಕಾಮಾತ್ಯನೆಂಬ ಕಾವ್ಯನಾಮದಿಂದ ಸಾಹಿತ್ಯಸೇವೆ ನಡೆಸಿರುತ್ತಾರೆ. ಇವರ ತಂದೆ ರಾಮಾಪುರಿ ಹಂಪೆಯಾಮಾತ್ಯ ಅಕಾಲದಲ್ಲಿ ಮೃತ್ಯುವನ್ನಪ್ಪಿದ್ದರಿಂದ ಇವರು ತಮ್ಮ ಹಿರಿಯರ ಆಶ್ರಯದಲ್ಲಿ ಬೆಳೆದರು. ಪ್ರಧಾನ ವೆಂಕಾಮಾತ್ಯರ ಪ್ರಾರಂಭದ ಶಿಕ್ಷಣ ರಾಮಪುರದಲ್ಲಿ ಹಾಗೂ ಅನಂತರ ತುಮಕೂರಿನಲ್ಲಿ ನಡೆಯಿತು. ಅನಂತರ ಮೈಸೂರಿನಲ್ಲಿ ಪ್ರೌಢಶಿಕ್ಷಣವನ್ನು ಸಾಧಿಸಿಕೊಂಡರು. ಪ್ರಧಾನ ವೆಂಕಪ್ಪಯ್ಯನವರು ಮಧುಗಿರಿಯ ಹುಚ್ಚಾವಧೂತರ ಶಿಷ್ಯರಾಗಿದ್ದರು.[೧೩] ಅವರ ಆಜ್ಞೆಯಂತೆ ಶಿಕ್ಷಣ ಪಡೆದ ಅನಂತರ ತಮ್ಮ ಕುಲವೃತ್ತಿಯಲ್ಲಿ ಮುಂದುವರಿಯುವ ಕಾಲದಲ್ಲಿ ಹೈದರಾಲಿಯನ್ನು ಭೇಟಿ ಮಾಡಿ ಅನಂತರ ಪ್ರಧಾನ ಪದವಿಗೆ ಏರಿದರು. ಪ್ರಧಾನ ವೆಂಕಪ್ಪಯ್ಯನವರು ಹೈದರಾಲಿಯಲ್ಲಿ ಪ್ರಧಾನರಾಗುವ ಮುಂಚೆ ಮಧುಗಿರಿ ಪ್ರದೇಶದ ಆಡಳಿತವನ್ನು ನೆರವೇರಿಸುತ್ತಿದ್ದರೆಂದು ಹೈದರ್‌ನಾಮ ಕೃತಿಯು ಹೀಗೆ ದಾಖಲಿಸುತ್ತದೆ.[೧೪]

ಮೊದಲು ನವಾಬರು ಭಾವಮೈದ ಮೀರ ಅಲ್ಲೀರಜಾಖಾನರು ಶೀಮೇ ಸಾಧಿಸುವಾಗ್ಯೆ ಸ್ವಲ್ಪ ಫವುಜಿನಿಂದಾ ಬರುವಾಗಾ ಸಂಗಡ ಸಾರಂಗಿ ವೆಂಕಟಗಿರ್ಯೆಯ್ಯ ಬಂದರು. ಆವಾಗಾ ತುಮಕೂರು ಗುರಿತನ ಪಾರುಪತ್ಯ ಮಾಡುತ್ತಾಯಿದ್ದ ವೆಂಕಪ್ಪಯ್ಯನವರು ಯೀ ವೆಂಕಟಗಿರ್ಯೆಗೆ ಚಿಕಂಮ್ಮನ ಮಗನಾದ್ದರಿಂದಾ ಯೀ ವೆಂಕಟಗಿರ್ಯೆಯ್ಯನ ಮಾರಿಫತ್ತು ಮೀರಸಾಬರಿಗೆ ವಳಬಿದ್ದು ತುಮಕೂರು ಕಟಿಕೊಟ್ಟ

ಸುತ್ತಮುತ್ತಣ ಹೆಬ್ಬೂರು ಕಡಬಾ ದೇವರಾಯದುರ್ಗಾ ವಗ್ಯೆರೆ ಠಾಣೆ ಹಾಕಿಸಿ ಮೀರಸಾಬರಿಗೆ ಹಣವೂ ವಿಶೇಷವಾಗಿ ದುಡಿದುಕೊಟ್ಟು ಯಿವರಲ್ಲಿ ಪ್ರಮುಖರಾಗಿ ಪಟ್ಟದ ಬಳಿ ನವಾಬರು ಯಿಳಿದಾಗಾ ಅಲ್ಲಿ ಭೇಟಿಯಾಗಿ ಮದ್ದಗಿರಿ ಚೆಂನರಾಯದುರ್ಗ ಸಾಧಿಸುತ್ತೇವೆಂದು ನವಾಬರಿಗೆ ಅರಿಕೆಮಾಡಿ ಸದರಹೂ ಮೀರಸಾಹಿರಂನ್ನೂ ಫವುಜ ಸುದಾ ತೆಗೆದುಕೊಂಡು ಬಂದು ಮದ್ದಗಿರಿಗೆ ಮುತ್ತಿಕೊಂಡಾಗಾ ಮಡಿಕೆಶೀರ್ಯದಿಂದಾ ಮುರಾರಿರಾಯನ ಕಡೆ ಫವುಜು ಮದ್ದಗಿರಿ ಠಾಣೆ ಹಾಕಬೇಕೆಂದು ಬಂದ ವರನ ಗರಣೀ ಬಳಿ ಹೊಡದು ಪಲಾಯನಾ ಮಾಡಿ ಬಂದು ಅಂದೂ ಶ್ರೀ ತಿಂಮ್ಮರಾಜೈಯ್ಯನವರ ಕೈಯಿಂದಾ ಮದ್ದಗಿರಿ ಸಾಧಿಸಿ ಠಾಣೆ ಹಾಕಿ ಅಲ್ಲಿ ಹಣಕಾಸು ಹ್ಮಾರಳಾ ದುಡಿದು ನವಾಬರಿಗೂ ಮೀರ ಸಾಬರಿಗೂ ಕೊಟ್ಟು ಬಹಳ ದಯಕ್ಕೆ ಪಾತ್ರರಾಗಿ ಗಡಿಗಳ ಬದುಕೆಲ್ಲಾ ಮೀರ ಸಾಬರ ಕೈದಿನಲ್ಲಿ ವೆಂಕಪ್ಪಯ್ಯನವರು ಜುಂಮೆ ಮಾಡಿದರು.

ಇದನ್ನು ಗಮನಿಸಿದಾಗ ಹಯವದನರಾಯರು ದಾಖಲಿಸುವಂತೆ ಪ್ರಧಾನ ವೆಂಕಪ್ಪಯ್ಯನವರು ಕಿತ್ತೂರಿನ ಅಥವಾ ನಗರದ ಸೀಮೆಯ ವೀರಮ್ಮಾಜಿಯಲ್ಲಿ ನಿಯೋಗಿಗಳಾಗಿದ್ದರೆಂಬ ವಾದವನ್ನು ಒಪ್ಪಲಾಗುವುದಿಲ್ಲ. ಕಾರಣ ಪ್ರಧಾನ ವೆಂಕಪ್ಪಯ್ಯನವರು ಮಧುಗಿರಿಯಲ್ಲಿ ಇದ್ದವರು. ಇದಕ್ಕೆ ವಿರುದ್ಧವಾಗಿ ಹಯವದನರಾಯರು ಆರ್. ಶಾಮಾಶಾಸ್ತ್ರಿಯವರು ಸಂಪಾದಿಸಿರುವ ಲಿಂಗಣ್ಣ ಕವಿ ವಿರಚಿತ ಕೆಳದಿ ನೃಪವಿಜಯ ಕೃತಿಯ ಹನ್ನೆರಡನೆಯ ಆಶ್ವಾಸದಲ್ಲಿ ದಾಖಲಿಸುವ ಅಡಿಟಿಪ್ಪಣಿಯಲ್ಲಿ ಬರುವ ವೆಂಕಪ್ಪಯ್ಯನ ಹೆಸರನ್ನು ಆಧರಿಸಿ ಆತ ಅಂದರೆ ವೆಂಕಾಮಾತ್ಯ ಅಥವಾ ಪ್ರಧಾನ ವೆಂಕಪ್ಪಯ್ಯನವರು ಚೆನ್ನಮ್ಮಾಜಿಯ ನಿಯೋಗಿಗಳಾಗಿದ್ದರೆಂದು ದಾಖಲಿಸುತ್ತಾರೆ.[೧೫] ಆದರೆ ಅಲ್ಲಿ ಉಲ್ಲೇಖವಾಗುವ ವೆಂಕಪ್ಪಯ್ಯ ಪ್ರಧಾನ ವೆಂಕಪ್ಪಯ್ಯನವರಲ್ಲ. ಶಾಮಾಶಾಸ್ತ್ರಿಯವರು ಕೊಡುವ ಅಡಿಟಿಪ್ಪಣಿಯ ಯಥಾವತ್ತು ಇಲ್ಲಿ ದಾಖಲಿಸಲಾಗುತ್ತಿದೆ.[೧೬]

ವಸುಧಾರ ಕಳಸಯ್ಯ, ಅ ಕೃಷ್ಣಪ್ಪಯ್ಯ, ಹಲಸಗಾರ ನಾಗಪ್ಪ, ಕೋಳಾಲದ ಮರಿಯಪ್ಪಯ್ಯ, ಮುಂತಾದ ಬ್ರಾಹ್ಮಣ ಗುರಿಕಾರಗಳು, ರಾಯಸರ ವೆಂಕಟನಾರಣಪ್ಪಯ್ಯ, ಗಂಗಾಧರಯ್ಯ, ವಿಶ್ವೇಶ್ವರಯ್ಯ, ಸಬ್ಬುನೀಸ ಕೃಷ್ಣಪ್ಪಯ್ಯ, ಆ ವಿಶ್ವೇಶ್ವರಯ್ಯ, ಸಬ್ಬಾಯಿತ ಹೊಸಂಗಡಿ ವೆಂಕಪ್ಪಯ್ಯ, ಈ ಮುಂತಾದ ಬ್ರಾಹ್ಮಣನಿಯೋಗಿಗಳ್ಗಂ ಸಿದ್ದಪ್ಪನಾಯಕ, ನಂಬಯ್ಯ, ದಳವಾಯಿ ಅಂಡಿಗೆ ವೀರಭದ್ರಯ್ಯ, ಮನೆವಾರ್ತೆ ವೀರಭದ್ರಯ್ಯ ಅವಸರದ ಕೆಂಡಪ್ಪ ಮುಂತಾದ ಶಿವಭಕ್ತಗುರಿಕಾರಜನವರ್ಗ, ತತ್ತದ್ಯೋಗ್ಯತಾನುಸಾರವರಿದುಚಿತಾದಿ ಅಧಿಕಾರಂಗಳನಿತ್ತು ನಡೆಸಿಕೊಳ್ಳುತ್ತುಂ (ಕ).

ಅಲ್ಲದೆ ಈ ಹೊತ್ತಿಗೆ ಪ್ರಧಾನ ವೆಂಕಪ್ಪಯ್ಯನವರು ಹೈದರಾಲಿಯೊಂದಿಗೆ ಎಲ್ಲ ಸೈನಿಕ ಕಾರ್ಯಾಚರಣೆಗಳಲ್ಲಿ ಭಾಗವಹಿಸಿದ್ದನ್ನು ಹೈದರ್‌ನಾಮ ಖಚಿತಪಡಿಸುತ್ತದೆ.

ಬಿದನೂರಿನ ದಾಳಿಯ ಸಮಯದ ಹೊತ್ತಿಗಾಗಲೇ ಪ್ರಧಾನ ವೆಂಕಪ್ಪಯ್ಯನವರು ಮಧುಗಿರಿ ಪ್ರದೇಶದಲ್ಲಿ ಆಡಳಿತ ನಿರ್ವಹಿಸುತ್ತಿದ್ದು, ಅಲ್ಲಿಂದ ಅವರು ನಗರ ಪ್ರದೇಶಕ್ಕೆ ದಿವಾನರಾಗಿ ಹೋದರೆಂಬುದನ್ನು ಉಲ್ಲೇಖಿಸುತ್ತದೆ. ಅಲ್ಲದೆ ನಗರ ಪ್ರದೇಶದ ರಾಣಿಯನ್ನು ಅಂದರೆ ವೀರಮ್ಮಾಜಿಯನ್ನು ಚನ್ನಬಸವನಾಯಕನನ್ನು ಬಂಧಿಸಿ ಮಧುಗಿರಿಗೆ ಮುಂದಿನ ಶಿಕ್ಷೆ ನಿಷ್ಕರ್ಷೆಗಾಗಿ ಸ್ಥಳಾಂತರಿಸಿದರು.[೧೭] ಇದು ಹೈದರಾಲಿಯು ಪ್ರಧಾನ ವೆಂಕಪ್ಪಯ್ಯನವರಲ್ಲಿ ಇಟ್ಟಿದ್ದ ನಂಬಿಕೆಯ ದ್ಯೋತಕಮಾಗಿದೆ. ಆನಂತರ ಹೈದರಾಲಿಯು ನಗರದ ಹೆಸರನ್ನು ಹೈದರ್‌ನಗರ್ ಎಂದು ಬದಲಿಸಿ ವೆಂಕಪ್ಪಯ್ಯನವರನ್ನು ಅಮಾತ್ಯರಾಗಿ ಅಥವಾ ಪ್ರಧಾನರಾಗಿ ನೇಮಕ ಮಾಡಿದ್ದನ್ನು ಹೈದರ್‌ನಾಮ ಈ ರೀತಿ ಗುರುತಿಸುತ್ತದೆ.[೧೮]

ಆ ಬಳಿಕ ಬಿದಲೂರಿಗೆ ಹೈದರನಗರವೆಂದು ಹೆಸರಿಟ್ಟು ಯೀ ತಾಲೋಕು ಮೇಲು ಶೀಮೆ ಗಡಿಗಳು ಘಟ್ಟದ ಕೆಳಗಣ ಶೀಮೆ ಕೊಡಿಯಾಲ ಮುಂತ್ತಾದ ಫವುಜ ಸುದಾ ಹೋಗಿ ಸಾಧಿಸಿ, ಬಂದೋಬಸ್ತು ಮಾಡಿದರು. ಆ ಬಳಿಕ ಶಿಬಂದಿ ೨೫,೦೦೦ ಯಿಟು ಶೀಮೆ ಬಂದೋಬಸ್ತು ಮಾಡಿ ಅವರಿಗೆ ಮದ್ದಗಿರಿ ವಗ್ಯೆರೆ ವೆಂಕಪ್ಯೆಯ್ಯನವರು ತಾಲೋಕ್ಕು ಮಾಮಲೆಗಳೆಲ್ಲಾ ಯಿವರ ತಂಮ್ಮ ವೆಂಕಟೇಶೈಯ್ಯನವರಿಗೆ ನೇಮಕ ಮಾಡಿ ವೆಂಕಪ್ಪಯ್ಯನವರ ಸಂಗಡಲೆ ನಗರಕ್ಕೆ ಕರತಂದು ನವಾಬರು ದಯ ಬಹಳವಾಗಿ ಯಿವರನ್ನು ಯಿದ್ದದ್ದರಿಂದ ನಗರದ ಸಂಸ್ಥಾನದ ದಿವಾನಗಿರಿಯನ್ನು ವೆಂಕಪ್ಪಯ್ಯನವರಿಗೆ ನೇಮಕಾಮಾಡಿ ಪಟ್ಟದ ಶೀಮೆ ದಿವಾನಗಿರಿಯಂನ್ನು ದಿಂಡುಕಲ್ಲು ವೆಂಕಟಪ್ಪನವರಿಗೆ ನೇಮಕಾಮಾಡಿ ನಗರದಲ್ಲಿ ಬಹದರ ವರಹಾದ ಟಂಕಸಾಲೆ ಹಾಕಿಸಿದರು.

ಪ್ರಧಾನ ವೆಂಕಪ್ಪಯ್ಯನವರು, ಹೈದರ್ ನಗರಕ್ಕೆ ದಿವಾನರಾಗಿ ಹೋದುದನ್ನು ಮಹೀಶೂರ್ ಶ್ರೀ ಮನ್ಮಹಾರಾಜ ಚಾಮರಾಜೇಂದ್ರ ಒಡೆಯರವರ ವಂಶರತ್ನಾಕರ[೧೯] ಕೃತಿಯು ದಾಖಲಿಸುತ್ತದೆ. ಶಾಲೀವಾಹನ ಶಕ ೧೬೮೪ನೆಯ ಚಿತ್ರಭಾನು ಸಂವತ್ಸರದ ಫಾಲ್ಗುಣ ಮಾಸದಲ್ಲಿ (ಸಾ. ಶ. ೧೭೬೩, ಫೆಬ್ರವರಿ ೧೨ ಶನಿವಾರದಿಂದ ಮಾರ್ಚ್ ೧೪ ಸೋಮವಾರದ ನಡುವೆ೨೦) ನಿಬಂಧೆಯನ್ನು ಮಾಡಿ, ಈ ನಗರದ ಸೀಮೆಯ ಬಂದೋಬಸ್ತಿನ ಬಗ್ಗೆ ಮದ್ಗಿರಿ ವೆಂಕಪ್ಪಯ್ಯನಿಗೆ ದಿವಾನಗಿರಿಯನ್ನು ಕೊಟ್ಟದ್ದಲ್ಲದೆ, ಶ್ರೀರಂಗಪಟ್ಟಣದ ದಿವಾನಗಿರಿಯುನ್ನು ದಿಂಡಗಲ್ಲು ವೆಂಕಟಪತಯ್ಯನೆಂಬುವನಿಗೆ ದೊರೆಗಳ ಅಪ್ಪಣೆಯ ಮೇರೆಗೆ ನೇಮಕ ಮಾಡಿಸಿದನು.

ಇದೇ ಖಚಿತವಾದ ಮಾಹಿತಿಯನ್ನು ತಿಂಗಳು ಮತ್ತು ವರ್ಷದೊಂದಿಗೆ ಶ್ರೀಮನ್ಮಹಾರಾಜರವರ ವಂಶಾವಳಿ ದಾಖಲಿಸುತ್ತದೆ. ಅದು ಈ ರೀತಿ ಇದೆ.

ಶಾಲಿವಾಹನ ಶಕ ೧೬೮೪ನೇ (ಸಾ.ಶ. ೧೭೬೩) ಚಿತ್ರಭಾನು ಸಂವತ್ಸರದ ಫಾಲ್ಗುಣ ಮಾಸದಲ್ಲಿ ನಿಬಂಧನೆಮಾಡಿ. ಈ ನಗರದ ಸೀಮೆಯ ಬಂದೋಬಸ್ತು

ಆಗುವುದಕ್ಕೆ ಮದ್ದಗಿರಿ ವೆಂಕಪ್ಪಯ್ಯನಿಗೆ ದಿವಾನಗಿರಿಯನ್ನು ಕೊಟ್ಟಿದ್ದಲ್ಲದೆ, ಶ್ರೀರಂಗಪಟ್ಟಣದ ದಿವಾನಗಿರಿಯನ್ನು ದಿಂಡುಗಲ್ಲು ವೆಂಕಟಪತಯ್ಯನಿಗೆ ದೊರೆಗಳವರ ಅಪ್ಪಣೆಯ ಮೇರೆಗೆ ನೇಮಕ ಮಾಡಿದನು.[೨೧]

ಬಿದನೂರಿನ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಲಿಂಗಪ್ಪನು ರಾಣಿ ವೀರಮ್ಮಾಜಿ ನಿಂಬಯ್ಯನ ಜೊತೆ ಸೇರಿ ಹೈದರಾಲಿಯನ್ನು ಆತನ ಪ್ರಧಾನ ವೆಂಕಪ್ಪಯ್ಯನನ್ನು ಹಾಗೂ ಇತರ ಅಧಿಕಾರಿಗಳನ್ನು ಕೊಲ್ಲುವ ಪ್ರಯತ್ನವನ್ನು ನಡೆಸಿದನಾದರೂ ಅವನ ಪ್ರಯತ್ನ ಸಫಲವಾಗಲಿಲ್ಲ.[೨೨] ಪ್ರಧಾನ ವೆಂಕಪ್ಪಯ್ಯನವರು ನಗರದ ದಿವಾನರಾಗಿದ್ದ ಸಮಯದಲ್ಲಿ ಶೃಂಗೇರಿ, ಕುಂದಾಪುರ, ಬಸರೂರು ಮುಂತಾದ ಕಡಲತೀರದ ಪ್ರದೇಶಗಳಲ್ಲಿ ಆಡಳಿತಾತ್ಮಕ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದುದನ್ನು ಕುಂದಾಪುರ ಕೈಫಿಯತ್ತು ಮತ್ತು ಶೃಂಗೇರಿ ಕೈಫಿಯತ್ತು ಖಚಿತ ನುಡಿಗಳಲ್ಲಿ ದಾಖಲಿಸುತ್ತದೆ. ಇದಲ್ಲದೆ ನಗರದಲ್ಲಿ ಪ್ರಾರಂಭಿಸಿದ್ದ ತೋಪು ಕಾರ್ಖಾನೆಯ ಕಾರ್ಯ ಸಾಂಗವಾಗಿ ನೆರವೇರಲು ಅಡ್ಡಿಯಾದ ಸಂದರ್ಭದಲ್ಲಿ ಮುಂಬೈ ಪ್ರಾಂತ್ಯದಿಂದ ತೋಪುಗಳನ್ನು ಎರಕ ಹೊಯ್ಯುವವರನ್ನು ಕರೆತಂದು ಕಾರ್ಯಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದ್ದನ್ನು ಶೃಂಗೇರಿ ಕೈಫಿಯತ್ತು ಈ ರೀತಿ ದಾಖಲಿಸುತ್ತದೆ.[೨೩]

ನಗರದಲ್ಲಿ ತೋಫ್‌ಖಾನೆ ಬಂದೂಕ್ ಸಹಾ ಯಾರ ದಿವಸದಲ್ಲಿಯಾಯಿತೋ? ಅದನ್ನು ಮಾಡಿದ ಜನಗಳೆಲ್ಲಿದ್ದಾರೋ? ಈ ಬಗೆ ಪ್ರಾಕ್ ಪಾರ್ಥಿವ ಸಂವತ್ಸರದ ವರೆಗೆ ಬೆಂಗಳೂರು ಸೀಮೆಯಿಂದ ಕೊಂಗರು ಬಂದು ಪಂಚಋಷಿ ತೋಪು ಎರೆಯುತ್ತಾ ಇದ್ದರು. ಆ ತೋಪುಗಳು ದುರಸ್ತಾಗದೆ ಜಯಗಳಾದುದರಿಂದ ಪ್ರಧಾನ ವೆಂಕಪ್ಪಯ್ಯನವರು ಸದರಹು.... ಮಹಮ್ಮದ್ ಹಂಚನ ಮುಖಾಂತರ ಬೊಂಬೈಯಿಂದ ಕರೆಸಿದ(ನು).

ಕುಂದಾಪುರ ಕೈಫಿಯತ್ತು ಕುಂದಾಪುರ ಸುತ್ತಮುತ್ತಲಿನ ಪ್ರದೇಶವನ್ನು ಪ್ರಧಾನರು ನಗರದಲ್ಲಿದ್ದುಕೊಂಡು ಆಳ್ವಿಕೆ ಮಾಡುತ್ತಿದ್ದುದನ್ನು ಈ ರೀತಿಯಾಗಿ ದಾಖಲಿಸುತ್ತದೆ.[೨೪]

ಇವರ ಕಾಲದಲ್ಲಿ ನಗರದ ೧೮ ಲಕ್ಷದ ಸೀಮೆ ಯಾವತ್ತು ಪ್ರಧಾನ ವೆಂಕಪ್ಪಯ್ಯನ ವಶವನ್ನು ಮಾಡಿದರು. ಈ ಕುಂದಾಪುರವನ್ನು ಆ ಕಾಲದಲ್ಲಿ ನಲವತ್ತೈದು ಸಾವಿರ ಸೀಮೆಯ ಬೇರೀಜು ಮಾಡಿ ಇಲ್ಲಿ ಗಂಗಾಧರಯ್ಯಾ ಎಂಬ ಅಮಲ್ದಾರರನ್ನು ಇಟ್ಟರು. ಈತನು ಎರಡು ವರ್ಷ ಮಾಡಿದರು.

**ಗೋವಾದ ಪೋರ್ಚುಗೀಸರೊಂದಿಗೆ ಹೈದರಾಲಿಯ ಸಂಧಿಯಲ್ಲಿ ಪ್ರಧಾನ ವೆಂಕಪ್ಪಯ್ಯನವರು**

ಪ್ರಧಾನ ವೆಂಕಪ್ಪಯ್ಯನವರು ನಗರದ ದಿವಾನರಾಗಿದ್ದ ಸಮಯದಲ್ಲಿ ಕುಂದಾಪುರ ಹಾಗೂ ಮಂಗಳೂರು ಪ್ರದೇಶಗಳ ಪ್ರಧಾನರಾಗಿಯೂ ಕಾರ್ಯ ನಿರ್ವಹಿಸಿದ್ದಲ್ಲದೆ ಹೈದರಾಲಿಯ ಪ್ರಧಾನ ಸಂಧಾನಕಾರರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಅಲ್ಲದೆ ಪ್ರಧಾನ ವೆಂಕಪ್ಪಯ್ಯನವರು ಪೋರ್ಚುಗೀಸ್ ಅಧಿಕಾರಿಗಳೊಂದಿಗೂ ವ್ಯವಹರಿಸಿದ್ದರು. ೧೭೬೯ರಲ್ಲಿ ಗೋವಾದ ಪೋರ್ಚುಗೀಸರೊಂದಿಗೆ ಹೈದರಾಲಿಯು ನೆರವೇರಿಸಿಕೊಂಡ ಶಾಂತಿ ಒಪ್ಪಂದ ಅಥವಾ ಸಂಧಿಯಲ್ಲಿ ಪ್ರಧಾನ ವೆಂಕಪ್ಪಯ್ಯನವರು ಪ್ರಮುಖ ಪಾತ್ರಧಾರಿಗಳಾಗಿದ್ದರು ಎಂಬುದನ್ನು ಪೋರ್ಚುಗೀಸ್ ದಾಖಲೆಗಳು ಖಚಿತಪಡಿಸುತ್ತವೆ.[೨೫] ಇದೇ ಸಮಯದಲ್ಲಿ ಪ್ರಧಾನ ವೆಂಕಪ್ಪಯ್ಯನವರು ಪೋರ್ಚುಗೀಸ್ ಅಧಿಕಾರಿಗಳಿಗೆ ಎರಡು ಪತ್ರಗಳನ್ನು ಬರೆದಿದ್ದು, ಅವು ಮೈಸೂರು ಮತ್ತು ಪೋರ್ಚುಗೀಸರ ನಡುವಿನ ವ್ಯಾಪಾರ, ವ್ಯವಹಾರ, ಆರ್ಥಿಕ ಮತ್ತು ರಾಜಕೀಯ ಸ್ಥಿತಿ–ಗತಿಗಳ ಬಗ್ಗೆ ಪ್ರಮುಖ ಮಾಹಿತಿಯನ್ನು ಒದಗಿಸುತ್ತದೆಂದು ಆಂಗ್ಲಭಾಷೆಯಲ್ಲಿ ಬರೆದಿರುವ ಪ್ರೌಢಪ್ರಬಂಧವೊಂದರಲ್ಲಿ ದಾಖಲಿಸಲಾಗಿದೆ. ಇದೇ ಮಾಹಿತಿಯನ್ನು ಎನ್. ಶಾಂ ಭಟ್ ಅವರು ಲೇಖನದಲ್ಲಿ ದಾಖಲಿಸಿರುತ್ತಾರೆ.[೨೬] ಆದರೆ ಅವರು ಪ್ರಧಾನ ವೆಂಕಪ್ಪಯ್ಯನವರ ಹೆಸರನ್ನು ಲೇಖನದಲ್ಲಿ ದಾಖಲಿಸಿರುವುದಿಲ್ಲ. ಅವರ ಮಾರ್ಗದರ್ಶನದಲ್ಲಿ ಪ್ರೌಢಪ್ರಬಂಧ ರಚಿಸಿದ ವಿದ್ಯಾರ್ಥಿ ತಮ್ಮ ಪ್ರೌಢಪ್ರಬಂಧದಲ್ಲಿ ಮೂಲ ದಾಖಲೆಗಳನ್ನಾಧರಿಸಿ ಪ್ರಧಾನ ವೆಂಕಪ್ಪಯ್ಯನವರನ್ನು ಹೆಸರಿಸುತ್ತಾರೆ. ಅವರು ನೀಡಿರುವ ವಿವರಗಳನ್ನು ಅಡಿಟಿಪ್ಪಣಿಯಲ್ಲಿ ಯಥಾವತ್ತಾಗಿ ದಾಖಲಿಸಿದೆ.[೨೭] ಅದರ ಕನ್ನಡದ ಸಾರಾಂಶ ಈ ರೀತಿ ಇದೆ.

೧೭೬೩ರಲ್ಲಿ ಪೋರ್ಚುಗೀಸರು ಮತ್ತು ಮೈಸೂರಿನ ಸರ್ವಾಧಿಕಾರಿ ಹೈದರಾಲಿ ಖಾನ್‌ನೊಂದಿಗೆ ವ್ಯಾಪಾರ ಒಪ್ಪಂದವೊಂದು ಏರ್ಪಟ್ಟಿತು. ಈ ವ್ಯಾಪಾರ ಒಪ್ಪಂದದಲ್ಲಿ ಮೈಸೂರು ಸಂಸ್ಥಾನವನ್ನು ಆಳುತ್ತಿದ್ದ ಹೈದರಾಲಿ ಹಾಗೂ ಆತನ ಆಡಳಿತ ಪ್ರದೇಶವಾಗಿದ್ದ ಬಿದನೂರು ಮತ್ತು ಕೆನರಾ ಪ್ರದೇಶದ ಪ್ರಧಾನರಾಗಿದ್ದ ಪ್ರಧಾನ ವೆಂಕಪ್ಪಯ್ಯನವರು ಭಾಗವಹಿಸಿದ್ದರು. ೧೭೬೯ರ ಆಗಸ್ಟ್ ತಿಂಗಳಿನಲ್ಲಿ ಪೋರ್ಚುಗೀಸರು ಮತ್ತು ಹೈದರಾಲಿ ಈ ಒಪ್ಪಂದಕ್ಕೆ ಸಹಿ ಹಾಕಿದರು. ಆ ಒಪ್ಪಂದದ ಕರಾರುಗಳು ಇಂತಿದ್ದವು.

ಪೋರ್ಚುಗೀಸರು ಮಂಗಳೂರಿನಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಬಹುದು.

ಪೋರ್ಚುಗೀಸರಿಗೆ ಅಕ್ಕಿಯ ಕಾಣಿಕೆ ಕೊಡುವುದರ ಜೊತೆಗೆ ಅಕ್ಕಿ, ಮೆಣಸು, ಶ್ರೀಗಂಧ ಇವುಗಳನ್ನು ಸಂಗ್ರಹಿಸಿಕೊಳ್ಳಲು ಅವಕಾಶವಿರಬೇಕು.

ಎಲ್ಲ ಕ್ರಿಶ್ಚಿಯನ್ ಕೈದಿಗಳನ್ನು ಬಿಡುಗಡೆ ಮಾಡಬೇಕು.

ಎಲ್ಲ ಸಾಲ ಹಾಗೂ ಈ ಹಿಂದಿನ ವರ್ಷಗಳಲ್ಲಿ ಗೋವಾದಿಂದ ಗವರ್ನರನು ತಂದ ಸೈನ್ಯ ಸಾಮಗ್ರಿಗಳು, ಸೀಸ ಮೊದಲಾದವುಗಳ ಲೆಕ್ಕಗಳನ್ನು ವಿಳಂಬವಿಲ್ಲದೆ ಚುಕ್ತಾ ಮಾಡಬೇಕು. ಹೀಗೆ ಈ ಒಪ್ಪಂದವು ಕೆನರಾ (ದಕ್ಷಿಣ ಕನ್ನಡ) ದಲ್ಲಿ ಪೋರ್ಚುಗೀಸರ ಆರ್ಥಿಕ ಮತ್ತು ಸಾಮಾಜಿಕ ಆಸಕ್ತಿಗಳನ್ನು ರಕ್ಷಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿತು. ಇದಲ್ಲದೆ ಪೋರ್ಚುಗೀಸರು ಹೈದರಾಲಿಗೆ ಆತನ ಆಡಳಿತಾತ್ಮಕ ಪ್ರದೇಶದಲ್ಲಿ ಸೇನೆಯ ಆಧುನೀಕರಣಕ್ಕೆ ಫಿರಂಗಿಗಳನ್ನು ಎರಕಹೊಯ್ಯಲು ಮತ್ತು ಬಂದೂಕುಗಳ ತಯಾರಿಕೆಗೆ ಅಗತ್ಯವಾದ ಸಹಕಾರವನ್ನು ನೀಡುವುದಾಗಿ ಸಹ ಒಪ್ಪಿಕೊಂಡಿದ್ದನ್ನು ಪ್ರಧಾನ ವೆಂಕಪ್ಪಯ್ಯನವರ ಪತ್ರಗಳು ಮತ್ತು ಕೈಫಿಯತ್ತಿನಲ್ಲಿ ಉಲ್ಲೇಖವಾಗಿರುವ ವಿವರಗಳು ಖಚಿತಪಡಿಸುತ್ತವೆ.

ಶಾಲಿವಾಹನ ಶಕ ೧೬೯೩ರಲ್ಲಿ ಖರಸಂವತ್ಸರ ವೈಶಾಖ ಮಾಸದಲ್ಲಿ (ಸಾ.ಶ. ೧೭೭೧ ಏಪ್ರಿಲ್ ೧೫ರಿಂದ ಮೇ ೧೫) ಶಿರ್ಯಾದಿಂದ ಮಹಿಮಾಜಿ ಶಿಂಥೆ ೩,೦೦೦ ಕುದುರೆ, ೩೦೦೦ ರೋಹಿಲೆ, ಸಿಬ್ಬಂದಿ ೩,೦೦೦ ಹಾಗೂ ೨ ತೋಪಿನೊಂದಿಗೆ ಬಂದು ತುಮಕೂರು ವಳಿತವಾದ ಚೇಳೂರಿಗೆ ಮುತ್ತಿಗೆ ಹಾಕಿದಾಗ ಗುರಿಕಾರ ವೆಂಕಟಪತಯ್ಯನವರ ಮಗ ವೆಂಕಟಪ್ಪನವರು ಕೋಟೆಯಲ್ಲಿ ಮುಖ್ಯವಾಗಿ ನಿಂತು ೧೧ ದಿನ ಯುದ್ಧ ಮಾಡುವ ಸಂದರ್ಭದಲ್ಲಿ ಮೈಸೂರಿನ ಸೇನೆಯು ಸೇರಿಕೊಂಡು ಆತನನ್ನು ಸೋಲಿಸಿ ಹಿಂದೆ ಸರಿಸಿತು.[೨೮]

ಹೈದರ್‌ನಾಮ ಕೃತಿಯು ಶಾಲಿವಾಹನಶಕ ೧೬೯೩ ಖರನಾಮ ಸಂವತ್ಸರದ ವೈಶಾಖದಲ್ಲಿ ಕೊಡಗಿನ ಹಾಲೇರಿ ವಂಶದ ದರ್ಬಾರಿಗೆ ಹೈದರನ ನಿಯೋಗಿಯಾಗಿ ಪ್ರಧಾನ ವೆಂಕಪ್ಪಯ್ಯನವರು ಹೋಗಿದ್ದನ್ನು ದಾಖಲಿಸುತ್ತದೆ.[೨೯] ಇದು ೧೭೭೧ರ ಮಾರ್ಚ್ ತಿಂಗಳಿಗೆ ಸರಿಹೊಂದುತ್ತದೆ. ಪ್ರಧಾನ ವೆಂಕಪ್ಪಯ್ಯನವರು, ೧೭೭೧ರಲ್ಲಿ ಕೊಡಗಿನ ಸಂಸ್ಥಾನದ ಹೈದರನ ನಿಯೋಗದ ಮುಖ್ಯಸ್ಥರಾಗಿ ಮೈಸೂರು ಸಂಸ್ಥಾನವು ಎದುರಿಸುತ್ತಿದ್ದ ಬರದಿಂದ ತಪ್ಪಿಸಿಕೊಳ್ಳಲು ಅವರಿಂದ ಅಕ್ಕಿ, ತುಪ್ಪ ಮುಂತಾದ ದವಸಗಳನ್ನು ಕಳುಹಿಸಿಕೊಡುವಂತೆ ನಿವೇದಿಸಿಕೊಂಡರು. ಆದರೆ, ಪ್ರಧಾನರಿಗೆ ನಿವೇದಿಸಿಕೊಂಡಂತೆ ಅಥವಾ ಮಾತು ಕೊಟ್ಟಂತೆ ಅನಂತರ ಹಾಲೇರಿಯ ಮನೆತನದವರು ನೆರವೇರಿಸಲಿಲ್ಲ. ಅದು ಮಡಕೇರಿಯ ಮೇಲಿನ ದಾಳಿಗೆ ದಾರಿ ಮಾಡಿಕೊಟ್ಟಿತು.[೩೦] ಈ ಘಟನೆಯನ್ನು ಉಲ್ಲೇಖಿಸುತ್ತ ಹಯವದನರಾಯರು ಪ್ರಧಾನ ವೆಂಕಪ್ಪಯ್ಯನವರು ೧೭೭೧ರ ಮೇ ತಿಂಗಳಿನಲ್ಲಿ ಹಾಲೇರಿ ದರ್ಬಾರಿಗೆ ನಿಯೋಗದ ಮುಖ್ಯಸ್ಥರಾಗಿ ತೆರಳಿದ್ದರೆಂದು ದಾಖಲಿಸುತ್ತಾರೆ.[೩೧]

ಕೊಡಗಿನ ಹಾಲೇರಿ ರಾಜವಂಶವು ಕೃತಿಯ ಮೊದಲನೇ ಸಂಪುಟದಲ್ಲಿ ಹೈದರ್‌ನಾಮೆ ದಾಖಲಿಸುವ ನಿಯೋಗದ ಭೇಟಿಯ ವಿಷಯವನ್ನು

ದಾಖಲಿಸುವುದಿಲ್ಲ.[೩೨] ಆದರೆ ಕ್ರಿ.ಶ. ೧೭೭೩-೭೪ರ ಅವಧಿಯಲ್ಲಿ ಕೊಡಗಿನಲ್ಲಿ ಕ್ಷಾಮ ಉಂಟಾಗಿದ್ದನ್ನು ದಾಖಲಿಸುತ್ತದೆ. ಈ ಅವಧಿಯಲ್ಲಿ ಕೊಡಗನ್ನು ಆಳುತ್ತಿದ್ದವರು ಒಂದನೇ ಲಿಂಗರಾಜೇಂದ್ರ ಒಡೆಯ. ಈತನು ಕ್ರಿ.ಶ. ೧೭೭೪ರಿಂದ ೧೭೭೯ರವರೆಗೆ ಆಳ್ವಿಕೆ ನಡೆಸಿದನು. ಇವನ ಪೂರ್ವದಲ್ಲಿ ದೇವಪ್ಪರಾಜ ೧೭೭೦ರಿಂದ ೧೭೭೪ರವರೆಗೆ ಕೊಡಗನ್ನು ಆಳಿದರು. ಅಲ್ಲದೆ ದೇವಪ್ಪರಾಜನ ಆಳ್ವಿಕೆಯ ಕಾಲದಲ್ಲಿ ಮರಾಠ ನಾಯಕ ತ್ರಯಂಬಕ ರಾವ್‌ನಿಗೆ ಹೈದರನು ಸೋತದ್ದನ್ನು ತ್ರಯಂಬಕ ರಾವ್‌ನ ಸೈನ್ಯ ಮೈಸೂರು ಸೀಮೆಯಲ್ಲಿ ನಡೆಸಿದ ದಾಂಧಲೆಯನ್ನು ಕೊಡಗಿನ ಹಾಲೇರಿ ರಾಜವಂಶ ಕೃತಿ ಉಲ್ಲೇಖಿಸುತ್ತದೆ. ಅಲ್ಲದೆ ಹೈದರಾಲಿಯು ಕೊಡಗಿನ ಮೇಲೆ ದಾಳಿ ಮಾಡಿ ದೇವಪ್ಪನನ್ನು ಸೋಲಿಸಿದ್ದನ್ನು ಸಹ ಅದೇ ಕೃತಿ ದಾಖಲಿಸುತ್ತದೆ. ಸೋತ ದೇವಪ್ಪರಾಜನು ವೈನಾಡಿನಲ್ಲಿ ಆಶ್ರಯ ಪಡೆದನು. ಅವನ ಕುಟುಂಬಸ್ಥರನ್ನು ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಸ್ಥಳಾಂತರಿಸಿ ಸೆರೆಯಲ್ಲಿಡಲಾಯಿತು. ವೈನಾಡಿನಿಂದ ಮರಾಠ ರಾಜ್ಯಕ್ಕೆ ತಲೆಮರೆಸಿಕೊಳ್ಳಲು ಓಡಿಹೋಗುತ್ತಿದ್ದ ದೇವಪ್ಪ ರಾಜನನ್ನು ತುಂಗಾ ನದಿ ತೀರದ ಹರಿಹರದಲ್ಲಿ ಹೈದರನ ಸೇನೆ ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಸ್ಥಳಾಂತರಿಸಿತು. ಆನಂತರ ದೇವಪ್ಪರಾಜನನ್ನು ಆತನ ವಂಶಸ್ಥರನ್ನೆಲ್ಲ ಶ್ರೀರಂಗಪಟ್ಟಣದಲ್ಲಿ ಕೊಲ್ಲಲಾಯಿತು.[೩೩]

ಹೈದರಾಲಿಯು ರಘೋಬನು ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡುವುದನ್ನು ಅರಿತು ಪ್ರಧಾನ ವೆಂಕಪ್ಪಯ್ಯನವರನ್ನು ಅಪ್ಪಾಜಿರಾಮರಾಯ ಮೊದಲಾದವರನ್ನು ರಘೋಬನ ಆಸ್ಥಾನಕ್ಕೆ ಸಂಧಿ ಮಾಡಿಕೊಳ್ಳಲು ಪೂನಾಗೆ ಕಳುಹಿಸಿದನೆಂದು ತಿಳಿದುಬರುತ್ತದೆ. ಅದರಲ್ಲಿ ನಿಯೋಗವು ಯಶಸ್ವಿಯಾಗಿ ರಘೋಬನಿಂದ ಕೃಷ್ಣಾನದಿಯ ಪರ್ಯಂತದವರೆಗೆ ಮೈಸೂರು ಸಂಸ್ಥಾನವು ಅಧಿಕಾರ ಹೊಂದಿರುತ್ತದೆ ಎಂಬ ಫರ್ಮಾನು ಪಡೆದು ಸಿರಾದಲ್ಲಿ ಮರಾಠ ಪ್ರತಿನಿಧಿಯಾಗಿದ್ದ ಭಾಮಾಜಿ ಸಿಂಧ್ಯನಿಗೆ ಒಪ್ಪಿಸಿದರೂ ಆತನು ರಘೋಬನ ಪತ್ರಕ್ಕೆ ಮನ್ನಣೆಯನ್ನು ನೀಡದೆ ತಿರಸ್ಕರಿಸಿದನು. ಇದರಿಂದ ಮೈಸೂರು ಸೈನ್ಯ ಸಿರಾ. ಮದ್ದಗಿರಿ ಮುಂತಾದ ಪ್ರದೇಶಗಳಿಗೆ ಧಾಳಿ ಮಾಡಿ ಅವುಗಳನ್ನು ಗೆದ್ದುಕೊಂಡು ಭಾಮಾಜಿ ಸಿಂಧ್ಯನನ್ನು ಸೋಲಿಸಿ ಸೆರೆಹಿಡಿದು ಆತನನ್ನು ಶ್ರೀರಂಗಪಟ್ಟಣದ ಸೆರೆಮನೆಗೆ ಕಳುಹಿಸಲಾಯಿತು.[೩೪]

ಹೈದರ್‌ನಾಮೆ ಹಸ್ತಪ್ರತಿಯು ಈ ಘಟನೆಯನ್ನು ಸ್ವಲ್ಪ ಭಿನ್ನವಾಗಿ ದಾಖಲಿಸುತ್ತದೆ. ಶಾಲಿವಾಹನ ಶಕ ೧೬೯೬ನೆಯ ಜಯಸಂವತ್ಸರದ ಚೈತ್ರ ಮಾಸದಲ್ಲಿ (ಸಾ.ಶ. ೧೭೭೪ ಮಾರ್ಚ ೧೨ರಿಂದ ಏಪ್ರಿಲ್ ೧೦) ಪ್ರಧಾನ ವೆಂಕಪ್ಪಯ್ಯನವರು ಹರೆಕಾರ ನರಸಪ್ಪನಾಯಕ ಅಪ್ಪಾಜಿರಾಮ ಮುಂತಾದ ನಿಯೋಗಿಗಳನ್ನು ಒಳಗೊಂಡ ನಿಯೋಗವನ್ನು ಸಂಧಾನಕ್ಕಾಗಿ ಸೊಂಡೂರಿನಲ್ಲಿ ಠಾಣೆ ಹಾಕಿದ್ದ ರಘೋಬನನ್ನು ಭೇಟಿಯಾಗಿ, ಅವನಿಂದ ಮೈಸೂರು ಸಂಸ್ಥಾನದ

ಪ್ರದೇಶಗಳನ್ನು ಪಡೆಯುವ ಪ್ರಯತ್ನ ಮಾಡಲು ಹೈದರಾಲಿಯು ಕಳುಹಿಸಿಕೊಟ್ಟನು. ಅದೇ ಸಮಯದಲ್ಲಿ ಮರಾಠ ಸರದಾರರಲ್ಲಿ ವಿಭಜನೆಯಾಗಿ ಪುಣೆಯಲ್ಲಿ ನಾರಾಯಣನ ವಿಧವಾ ಪತ್ನಿ ಗಂಡು ಮಗುವಿಗೆ ಜನ್ಮನೀಡಿದ್ದ ವಿಷಯ ತಿಳಿದುಬಂದು ಮುಂದೆ ಮೈಸೂರಿನ ಸಹಾಯ ಬೇಕಾಗಬಹುದಾದ ಸಂದರ್ಭ ಎದುರಾಗಿದ್ದರಿಂದ ರಘೋಬನು ಕೃಷ್ಣಾನದಿಯ ಪರ್ಯಂತ ಕರ್ನಾಟಕ ಪ್ರದೇಶದ ಮೇಲೆ ಮೈಸೂರು ಸಂಸ್ಥಾನದ ಅಧಿಕಾರವನ್ನು ಖಾತರಿಪಡಿಸಿ ಫರ್ಮಾನು ನೀಡಿ ಸಂಧಾನಕಾರರಿಗೆ ಸನ್ಮಾನ ಮತ್ತು ಖಿಲ್ಲತ್ತುಗಳ ಸಮೇತ ಮರ್ಯಾದೆ ಮಾಡಿ ಗೌರವಪೂರ್ವಕವಾಗಿ ಕಳುಹಿಸಿ ರಘೋಬನು ಗುತ್ತಿ ಪಂಡರಾಪುರ ಮಾರ್ಗವಾಗಿ ಮುಂಬೈ ತಲುಪಿದನು.[೩೫] ಹಯವದನರಾಯರು ಪ್ರಧಾನ ವೆಂಕಪ್ಪಯ್ಯನವರು ೧೭೭೪ರ ಏಪ್ರಿಲ್‌ನಲ್ಲಿ ರಘೋಬನ ಆಸ್ಥಾನಕ್ಕೆ ಹೈದರಾಲಿಯ ನಿಯೋಗದ ಮುಖ್ಯಸ್ಥರಾಗಿ ತೆರಳಿದ್ದರೆಂದು ಈ ಭೇಟಿ ಪೂನಾದಲ್ಲಿ ಜರುಗಿತೆಂದು ದಾಖಲಿಸುತ್ತಾರೆ.[೩೬] ಆದರೆ ಅದು ನೆರವೇರಿದುದು ಸೊಂಡೂರಿನಲ್ಲಿ.

ಎರಡನೇ ಕೃಷ್ಣರಾಜರ ಮಗ ನಂಜನು ಗತಿಸಿದ್ದರಿಂದ ಅವನ ಮಲತಾಯಿಯ ಮಗ ಚಾಮರಾಜ ಒಡೆಯರಿಗೆ ನವಾಬ್ ಹೈದರಾಲಿ ಖಾನ್ ಪಟ್ಟಾಭಿಷೇಕ ಮಾಡಿಸಿ ಅವರ ದಿವಾನರಾಗಿ ಪ್ರಧಾನ ವೆಂಕಪ್ಪಯ್ಯನವರು ಕಾರ್ಯನಿರ್ವಹಿಸಿದಂತೆ ವಂಶಾವಳಿ ದಾಖಲಿಸುತ್ತದೆ.[೩೭] ಶಾಲಿವಾಹನ ಶಕೆ ೧೬೯೪ಳ ನಂದನ ಸಂವತ್ಸರದ ಆಶ್ವೀಜ, ಕಾರ್ತೀಕ ಮಾಸದಲ್ಲಿ (ಸಾ.ಶ. ೧೭೭೨ರ ಸೆಪ್ಟಂಬರ್ ೨೫ರಿಂದ ೨೬ ಅಕ್ಟೋಬರ್) ಮಹಾಲತ ಕಛೇರಿಗೆ ದಿವಾನರಾಗಿ ಪ್ರಧಾನ ವೆಂಕಪ್ಪಯ್ಯನವರನ್ನು ನೇಮಕ ಮಾಡಲಾಯಿತು.[೩೮] ಹಯವದನರಾಯ ಮಹಾಲಾತಿ ಕಛೇರಿಯ ದಿವಾನರಾಗಿ ೧೭೭೨ರಲ್ಲಿ ನಿಯೋಜನೆಗೊಂಡಿದುದನ್ನು ದಾಖಲಿಸುತ್ತಾರೆ.[೩೯] ಶಾಲಿವಾಹನ ಶಕೆ ೧೬೯೫ನೆಯ ವಿಜಯ ಸಂವತ್ಸರದ ಜೇಷ್ಠ ಆಷಾಢದಲ್ಲಿ ಅಂದರೆ ೧೭೭೩ರ ಮೇ – ಜುಲೈ ತಿಂಗಳಲ್ಲಿ ಪ್ರಧಾನ ವೆಂಕಪ್ಪಯ್ಯನವರು ನಿರ್ವಹಿಸುತ್ತಿದ್ದ ಮಹಾಲಾತಿ ಕಛೇರಿಗೆ ದಿವಾನಗಿರಿಗೆ ಸಲಾಮತ್‌ಖಾನ ಮತ್ತು ಆತನ ತಮ್ಮ ಮಹಮ್ಮದ್ ಗೌಸರನ್ನು ನೇಮಕ ಮಾಡಿ ಅಧಿಕಾರ ವಹಿಸಿಕೊಡಲಾಯಿತು.[೪೦]

ಶಾಲಿವಾಹನ ಶಕ ೧೬೯೩ನೆಯ ಖರಸಂವತ್ಸರದ ಚೈತ್ರದಲ್ಲಿ (ಸಾ.ಶ. ೧೭೭೧ ಮಾರ್ಚ) ಮೇಲುಕೋಟೆಯ ಬಳಿ ನಡೆದ ಯುದ್ಧದಲ್ಲಿ ಮರಾಠರ ಕೈ ಮೇಲಾಗಿ ಹೈದರ್ ಮತ್ತು ಟಿಪ್ಪು ಬಹಳ ಪ್ರಯಾಸದಿಂದ ಮಾರುವೇಶದಲ್ಲಿ ಶ್ರೀರಂಗಪಟ್ಟಣಕ್ಕೆ ಬಂದು ಸೇರಿದ ಸಂದರ್ಭದಲ್ಲಿ ಪ್ರಧಾನ ವೆಂಕಪ್ಪಯ್ಯನವರು ಟಿಪ್ಪು ಸುಲ್ತಾನನೊಂದಿಗಿದ್ದರೆಂದು ಹೈದರ್‌ನಾಮೆ ದಾಖಲಿಸುತ್ತದೆ.[೪೧] "ಠೀಪು ಸುಲತಾನರು ವೆಂಕಪ್ಪಯ್ಯ ಸಹ ಮತ್ತು ಕೆಲವು ಸರದಾರರು ಸಹ ಪೋಷಾಕೆಲ್ಲ ತೆಗೆದು ಹರಕು ಬಟ್ಟೆಗಳಿಂದ ರೂಪು ಬದಲಾಯಿಶಿ ಪಟ್ಟಣಕ್ಕೆ ಸೇರಿದರು".

ಹಯವದನರಾಯರು[೪೨] ಮೇಲುಕೋಟೆಯ ಈ ಯುದ್ಧ ೧೭೭೧ರ ಏಪ್ರಿಲ್ ತಿಂಗಳಿನಲ್ಲಿ ನೆರವೇರಿತೆಂದು ದಾಖಲಿಸುತ್ತಾರೆ.

ವಿರೋಧಿ ಸಂವತ್ಸರ ಮಾರ್ಗಶಿರ ಪುಷ್ಯ ಮಾಸದಲ್ಲಿ (೧೭೭೨ರ ಏಪ್ರಿಲ್) ನಗರ ಸಂಸ್ಥಾನದ ಪ್ರಧಾನ ವೆಂಕಪ್ಪಯ್ಯನವರು ಹಾಸನದ ಬಳಿ ಹೈದರಾಲಿಯನ್ನು ಸೇರಿಕೊಂಡರು. ಹಾಸನದ ಮಹಾರಾಜನ ದುರ್ಗ, ಬೇಲೂರು, ವಸ್ತಾರೆ ಮುಂತಾದ ಶೀಮೆಯ ಗೌಡರುಗಳು ಹಳೆಯ ಪಾಳೆಯಗಾರರೊಂದಿಗೆ ಸೇರಿ ಸ್ವತಂತ್ರರಾಗಲು ಹವಣಿಸುತ್ತಿದ್ದಾಗ ಅಲ್ಲಿನ ಅಮೀಲ ಕರೂರು ನಂಜಪ್ಪಯ್ಯ ಅದನ್ನು ಹೈದರಾಲಿಗೆ ಅರಿಕೆ ಮಾಡಿದ್ದರಿಂದ ವೆಂಕಪ್ಪಯ್ಯನವರು ತಮ್ಮೊಂದಿಗೆ ೨,೦೦೦ ಕುದುರೆ, ೨,೦೦೦ ಬಾರು ಸೈನಿಕರು, ೨,೦೦೦ ಅಹಷಾಂ, ೬ ತೋಪುಗಳೊಂದಿಗೆ ಸೈನ್ಯವನ್ನು ಕೊಂಡೊಯ್ದು ಅವರನ್ನು ಸದೆಬಡಿದು ಬಂದೋಬಸ್ತು ಮಾಡಿ ಪ್ರಧಾನರು ಶ್ರೀರಂಗಪಟ್ಟಣಕ್ಕೆ ಬಂದು ನವಾಬರನ್ನು ಸೇರಿಕೊಂಡರು.[೪೩]

೧೬೯೬ನೆಯ ಜಯಸಂವತ್ಸರದ (ಸಾ.ಶ. ೧೭೭೪ರ ಜೂರ್ನ್ ಆಗಸ್ಟ್ ೭ರ ನಡುವೆ) ಜೇಷ್ಠ ಆಷಾಢದಲ್ಲಿ ಹೈದರಾಲಿ ಗುರುಮಕೊಂಡ ದೊಡ್ಡಬಳ್ಳಾಪುರ ಗೆದ್ದು ಮದ್ದಗಿರಿ ಚನ್ನರಾಯದುರ್ಗಕ್ಕೆ ಬಂದು ಆ ಕೋಟೆಗಳನ್ನು ಭದ್ರಪಡಿಸಲು ಆಜ್ಞೆ ನೀಡಿ, ಅದನ್ನು ನಿರ್ವಹಿಸುವುದಕ್ಕೆ ಅಧಿಕಾರಿಗಳನ್ನು ನೇಮಕ ಮಾಡಿ ಶಿರ್ಯಾ, ಮದ್ದಗಿರಿ, ಚನ್ನರಾಯದುರ್ಗ ಮೂರು ಗಡಿಗಳ ಮಾಮಿಲೆಯನ್ನು ಪ್ರಧಾನ ವೆಂಕಪ್ಪಯ್ಯನವರಿಗೆ ಒಪ್ಪಿಸಿದರು.[೪೪] ಆನಂತರ ಹಾಗೆಯೇ ಮುಂದುವರಿದ ಪ್ರಧಾನ ವೆಂಕಪ್ಪಯ್ಯನವರು ಹೈದರಾಲಿಯ ಸೈನ್ಯದೊಂದಿಗೆ ಬಳ್ಳಾರಿಯವರೆಗೆ ಮುಂದುವರಿದು ಅದರ ಸಮೀಪ ಕೆಂಚನಗುಡ್ಡದಲ್ಲಿ ಠಾಣೆ ಹಾಕಿ ಪಾಗೊಂಡೆ ಮೇಲೆ ಧಾಳಿ ಮಾಡಿ ಅದನ್ನು ವಶಪಡಿಸಿಕೊಂಡರು.[೪೫]

ಹಯವದನರಾಯರು ೧೭೭೦ರಲ್ಲಿ ಉಜಿನಪ್ಪ ನಗರದ ದಿವಾನಗಿರಿಯನ್ನು ವಹಿಸಿಕೊಂಡನೆಂದು ಅದು ಪ್ರಧಾನರ ಅಧಿಕಾರಾವಧಿಯ ಮುಕ್ತಾಯದ ದಿನಾಂಕವೆಂದು ಗುರುತಿಸುತ್ತಾರೆ.[೪೬] ರಾಜಕೀಯವಾಗಿ ಅನೇಕ ಸಾಧನೆಗಳನ್ನು ಮಾಡಿದ ಪ್ರಧಾನ ವೆಂಕಪ್ಪಯ್ಯನವರು ೧೮ನೆಯ ಶತಮಾನದ ಅತ್ಯಂತ ಶ್ರೇಷ್ಠ ಕನ್ನಡ ಮತ್ತು ಸಂಸ್ಕೃತ ಭಾಷಾ ತಜ್ಞ, ಶ್ರೇಷ್ಠ ಸಾಹಿತಿ ಹಾಗೂ ಅತ್ಯಂತ ನಂಬಿಕಸ್ಥ ರಾಜನೀತಿ ಧುರಂಧರ, ಸೇನಾಧಿಕಾರಿ, ಆಡಳಿತಗಾರ, ಸಂಧಾನಕಾರ ಹಾಗೂ ನಿಸ್ಪೃಹ ರಾಜಕಾರ್ಯ ಧುರೀಣ.

**ಸಾಹಿತ್ಯ ಕೃಷಿ**

ಪ್ರಧಾನ ವೆಂಕಪ್ಪಯ್ಯನವರು 'ವೆಂಕಾಮಾತ್ಯ' ಎಂಬ ಅಂಕಿತದಲ್ಲಿ ಸಾಕಷ್ಟು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಇವರು ಬರೆದಿರುವ ಅಲಂಕಾರ

ಮಣಿದರ್ಪಣವೆಂಬ ಸಂಸ್ಕೃತ ಗ್ರಂಥದ ಈ ಪದ್ಯದಲ್ಲಿ ಸ್ವರಚಿತವಾದ ಕೆಲವು ಗ್ರಂಥಗಳ ಹೆಸರನ್ನು ಹೇಳಿದ್ದಾರೆ.

**ಯೋ ಸೌ ಕಾಮವಿಲಾಸಭಾಣಮಪಿ ವಾ ಮಾಹೇಂದ್ರಕಂ ತಡ್ಡಿಮಂ**
**ವ್ಯಾಯೋಗಂ ಖರದರ್ಪಘಾತನಕಥಂ ಕಾವ್ಯ ಹನೂಮಜ್ಜಯಂ ॥**
**ತತ್ಕುಕ್ಷಿಂಭರಿಭೈಕ್ಷವಪ್ರಹಸನಂ ಕರ್ಣಾಟರಾಮಾಯಣ**
**ಕಿಂಚೇಮಾಂ ಚಿದಭೇದಕಲ್ಪಲತಿಕಾಂ ಕೃತಾವಂ ಬುಧ್ವೇರ್ಗ್ವಿಯತೇ ॥** [೪೭]

ಅವರಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿಶೇಷ ಪಾಂಡಿತ್ಯವಿತ್ತು. ಅವರು ತಾವು ಆಂಜನೇಯನ ವರಪ್ರಸಾದದಿಂದ ಸರಸ ಸಾಹಿತ್ಯ ಸಾಮ್ರಾಜ್ಯನ್ನು ಪಡೆದವನೆಂದೂ, ಚತುರ್ವಿಧ ಕವಿತಾ ವಿಶಾರದನೆಂದೂ ಹೇಳಿಕೊಂಡಿದ್ದಾರೆ. 'ರಾಮಾಭ್ಯುದಯ' ಗ್ರಂಥಾಂತ್ಯದಲ್ಲಿನ ಈ ಗದ್ಯದಲ್ಲಿ ತಮ್ಮ ಬಗ್ಗೆ ಹೀಗೆ ಉಲ್ಲೇಖಿಸಿಕೊಂಡಿದ್ದಾರೆ.

ಇದು ನಿಖಿಲಬೃಂದಾರಕ ಬೃಂದಮಕುಟಮಣಿಗಣ ಪ್ರಭಾಪಟಲನೀರಾಜಿತ

ಶ್ರೀ ರಾಮಚಂದ್ರ ಪಾದಾರವಿಂದ ನಿಷ್ಯಂದಮರಂದಾಸ್ವಾದನ

ತುಂದಿಲೇಂದಿಂದಿರಾಯ ಮಾಣಮಾನಸ ಜಗತ್ಪ್ರಾಣನಂದನ ಕಾರುಣ್ಯ ಕಟಾಕ್ಷಲಬ್ಧ

ಸಾಹಿತ್ಯ ಸಾಮ್ರಾಜ್ಯ ಸರ್ವಂಕಷ ಚತುರ್ವಿಧಕವಿತಾಪರಿಶೀಲನಾತ್ಮ ನಿಷ್ಠಾ ಗರಿಷ್ಠ

ಗಾಂಧರ್ವಕಲಾಧುರಂಧರ ನಿಸ್ಸಹಾಂಯುಪ್ರಬಂಧನಿರ್ವಾಣ ಚಾತುರೀಧುರೀಣೋ

ಪಲಾಲಿತ ಶ್ರೀರಾಮಪುರೀಹಂಪೆಯಾಮಾತೃತನೂಭವ ವೆಂಕಯಾಮಾತ್ಯ ವಿರಚಿತ

ರಮಾಭ್ಯುದಯ ಮಹಾಪ್ರಬಂಧದೊಳ್[೪೮]

ತಮ್ಮ ಮತ್ತೊಂದು ಕೃತಿ 'ರಾಮಾಯಣ' ಗ್ರಂಥಾಂತ್ಯದಲ್ಲಿ ತಮ್ಮ ಸಾಮರ್ಥ್ಯವನ್ನು ಹೀಗೆ ಹೇಳಿಕೊಂಡಿದ್ದಾರೆ.

ಇದು ರಾಮಚಂದ್ರಪಾದಾರವಿಂದ ನಂದನ ಪವನನಂದನ ವರಪ್ರಸಾದಾಸಾದಿತ ಸರಸ ಸಾಹಿತ್ಯ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಕವಿತಾ ಪರಿಶೀಲಾನಾತ್ಮ ನಿಷ್ಠಾಗರಿಷ್ಠ ಗಾಂಧರ್ವಕಳಾ ವಿದವಿದ್ವಜ್ಜ ನೋಪಲಾಲನೀಯಮ ರಾಮಪುರೀ ಹಂಪೆಯಾಮಾತೃತ ನೂಭವ ವೆಂಕಾಹ್ವಯ ವಿರಚಿತ ಮಾದ ಶ್ರೀ ಮದ್ರಾಮಾಯಣ ಮಹಾಪ್ರಬಂಧ.[೪೯]

ರಾಮಾಭ್ಯುದಯ ಕೃತಿಯ ಅಂತ್ಯದಲ್ಲಿ ಸಹ ಕರ್ತೃವಿನ ಗುಣವಿಶೇಷಣಗಳ ಉಲ್ಲೇಖ ಕಂಡುಬರುತ್ತದೆ. ಅದು ಈ ಕೆಳಗಿನಂತಿದೆ.

ಇದು ನಿಖಿಲಬೃಂದಾರಕ ಬೃಂದಮಕುಟಮಣಿ ಗಣಪ್ರಭಾಪಟಲ ನೀರಾಜಿತ ಶ್ರೀರಾಮಚಂದ್ರ ಪಾದಾರವಿಂದ ನಿಷ್ಯಂದಮರಂದಾಸ್ವಾದನತುಂದಿಲೇಂದಿಂದಿರಾಯಮಾಣಮಾನಸ ಜಗತ್ಪ್ರಾಣನಂದನ ಕಾರುಣ್ಯ ಕಟಾಕ್ಷಲಬ್ಧ ಸಾಹಿತ್ಯ ಸಾಮ್ರಾಜ್ಯಸರ್ವಂಕಷ ಚತುರ್ವಿಧಕವಿತಾಪರಿಶೀಲನಾತ್ಮನಿಷ್ಠಾಗರಿಷ್ಠ ಗಾಂಧರ್ವಕಲಾಧುರಂಧರ ನಿಸ್ಸಹಾಯುಕ ಪ್ರಬಂಧನಿರ್ವಾಣ ಚಾತುರೀಧುರೀಣೋಪ ಲಾಲಿತ ಶ್ರೀರಾಮಪುರೀ ಹಂಪೆಯಾಮಾತ್ಯತನೂಭವ ವೆಂಕಯಾಮಾತ್ಯವಿರಚಿತ ರಮಾಭ್ಯುದಯ ಮಹಾಪ್ರಬಂಧದೊಳ್.

'ಸುಧಾಲಹರಿ'ಯೆಂಬ ಚಂಪೂ ಗ್ರಂಥದಲ್ಲಿ ತನ್ನ ವಿಷಯವಾಗಿ ಹೀಗೆ ಹೇಳಿಕೊಂಡಿದ್ದಾರೆ.

**ಯಃ ಶ್ರೀರಾಮಪುರೀವರಾಮೃತಕಲಾಧಿಕ್ಯಾರಿ ಕಾರುಣ್ಯದ್ಯ**

**ಕ್ಷಂಕ್ರಾಂತಾಖಿಲ ಶಾಸ್ತ್ರಭೂಷಣಮಣಿಃ ಸಾಹಿತ್ಯಲೀಲಾಖನಿಃ ॥**[೫೦]

ಪ್ರಧಾನರಾಗಿದ್ದ ವೆಂಕಪ್ಪಯ್ಯನವರು ತಮ್ಮ ಕೃತಿಯಾದ 'ಅಲಂಕಾರ ಮಣಿದರ್ಪಣ'ದಲ್ಲಿ ತಮಗೆ ಷಡ್ದರ್ಶನೀ ವಲ್ಲಭ, ಘಟಿಕಾ ಪ್ರಬಂಧ ರಚನಾ ವಿದಗ್ಧ ಎಂಬ ವಿಶೇಷಣಗಳಿದ್ದವೆಂದು ಹೇಳಿಕೊಂಡಿದ್ದಾರೆ.[೫೧] ವೆಂಕಪ್ಪಯ್ಯನವರದೆಂದು ಹೇಳುವ ಸಂಸ್ಕೃತ ಗ್ರಂಥಗಳು:

೧. ಕಾಮವಿಲಾಸ ಬಾಣ

೨. ಕುವಂಬಕ ಬಾಣ

೩. ಮಹೇಂದ್ರ ವಿಜಯ ಡಿಮಃ

೪. ವೀರ ರಾಘವ ವ್ಯಾಯೋಗ

೫. ಲಕ್ಷ್ಮೀ ಸ್ವಯಂವರ ಸಮವಕಾರ[೫೨] (ವಿಬುಧದಾನವ ಸಮವತಾರ)

೬. ಸೀತಾಕಲ್ಯಾಣ ವಿಧಿ

೭. ರುಕ್ಮಿಣೀ ಮಾಧನಾಂಕ ಸಂಸ್ಕೃತ ನಾಟಕ

೮. ಸುಧಾಝುರಿ– ಗದ್ಯಗ್ರಂಥ –ಎರಡು ತರಂಗಗಳಿದ್ದು ಕಾದಂಬರಿಯನ್ನು ಅನುಕರಿಸುವುದಾಗಿದೆ.

೯. ಕುಶಲವ ಚಂಪೂ– ಗದ್ಯ, ಪದ್ಯ ಮಿಶ್ರಣವಾಗಿ ಚಂಪೂ ರೀತಿಯಲ್ಲಿದೆ.

೧೦. ಅಲಂಕಾರ ಮಣಿದರ್ಪಣ – ಲಕ್ಷಣ ಗ್ರಂಥ

೧೧. ಜಗನ್ನಾಥ ಕಾವ್ಯಂ – ವ್ಯಾಕರಣ ಬೋಧಕ ಗ್ರಂಥ

೧೨. ಊರ್ವಶೀ ಸಾರ್ವಭೌಮ ಈಹಾ ಗೃಹಾಮ್

೧೩. ರಸಿಕರಂಜಿನಿ[೫೩]

೧೪. ಇವರದೇ ಆದ ಶ್ರೀ ಮದ್ರಾಮಪುರಿ ಕರಿಶ್ರೀ ವೆಂಕಟೇಶ್ವರ ಮಹಾತ್ಮ್ಯೆ ಎಂಬ ಗ್ರಂಥದ ತಾಳೆಗರಿಯ ಹಸ್ತಪ್ರತಿಯು ಮೈಸೂರಿನ ಪ್ರಾಚ್ಯ ವಿದ್ಯಾಸಂಸ್ಥೆಯಲ್ಲಿ ಸಂರಕ್ಷಿಸಲ್ಪಟ್ಟಿದೆ. ಅದರ ಯಥಾಪ್ರತಿಯೂ ಪ್ರಕಟವಾಗಿದೆ. ವೆಂಕಮಾತ್ಯನದೆಂದು ತಿಳಿದು ಬರುವ ಇತರ ಕೃತಿಗಳಲ್ಲಿ ಕಂಡುಬರುವ ವೈಯಕ್ತಿಕ ವಿವರಗಳು ಇಲ್ಲಿಯೂ ಉಲ್ಲೇಖವಾಗಿವೆ. ಹಾಗಾಗಿ, ಇದನ್ನು ವೆಂಕಾಮಾತ್ಯ ಅಥವಾ ಪ್ರಧಾನ ವೆಂಕಪ್ಪಯ್ಯನವರದೆಂದು ಗುರುತಿಸಬಹುದು.[೫೪]

೧೫. ಹನುಮತ್ ಶತಕ (ಉಪಲಬ್ಧವಿಲ್ಲ)

೧೬. ಸೂರ್ಯ ಶತಕ (ಉಪಲಬ್ಧವಿಲ್ಲ)

**ಕನ್ನಡ ಗ್ರಂಥಗಳು:**

೧. ಕರ್ನಾಟ ರಾಮಾಯಣ*: ವಾರ್ಧಕ ಷಟ್ಪದಿಯಲ್ಲಿದೆ. ವಾಲ್ಮೀಕಿ ರಾಮಾಯಣದ ಕಥೆಯನ್ನೇ ಯಥಾವತ್ತಾಗಿ ಕನ್ನಡಕ್ಕೆ ಕಾವ್ಯರೂಪದಲ್ಲಿ ಪರಿವರ್ತಿಸಿದೆ.

೨. ಇಂದಿರಾಭ್ಯುದಯ ಅಥವಾ ರಾಮಾಭ್ಯುದಯ ಚಂಪೂ ಕಾವ್ಯ, ಇದರಲ್ಲಿ ಲಕ್ಷ್ಮೀದೇವಿಯ ಅವತಾರಾದಿ ವಿಷಯಗಳಿವೆ.

೩. ಹನುಮದ್ವಿಲಾಸ ಷಟ್ಪದಿಯಲ್ಲಿ ರಚಿತವಾಗಿರುವಂತೆ ತಿಳಿಯುತ್ತದೆ.

**ಧರ್ಮಕಾರ್ಯಗಳು**

ಪ್ರಧಾನ ವೆಂಕಪ್ಪಯ್ಯನವರು ಕಾರ್ಯನಿರ್ವಹಿಸಿದ ಶ್ರೀರಂಗಪಟ್ಟಣ ಮತ್ತು ನಗರದ ಸೀಮೆಯಲ್ಲಿ ಹಲವಾರು ಬಗೆಯ ಧರ್ಮ ಕಾರ್ಯಗಳನ್ನು ಕೈಗೊಂಡಿದ್ದಾರೆ. ಆಂಜನೇಯ ಸ್ವಾಮಿಯ ಹಲವಾರು ದೇವಾಲಯಗಳ ಪ್ರತಿಷ್ಠಾಪನೆ, ಅಗ್ರಹಾರಗಳ ರಚನೆ, ಈಶ್ವರ ಲಿಂಗದ ಸಂಸ್ಥಾಪನೆ, ವೈದಿಕರಿಗೆ ದಾನ–ಧರ್ಮಗಳನ್ನು ನೀಡಿರುವುದಲ್ಲದೆ ಹಲವಾರು ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.[೫೫]

---

* ಇದರ ಕೊನೆಯ ಭಾಗವಾದ 'ಯುದ್ಧಕಾಂಡವನ್ನು' ಇಷ್ಟರಲ್ಲೇ ಬಿ.ಎಂ.ಶ್ರೀ ಪ್ರತಿಷ್ಠಾನವು ಪ್ರಕಟಿಸುತ್ತಿದೆ.

ಮೈಸೂರು ಸಂಸ್ಥಾನದ ರಾಜಧಾನಿ ಶ್ರೀರಂಗಪಟ್ಟಣದ ಕೋಟೆ ವೆಂಕಟರಮಣ ಸ್ವಾಮಿ ದೇವಾಲಯದ ಆವರಣದಲ್ಲಿ ಆಂಜನೇಯ ಸ್ವಾಮಿಯ ವಿಗ್ರಹ ಪ್ರತಿಷ್ಠಾಪಿಸಿ, ಅಲ್ಲಿ ಪೂಜೆ ಪುನಸ್ಕಾರಗಳು ಸಾಂಗವಾಗಿ ನೆರವೇರಲು ಸಾಕಷ್ಟು ದತ್ತಿಯನ್ನು ನೀಡಿರುತ್ತಾರೆ.

ಮೈಸೂರು ಸಂಸ್ಥಾನದ ದ್ವಿತೀಯ ರಾಜಧಾನಿಯಾಗಿದ್ದ ನಗರದ ಗುಡ್ಡದ ಮೇಲೆ ತಮ್ಮ ಕುಲದೇವರಾದ ವೆಂಕಟರಮಣಸ್ವಾಮಿ ಮತ್ತು ಪಂಚಮುಖೀ ಆಂಜನೇಯ ಸ್ವಾಮಿಯ ದೇವಾಲಯವನ್ನು ನಿರ್ಮಿಸಿರುತ್ತಾರೆ.

ಸೋಂದೆಯಲ್ಲಿ (ಸೌಂದೆ) ಸಹ ವೆಂಕಟರಮಣ, ಆಂಜನೇಯ ಹಾಗೂ ಒಂದು ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಿ, ಅದಕ್ಕೆ ದೇವಾಲಯವನ್ನು ನಿರ್ಮಿಸಿ ಧರ್ಮಕಾರ್ಯ ಮತ್ತು ಪೂಜಾಕಾರ್ಯಗಳು ನಿರಂತರವಾಗಿ ನಡೆಯಲು ಸಹಾಯಕವಾಗುವಂತೆ ದಾನದತ್ತಿಗಳನ್ನು ನೀಡಿರುತ್ತಾರೆ.

ತುಮಕೂರು ತಾಲೂಕಿನ ಶೆಟ್ಟಿಹಳ್ಳಿ ಗ್ರಾಮದ ಆಂಜನೇಯ ಸ್ವಾಮಿ ದೇವಾಲಯವನ್ನು ಅಪಾರವಾದ ದ್ರವ್ಯವ್ಯಯ ಮಾಡಿ ಜೀರ್ಣೋದ್ಧಾರಗೊಳಿಸಿರುತ್ತಾರೆ.

ತಮ್ಮ ವಂಶಜರ ಮೂಲಗ್ರಾಮವಾದ ತುಮಕೂರು ಜಿಲ್ಲೆ, ಕೊರಟಗೆರೆ ತಾಲೂಕಿನ 'ಅಕ್ಕಿರಾಮಪುರ'ದ ವೆಂಕಟರಮಣ ದೇವಾಲಯವನ್ನು ಪುನರ್ನಿರ್ಮಿಸಿ, ಅದರ ಸುಸ್ಥಿತಿ ಕಾಪಾಡಲು ಮತ್ತು ಪೂಜಾ ಕೈಂಕರ್ಯಗಳಿಗೆ ಅಪಾರವಾದ ದಾನದತ್ತಿಗಳನ್ನು ಇತ್ತಿದ್ದಾರೆ.

ತುಮಕೂರು ತಾಲ್ಲೂಕು ಬೆಳಧರದ ಸಮೀಪದ ಕಾಮಾಕ್ಷಮ್ಮನ ಅಗ್ರಹಾರದಲ್ಲಿ ಕಾಶಿವಿಶ್ವೇಶ್ವರ ದೇವಾಲಯವನ್ನು ನಿರ್ಮಿಸಿ, ಅಲ್ಲಿನ ಧರ್ಮ ಕಾರ್ಯಗಳು, ಪೂಜೆ ಪುನಸ್ಕಾರಗಳು ಸತತವಾಗಿ ಮುಂದುವರಿಯಲು ದಾನ ಧರ್ಮಗಳನ್ನು ನೀಡಿರುತ್ತಾರೆ.

ತುಮಕೂರು ಜಿಲ್ಲೆ ಕೊರಟಗೆರೆಯ ಶ್ರೀ ಗಂಗಾಧರೇಶ್ವರ ಸ್ವಾಮಿ ಬೆಟ್ಟದ ತಪ್ಪಲಿನಲ್ಲಿ ತಮ್ಮ ಗುರುಗಳಾದ ಹುಚ್ಚಾವಧೂತರ ಬೃಂದಾವನವನ್ನು ನಿರ್ಮಿಸಿರುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಕೋಟೇಶ್ವರ ದೇವಾಲಯ, ಕೊಲ್ಲೂರು ಮೂಕಾಂಬಿಕಾ ದೇವಾಲಯಗಳನ್ನು ತಮ್ಮ ಶಕ್ತ್ಯನುಸಾರ ಪುನರುಜ್ಜೀವನಗೊಳಿಸಿ ದಾನಗಳನ್ನು ಬಿಟ್ಟಿರುತ್ತಾರೆ.

ನಗರ ತಾಲೂಕಿನ ಹೋಬಳಿ ಕೇಂದ್ರವಾಗಿರುವ ಲಕ್ಷ್ಮೀಪುರವನ್ನು ಅಗ್ರಹಾರವಾಗಿ ಪರಿವರ್ತಿಸಿ, ಹಲವಾರು ಬ್ರಾಹ್ಮಣರಿಗೆ ದಾನ ಕೊಟ್ಟಿದ್ದು ತಿಳಿದುಬರುತ್ತದೆ.

ಸಾ.ಶ. ೧೭೮೦ ರಲ್ಲಿ ಮಧುಗಿರಿಯ, ರಾಘವೇಂದ್ರ ಯತಿಗಳ ಮಠದ ಆವರಣದಲ್ಲಿ ಆಂಜನೇಯ ಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ.[೫೬]

ಗೌರಿಬಿದನೂರು ತಾಲೂಕು ನಗರಗೆರೆ ಬಳಿ ಮಲ್ಲೇನಹಳ್ಳಿ ಗ್ರಾಮವನ್ನು ಬಡಗನಾಡು ವೈಷ್ಣವ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟಿರುತ್ತಾರೆ.

ಮಧುಗಿರಿ ತಾಲ್ಲೂಕು ಕಡಗತ್ತೂರಿನ ಶಾಂಡಿಲ್ಯಸ ಗೋತ್ರದ ವೈಷ್ಣವ ಬಡಗನಾಡು ವಿದ್ವಾಂಸರಾದ ರಾಮಾಚಾರ್ಯರವರಿಗೆ ದೊಡ್ಡ ಮಾಲ್ಲೂರು ಕೊಡ್ಡಾಪುರದ ಬಳಿಯ ಭೂಮಿಯನ್ನು ದಾನವಾಗಿ ಕೊಟ್ಟಿರುತ್ತಾರೆ.

**ಅಂತ್ಯದ ದಿನಗಳು**

ಸುದೀರ್ಘ ೧೧ ವರ್ಷಗಳ ಸಾರ್ಥಕ ಸೇವೆಯಲ್ಲಿ ಪ್ರಧಾನರು ಹೈದರಾಲಿಯ ಪೂರ್ಣ ವಿಶ್ವಾಸ ಪಡೆಯವಲ್ಲಿ ಸಫಲರಾಗಲಿಲ್ಲ. ಪ್ರಧಾನ ವೆಂಕಪ್ಪಯ್ಯನವರು ತಮಗೆ ಸಿರಾ, ಮಧುಗಿರಿ ಮತ್ತು ಚನ್ನರಾಯ ದುರ್ಗಗಳ ಪ್ರಧಾನತ್ವ ಬಂದ ಮೇಲೆ ತಮ್ಮ ಸೋದರ ವೆಂಕಟೇಶಯ್ಯನವರ ಅಳಿಯ ಹಾಗೂ ತಮ್ಮ ಅಳಿಯನ ತಮ್ಮನಾಗಿದ್ದ ರಘುಪತಯ್ಯನವರನ್ನು ಸಿರಾದ ಪ್ರಧಾನರಾಗಿ ನೇಮಕ ಮಾಡಿದರು. ಶುಕ್ಲಪಕ್ಷದ ಚಂದ್ರನಂತೆ ವೆಂಕಪ್ಪಯ್ಯನವರ ಜನಪ್ರಿಯತೆ ದಿನೇ ದಿನೇ ವೃದ್ಧಿಸತೊಡಗಿತು. ಪ್ರಧಾನ ವೆಂಕಪ್ಪಯ್ಯನವರ ಅಂತ್ಯವನ್ನು ಹೈದರ್‌ನಾಮೆ ಹೀಗೆ ದಾಖಲಿಸುತ್ತದೆ.

ಪ್ರಧಾನ ವೆಂಕಪ್ಪಯ್ಯನವರಿಗೆ ಮದ್ದಗಿರಿ ಚಂನರಾಯ ದುರ್ಗ ದೊಡ್ಡಶೀರ್ಯ ಪೆನಗೊಂಡೆ ಕೋಡಿಕೊಂಡೆ ಪಾಗೊಂಡೆ ಸಹಾ ಅಮುಲು ಯುವರ ಹವಾಲಿನಲ್ಲಿ ಮಡಿಕೆ ಶೀರ್ಯದ ಮಾಮಲೆ ಪೂರ್ವಕ್ಕೆ ಮಧ್ವರಾಯ ಕೀನಪ್ಪನವರಲ್ಲಿ ಆರು ಹಣದ ಸಂಬಳಕ್ಕೆ ತಹಶೀಲು ಪ್ಯಾದೆ ಆಗಿಯಿದ್ದ ಶೆರ ಖಾನ ಕರಿನಗೆ ಸಹಾಯಿದ್ದು ಮಧ್ಯೆ ಚಿತ್ರದುರ್ಗಕ್ಕೆ ನವಾಬರು ಮೊಹಿಂ ಹೊಗುತ್ತಾ ಶೀರ್ಯದ ಬಳಿ ನವಾಬರು ಬರುವಾಗ್ಯೆ ಪ್ರಧಾನರ ತಂಮ್ಮ ವೆಂಕಪ್ಪಯ್ಯನವರ ಅಳಿಯ ರಘುಪತ್ಯೆಯ್ಯನ್ನು ಪ್ರಧಾನರ ಹವಾಲಲ್ಲಿಶೀರ್ಯರ ಬದುಕು ಮಾಡುತ್ತ ಯಿದ್ದು ಗರ್ವದಿಂದಾ ನವಾಬರ ಸವಾರಿ ಬರುವಾಗ್ಯೆ ಯಿಸ್ತಕ ಪಾಲುಬಾರದೆ ಮನೇಯಲ್ಲಿ ಪಟ್ಟಾಭಿಷೇಕಾ ಮಾಡುತ್ತಾ ಯಿದ್ದನಾಗಿ ಹಿಡತರಿಶಿ ಮಾನಭಂಗಾ ಮಾಡಿ ಬಾಡೆ ಅಬ್ಬೂ ಯಂಬ ಗ್ರಹಸ್ತನಿಗೆ ಅಮುಲ ಕೊಟ್ಟುಯಿತ್ತಾಗಿ ಸದರಿ ವಿಕಾರಿ ಸಂವತ್ಸರದ ಶ್ರಾವಣದಲ್ಲಿ ವೆಂಕಪ್ಪಯ್ಯನವರ ಪಟ್ಟಕೆ ಕರೆಶಿ ೬೦೦೦೦ ಸಾವಿರ ವರಹಾ ವತ್ತುವಳೀ ಮಾಡಿ ವೆಂಕಪ್ಪಯ್ಯನವರನ ಮಾನಭಂಗಾ ಮಾಡಿ ಪಹರೆ ಹಾಕಿ ಅಮುಲುಗಳನ್ನೆಲ್ಲಾ ಬದಲು ಮಾಡಿಸಿ ಪ್ರಧಾನರೆಂಬ ಹೆಸರು ಯೀ ಖಿಜಮುತ್ತಿಗೆ ದರ್ಮಹಾ ೧೦೦೦ ರೂಪಾಯಿ ಸಹಾ ಮೊಕರೂರು ಮಾಡಿಸ್ತರು.[೫೭]

ಇದೇ ಮಾಹಿತಿಯನ್ನು ವಂಶರತ್ನಾಕರವು ಬೇರೆ ರೀತಿ ದಾಖಲಿಸುತ್ತದೆ.

ಸೀರ್ಯದ ಅಧಿಕಾರ ಮಾಡುತ್ತಿದ್ದ ಪ್ರಧಾನ ವೆಂಕಪ್ಪಯ್ಯನ ಅಳಿಯನಾದ ರಘುಪತಯ್ಯನು ನವಾಬರು ಬರುವಾಗ್ಯೆ ಇಸ್ತಕಪಾಲಿ ಬಾರದೆ ಇದ್ದುದರಿಂದಲೂ, ವೆಂಕಪ್ಪಯ್ಯನ ಮೇಲೆ ಪೂರ್ವದಿಂದಲೂ ಅಸೂಯೆ ಇದ್ದುದ್ದರಿಂದಲೂ, ನವಾಬರು ರಘುಪತಯ್ಯನಿಗೆ ಸೀರ್ಯದ ಅಧಿಕಾರವನ್ನು ತೆಗೆದು, ವೆಂಕಪ್ಪಯ್ಯನ ಕೈಯಲ್ಲಿ ೬೦ ಸಾವಿರ ವರಹಗಳನ್ನು ದಂಡ ತೆಗೆದುಕೊಂಡು ಅವನಿಗೆ ಇದ್ದ ದರಮಾಹೆ ಸಾವಿರ ರೂಪಾಯಿಯನ್ನು ಮಿನಾಹಿ ಮಾಡಿಸಿ, ಅವರ ಕಡೇ ಜನಗಳ ಅಧಿಕಾರವನ್ನು ತೆಗೆದು, ಪ್ರಧಾನರೆಂಬ ಹೆಸರನ್ನು ಬಿಡಿಸಿ, ಆ ಅಧಿಕಾರವನ್ನೇ ಮೋಕೂಫ್ ಮಾಡಿದರು.[೫೮]

ಇದೇ ಮಾಹಿತಿಯನ್ನು ಶ್ರೀಮನ್ಮಹಾರಾಜರ ವಂಶಾವಳಿ ಕೂಡ ಇದೇ ಧ್ವನಿಯಲ್ಲಿ ದಾಖಲಿಸುತ್ತದೆ.[೫೯] ಹೈದರಾಲಿಯು ಚಿತ್ರದುರ್ಗದ ಮೇಲೆ ದಾಳಿ ಮಾಡುವ ಸಲುವಾಗಿ ಸಿರಾ ಮಾರ್ಗವಾಗಿ ಮುಂದುವರೆಯುತ್ತಿದ್ದಾಗ, ಸಿರಾದ ಪ್ರಧಾನರಾದ ರಘುಪತಯ್ಯನವರು ಸರ್ವಾಧಿಕಾರಿಯನ್ನು ಸಿರಾದ ಸೀಮೆಯಲ್ಲಿ ಎದುರುಗೊಂಡು ಸೂಕ್ತ ರೀತಿಯಲ್ಲಿ ಗೌರವಿಸಲಿಲ್ಲವೆಂದೂ ಗಡಿಯ ಅಂತ್ಯದವರೆಗೆ ಪ್ರಧಾನ ತನ್ನೊಂದಿಗೆ ಬರಲಿಲ್ಲವೆಂದೂ ಕುಪಿತನಾದ ಹೈದರನು ಆತನನ್ನು ಪ್ರಧಾನ ಪದವಿಯಿಂದ ಕೆಳಗಿಳಿಸಿದ. ರಘುಪತಯ್ಯನ ಸ್ಥಾನಕ್ಕೆ ಖಾಜಿ ಅಬ್ದುಲ್ಲಾನನ್ನು ನೇಮಕ ಮಾಡಿದನು. ಈ ಘಟನೆಯಿಂದಲೇ ಹೈದರಾಲಿ ಮತ್ತು ಪ್ರಧಾನ ವೆಂಕಪ್ಪಯ್ಯನವರ ಸಂಬಂಧ ಬಿರುಕು ಬಿಡಲಾರಂಭಿಸಿದಂತೆ ಕಂಡುಬರುತ್ತದೆ. ಹೈದರನು ಆ ಬಳಿಕ ಪ್ರಧಾನರನ್ನು ಅನುಮಾನದಿಂದ ನೋಡಲಾರಂಭಿಸಿದನು. ಇದರ ಫಲವಾಗಿ ೧೭೬೯ರಲ್ಲಿ ನಗರದ ಪ್ರಧಾನರನ್ನು ಆ ಪದವಿಯಿಂದ ನಿವೃತ್ತಿಗೊಳಿಸಿದನು.

ಹೈದರಾಲಿಯು ಹಣ ಹಾಗೂ ಅಧಿಕಾರ ದುರುಪಯೋಗದ ಆರೋಪದ ಮೇಲೆ ವೆಂಕಪ್ಪಯ್ಯನವರಿಂದ ೬೦,೦೦೦/- ವರಹಗಳನ್ನು ಬಲವಂತವಾಗಿ ದಂಡ ಕಟ್ಟಿಸಿಕೊಂಡ. ಬಳಿಕ ಅವರನ್ನು ಶ್ರೀರಂಗಪಟ್ಟಣಕ್ಕೆ ಕರೆಸಿಕೊಂಡು ಸಾರ್ವಜನಿಕವಾಗಿ ಅವಮಾನ ಮಾಡಿ ಸೆರೆಗೆ ಕಳಿಸಿದನು. ಸರಕಾರಕ್ಕೆ ಬರಬೇಕಾಗಿದ್ದ ಕಂದಾಯವನ್ನು ಸರಿಯಾಗಿ ಸಲ್ಲಿಸಲಿಲ್ಲ ಎಂಬ ಆರೋಪದ ಮೇಲೆ ಈ ಶಿಕ್ಷೆ ನೀಡಲಾಯಿತು.

ಅಪ್ಪಾಜಿರಾವ್ ಪ್ರಧಾನರ ಪರವಾಗಿ ಮಧ್ಯ ಪ್ರವೇಶಿಸಿ ಹೈದರನ ಮನವೊಲಿಸಿದನು. ಹೈದರನು ಪ್ರಧಾನ ವೆಂಕಪ್ಪಯ್ಯನವರನ್ನು ಸೆರೆಯಿಂದ ಬಿಡಿಸಿ, ಅವರ ಎಲ್ಲ ಸೊತ್ತುಗಳನ್ನು ಸರ್ಕಾರದ ಖಜಾನೆಗೆ ಸೇರಿಸಿಕೊಂಡು ಒಂದು ಸಾವಿರ ರೂಪಾಯಿ ಮಾಸಾಶನವನ್ನು ನಿಗದಿಗೊಳಿಸಿದನು. ಪ್ರಧಾನ ಪದವಿಯನ್ನು ಕೇವಲ ಬಿರುದಾಗಿ ಹೊಂದಿರಲು ಅವಕಾಶ ಮಾಡಿಕೊಟ್ಟನು. ಜೊತೆಗೆ ಸೈನ್ಯಾಡಳಿತದಲ್ಲಿ ಕಾರ್ಯ ನಿರ್ವಹಿಸುವಂತೆ ಆದೇಶ ನೀಡಿದನು.

ಹೈದರ್‌ನಾಮೆಯಂತೆ, ಯೀ ಶುಭಕೃತ ಸಂವತ್ಸರದಲ್ಲಿ ಅಪ್ಪಾಜಿರಾಮನ ಶಿಪಾರಶಿನಿಂದ್ದಾ ಪಟ್ಣದಿಂದ್ದಾ ಷಹರೆ ಬಿಡಶಿ ಪ್ರಧಾನ ವೆಂಕಪ್ಪಯ್ಯನವರನ ದಂಡಿಗೆ ಕರಶಿಯಿದಾಗಿ ಅವರು ಯೀ ಕಾರ್ತೀಕ ಶುದ್ಧದಲ್ಲಿ ಬಹುಮೂತ್ರ ರೋಗದಿಂದ ದಂಡಿನಲ್ಲಿ ಮೃತವಾದರು. ಈ ಶುಭಕೃತ್ ಸಂವತ್ಸರದ ಕಾರ್ತಿಕ ಶುದ್ಧ ಅವಧಿ ಕ್ರಿ.ಶ. ೧೮೮೨ ರ ನವೆಂಬರ್ ೬ ರಿಂದ ೨೧ ರವರೆಗೆ ಸಲ್ಲುತ್ತದೆ.[೬೦]

ಪ್ರಧಾನ ವೆಂಕಪ್ಪಯ್ಯನವರು ಅರುವೇಳಿ ನಿಯೋಗಿಗಳಾಗಿದ್ದರೆಂದು ಹಯವದನರಾಯರು ಉಲ್ಲೇಖಿಸುತ್ತಾರಾದರೂ ಈ ಮೇಲೆ ದಾಖಲಿಸಿದ ಆಕರಗಳ ಹಿನ್ನೆಲೆಯಲ್ಲಿ ಅವರು ನಗರದ ಮಹಾರಾಣಿ ವೀರಮ್ಮಾಜಿಯ ಬಳಿ ನಿಯೋಗಿಗಳಾಗಿರಲಿಲ್ಲವೆಂದು, ಪ್ರಧಾನರಾಗುವ ಮುಂಚೆ ಅವರು ತಮ್ಮ ವಂಶಪಾರಂಪರ್ಯ ಅಧಿಕಾರದಲ್ಲಿ ಮದ್ಗಿರಿ ಪ್ರದೇಶದ ಗುರಿಕಾರರು ಮತ್ತು ಪಾರುಪತ್ತೆದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದರೆಂದು ಹೈದರ್‌ನಾಮೆ ಸ್ಪಷ್ಟೋಕ್ತಿಯಲ್ಲಿ ದಾಖಲಿಸುವುದರಿಂದ ಹಯವದನರಾಯರ ಅಭಿಪ್ರಾಯವನ್ನು ಅನಿವಾರ್ಯವಾಗಿ ಬದಲಿಸಬೇಕಾಗುತ್ತದೆ. ಪ್ರಧಾನ ವೆಂಕಪ್ಪಯ್ಯನವರ ಪ್ರಾರಂಭಿಕ ಶಿಕ್ಷಣ ಮಧುಗಿರಿ ಮತ್ತು ತುಮಕೂರಿನಲ್ಲಿ ನೆರವೇರಿಸಿ, ಅನಂತರ ಮೈಸೂರಿನಲ್ಲಿ ಶಿಕ್ಷಣವನ್ನು ಪಡೆದು ಅದನ್ನು ಸಾರ್ಥಕಗೊಳಿಸುವ ದಿಸೆಯಲ್ಲಿ ತಮ್ಮ ವಂಶಪಾರಂಪರ್ಯ ವೃತ್ತಿಗೆ ಮದ್ದಗಿರಿಗೆ ಬಂದು ಆಡಳಿತಾತ್ಮಕ ವ್ಯವಸ್ಥೆಗೆ ಇತರರನ್ನು ನೇಮಿಸಿ ಕೆಲಕಾಲ ಇಂದಿನ ತುಮಕೂರಿನ ಶೆಟ್ಟಿಹಳ್ಳಿ ಗೇಟ್ ಸಮೀಪ ಇರುವ ಆಂಜನೇಯನ ದೇವಾಲಯದಲ್ಲಿ ಕೆಲವು ದಿನಗಳು ಹನುಮಂತನನ್ನು ಮತ್ತು ರಾಮದೇವರನ್ನು ಅರ್ಚಿಸಿ, ಅವರನ್ನು ಸುಪ್ರೀತಗೊಳಿಸಿದರೆಂದೂ ಅವರ ಜೀವನಚರಿತ್ರೆ ಖಚಿತವಾಗಿ ದಾಖಲಿಸುತ್ತದೆ. ಹೈದರ್‌ನಾಮೆ ಕೃತಿಯು ಹೇಳುವಂತೆ, ಮಧುಗಿರಿ ಪ್ರದೇಶವನ್ನು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳನ್ನು ಹೈದರಾಲಿಯು ವಶಪಡಿಸಿಕೊಳ್ಳುವ ಕಾಲದಲ್ಲಿ ಗುರಿಕಾರರಾಗಿಯೂ ಮತ್ತು ಪಾರುಪತ್ತೆಗಾರರಾಗಿಯೂ ಪ್ರಧಾನ ವೆಂಕಪ್ಪಯ್ಯನವರು ನಿರ್ವಹಿಸಿದ ಅಪಾರ ಸೇವೆಯನ್ನು ಮನಗಂಡು ಅವರನ್ನು ಆ ಸೀಮೆಯ ಆಡಳಿತಾಧಿಕಾರಿಯಾಗಿ ಹೈದರನು ನೇಮಕ ಮಾಡಿದನು. ಬಿದನೂರಿನ ಆಕ್ರಮಣದ ಅನಂತರ ಬಿದನೂರಿನಲ್ಲಿ ಅವರನ್ನು ದಿವಾನರಾಗಿ ನೇಮಕ ಮಾಡಿದನು. ಇದು ಸಾ.ಶ. ೧೭೬೩ರಲ್ಲಿ ನೆರವೇರಿತು. ಇದಕ್ಕೆ ವಂಶರತ್ನಾಕರ, ವಂಶಾವಳಿ, ಹೈದರ್‌ನಾಮೆ ಖಚಿತ ಆಕರಗಳಾಗಿ ನಿಲ್ಲುತ್ತವೆ. ವಿರೋಧಿಕೃತ್ ನಾಮ ಸಂತ್ಸರದ ಪುಷ್ಯ ಮಾಸದಲ್ಲಿ ಅಂದರೆ, ೧೭೭೦ರ ಜನವರಲ್ಲಿ ಹೈದರನು ಪ್ರಧಾನ ವೆಂಕಪ್ಪಯ್ಯನವರಿಗೆ ಹಾಸನ, ಮಹಾರಾಜನ ದುರ್ಗ, ವಸ್ತಾರೆ, ಬೇಲೂರು ಮತ್ತಿತರ ಪಾಳೆಯಗಾರರನ್ನು ಹತ್ತಿಕ್ಕುವ ಸಲುವಾಗಿ ಸೈನ್ಯಾಧಿಕಾರವನ್ನು ನೀಡಿದನು. ಸಾ.ಶ. ೧೭೭೪ರ ಏಪ್ರಿಲ್ ತಿಂಗಳಲ್ಲಿ ಮರಾಠರು ಮೇಲುಕೋಟೆಯನ್ನು ಮುತ್ತಿದಾಗ, ಹೈದರನ ಮಗನಾದ ಟೀಪುವಿನ

ಸಂಗಡ ಮರಾಠರ ವಿರುದ್ಧ ಸೈನ್ಯ ಕಾರ್ಯಾಚರಣೆಯಲ್ಲಿ ಅವರು ಭಾಗಿಯಾಗಿದ್ದರು. ಯುದ್ಧದಲ್ಲಿ ಮರಾಠರ ಕೈ ಮೇಲಾದಾಗ ಯುವರಾಜ ಟೀಪು ಮರಾಠರಿಗೆ ಸೆರೆ ಸಿಕ್ಕದಂತೆ ಅವನನ್ನು ರಕ್ಷಿಸಿದ್ದು ವೆಂಕಪ್ಪಯ್ಯನವರ ಮತ್ತೊಂದು ಮಹತ್ತ್ವದ ಸಾಧನೆ. ಇದಾದ ಬಳಿಕ ಅದೇ ವರ್ಷ ಅಂದರೆ, ಸಾ.ಶ. ೧೭೭೩ರ ಮೇ ತಿಂಗಳಲ್ಲಿ ವೆಂಕಪ್ಪಯ್ಯನವರನ್ನು ಕೊಡಗಿನ ರಾಜೊಂದಿಗೆ ಸಂಧಾನ ನಡೆಸಲು ಕಳಿಸಲಾಗಿತ್ತು. ಸಾ.ಶ. ೧೭೭೨ರಲ್ಲಿ ಹೈದರನು ಪ್ರಧಾನ ವೆಂಕಪ್ಪಯ್ಯನವರು ಅವರಿಗೆ ಸಲ್ಲಿಸಿದ ಸೇವೆಯಿಂದ ಸಂತುಷ್ಟನಾಗಿ ಅವರನ್ನು ಮಹಾಲಾತಿ ಕಛೇರಿಯ ದಿವಾನರನ್ನಾಗಿ ನೇಮಕ ಮಾಡಿದನು. ಸಾ.ಶ. ೧೭೭೪ರ ಏಪ್ರಿಲ್‌ನಲ್ಲಿ ಹೈದರನು ದಿವಾನರಾದ ಪ್ರಧಾನ ವೆಂಕಪ್ಪಯ್ಯನವರನ್ನು ಮರಾಠ ಪೇಶ್ವೆಯಾದ ರಘುನಾಥರಾಯ ರಘೋಬನ ಆಸ್ಥಾನಕ್ಕೆ ಮೈಸೂರು ಸಂಸ್ಥಾನದ ಸಂಧಾನಕಾರನಾಗಿ ಅಪ್ಪಾಜಿರಾಮ್ ಮತ್ತು ಹರಿಕಾರ ನರಸಪ್ಪ ನಾಯಕರ ಸಂಗಡ ಕಳುಹಿಸಿಕೊಟ್ಟನು. ಅದೇ ವರ್ಷ ಅಕ್ಟೋಬರ್‌ನಲ್ಲಿ ಹೈದರನು ಪ್ರಧಾನ ವೆಂಕಪ್ಪಯ್ಯನವರನ್ನು ಮಧುಗಿರಿ, ಚೆನ್ನರಾಯದುರ್ಗ ಮತ್ತು ಸಿರಾ ಪ್ರದೇಶದ ರಾಜ್ಯಪಾಲರಾಗಿ (ಪ್ರಧಾನರಾಗಿ) ನೇಮಕ ಮಾಡಿದನು.

ಚೊಕ್ಕದಾಸ ವೆಂಕಟಪತಯ್ಯನ ಉತ್ತರಾಧಿಕಾರಿಯಾದ ಸರ್ಜಾಮರ ತಿಮ್ಮಪ್ಪಯ್ಯನು ಕರ್ತಾರ ಸೀಮೆಯ ದಿವಾನರಾಗಿದ್ದಾಗ ನಡೆಸಿದ ಅವ್ಯವಹಾರಗಳನ್ನು ಕಂಡುಹಿಡಿಯಲು ಹೈದರನು ವೆಂಕಪ್ಪಯ್ಯನವರನ್ನು ನೇಮಿಸಿದರು. ಕೇವಲ ಕೆಲವೇ ದಿನಗಳಲ್ಲಿ ವೆಂಕಪ್ಪಯ್ಯನವರು ತಿಮ್ಮಪ್ಪಯ್ಯನು ಮಾಡಿದ್ದ ಹಣದ ದುರಪಯೋಗವನ್ನು ಖಚಿತಪಡಿಸಿದನು. ಪ್ರಧಾನ ವೆಂಕಪ್ಪಯ್ಯನವರ ಈ ಕಾರ್ಯದಿಂದ ಸಂಪ್ರೀತನಾದ ಹೈದರನು ಪ್ರಧಾನರನ್ನು ಗೌರವಿಸಿ, ಪುನಃ ಅವರನ್ನು ನಗರ ಸೀಮೆಗೆ ಕಳುಹಿಸಿದನು.

ಪ್ರಧಾನ ವೆಂಕಪ್ಪಯ್ಯನವರು ತಮ್ಮ ಸ್ಥಾನವಾದ ಬಿದನೂರಿನಲ್ಲಿ ವೀರಮ್ಮಾಜಿಯ ಪತನಾನಂತರ ಹೈದರನ ಆಡಳಿತಾವಧಿಯಲ್ಲಿ ಜನರನ್ನು ಹೊಸ ಆಡಳಿತಕ್ಕೆ ಹೊಂದಿಕೊಳ್ಳುವಂತೆ ಹಾಗೂ ಬಿದನೂರು ಸಂಸ್ಥಾನ ಮೈಸೂರು ರಾಜ್ಯ ಎಲ್ಲೆಯಲ್ಲಿ ನಿರತರಾಗಿರುವಂತೆ ಮಾಡುವಲ್ಲಿ ಮಹತ್ವದ ಪಾತ್ರ ವಹಿಸಿದ್ದರು. ಚತುರ ಸಂಧಾನಕಾರರಾಗಿದ್ದ ವೆಂಕಪ್ಪಯ್ಯನವರು ತಮ್ಮ ಸ್ವಸಾಮರ್ಥ್ಯದಿಂದ ಸಾಧಾರಣ ಗುರಿಕಾರ/ ಪಾರುಪತ್ತೆಗಾರ ಪದವಿಯಿಂದ ದಿನೇ ದಿನೇ ಅಭಿವೃದ್ಧಿ ಹೊಂದಿ ದಿವಾನ ಪದವಿಯನ್ನು ಪಡೆದುಕೊಂಡರು.

ಪ್ರಧಾನ ವೆಂಕಪ್ಪಯ್ಯನವರ ಕೀರ್ತಿ ದಕ್ಷಿಣದಲ್ಲಿ ಬ್ರಿಟಿಷರ ಕೇಂದ್ರವಾದ ಚೆನ್ನೈನ ಸೈಂಟ್ ಜಾರ್ಜ್ ಕೋಟೆಯಿಂದ ಪೋರ್ಚುಗೀಸರ ರಾಜಧಾನಿ ಗೋವಾ ಮತ್ತು ಮರಾಠರ ರಾಜಧಾನಿ ಪೂನಾದವರೆಗೆ ಎಲ್ಲರ ಮೆಚ್ಚುಗೆ ಗಳಿಸಿತ್ತು. ಪ್ರಧಾನ

ವೆಂಕಪ್ಪಯ್ಯನವರು ಧರ್ಮಭೀರುಗಳು, ಸುಜನರು, ಪರಿಶುದ್ಧರು ಹಾಗೂ ವ್ಯವಹಾರ ಕುಶಲರೂ ಆಗಿದ್ದರು. ಪ್ರಧಾನ ವೆಂಕಪ್ಪಯ್ಯನವರು ಸಾರ್ವಜನಿಕ ಹಾಗೂ ಮಿಲಿಟರಿ ಆಡಳಿತಗಳಲ್ಲಿ ಮತ್ತು ಸಂಧಾನಕಾರರಾಗಿ ಅತ್ಯಂತ ಮೆಚ್ಚುಗೆ ಗಳಿಸಿದ್ದ ವ್ಯಕ್ತಿಯಾಗಿದ್ದರು.

ಹಯವದನರಾಯರು ಹೇಳುವಂತೆ, ನಿರಕ್ಷರಿಯಾಗಿದ್ದ ಹೈದರನು ಪ್ರಧಾನ ವೆಂಕಪ್ಪಯ್ಯನವರ ಕೀರ್ತಿಯನ್ನು ಸಹಿಸದೇ ಹೋದನು. ಮೊದಲು ಹಲವಾರು ಸಂದರ್ಭಗಳಲ್ಲಿ ಪ್ರಧಾನರ ಕಾರ್ಯವೈಖರಿಯನ್ನು ಸ್ವತಃ ಹೈದರನೇ ಹೊಗಳಿ ಪ್ರಶಸ್ತಿ, ಪುರಸ್ಕಾರಗಳನ್ನು ಇತ್ತಿದ್ದನು. ಆದರೆ ಹೈದರನು ಎಂದಿಗೂ ನಂಬಿಕೆಗೆ ಅರ್ಹನಾಗಿ ನಡೆದುಕೊಳ್ಳಲಿಲ್ಲ. ಪ್ರಧಾನರಾದಿಯಾಗಿ ಯಾರನ್ನೂ ನಂಬಿರಲಿಲ್ಲ. ಪ್ರಧಾನ ವೆಂಕಪ್ಪಯ್ಯನವರ ಸಹಾಯಕ್ಕಾಗಿ ಉಜಿನಪ್ಪನನ್ನು ನೇಮಕ ಮಾಡಿದ್ದನು. ಅಲ್ಲಿಂದಲೇ ಅನುಮಾನದ ಎಳೆ ನಮಗೆ ಗೋಚರಿಸುತ್ತದೆ. ಹೈದರನು ತನ್ನ ಏಳ್ಗೆಗಾಗಿ ಹಾಗೂ ಸರ್ಕಾರದ ಸ್ಥಿರತೆಗಾಗಿ ಶಕ್ತರಾದ ವ್ಯಕ್ತಿಗಳನ್ನು ಹುಡುಕುತ್ತಿದ್ದನು. ಹಾಗೂ ತನ್ನ ಏಳ್ಗೆಗಾಗಿ ಅವರನ್ನು ಬಳಸಿಕೊಂಡನು. ಪ್ರಧಾನ ವೆಂಕಪ್ಪಯ್ಯ ಅಂಥವರಲ್ಲಿ ಒಬ್ಬರು.

ಈ ಎಲ್ಲ ಘಟನೆಗಳಿಂದ ಮನನೊಂದ ಪ್ರಧಾನ ವೆಂಕಪ್ಪಯ್ಯನವರು ಮಧುಮೇಹಕ್ಕೆ ಒಳಗಾಗಿ ೧೮೮೨ರ ನವೆಂಬರ್‌ನಲ್ಲಿ ಸ್ವರ್ಗಸ್ಥರಾದರು. ಒಂದೇ ಒಂದು ಸಮಾಧಾನದ ಸಂಗತಿಯೆಂದರೆ, ಪ್ರಧಾನ ವೆಂಕಪ್ಪಯ್ಯನವರು ಖಂಡೇರಾಯರ ರೀತಿ ಘೋರ ಅಂತ್ಯವನ್ನು ಕಾಣದಿರುವುದು.

**ಪರಾಮರ್ಶನಗಳು:**


೧. ಶ್ರೀಮದ್ರಾಮಪುರಿ ಕರಿಶ್ರೀ ವೆಂಕಟೇಶ್ವರ ಮಹಾತ್ಮ್ಯೆ, ಸ್ಥಳಪುರಾಣ, ಟಿ.ಕೆ. ವೇಣುಗೋಪಾಲದಾಸರು (ಲಿಪ್ಯಂತರ ಮತ್ತು ಕನ್ನಡ ಸಾರಾಂಶ), ಪ್ರಕಾಶಕರು, ಶ್ರೀ ಎನ್. ವೆಂಕಟರಾವ್, ಚಾಮರಾಜಪೇಟೆ, ಬೆಂಗಳೂರು, (ಮುಂದೆ ಸ್ಥಳ ಮಹಾತ್ಮೆ ಎಂದು ಉಲ್ಲೇಖಿಸಲಾಗಿದೆ.) ಪುಟ–೩.

ಶ್ರೀ ಮದ್ರಾಮಪುರಿ ಕರಿಶ್ರೀ ವೆಂಕಟೇಶ್ವರ ಮಹಾತ್ಮ್ಯೆ, ಸ್ಥಳಪುರಾಣ, ಪ್ರಕಾಶಕರು, ಶ್ರೀ ಎಚ್. ಕೃಷ್ಣಮೂರ್ತಿ, ತುಮಕೂರು, ಮುದ್ರಕರು, ಸುಧೀಂದ್ರ ಮುದ್ರಣಾಲಯ, ಬೆಂಗಳೂರು–೨. (ಮುಂದಕ್ಕೆ ಸ್ಥಳಪುರಾಣ ಎಂದು ಉಲ್ಲೇಖಿಸಲಾಗಿದೆ.) ಪುಟ ೧೩–೧೪.

೨. ಅದೇ, ಪುಟ ೨೦–೨೩.

೩. ಅದೇ, ಪುಟ ೨೦–೨೩. ಡಾ. ಲ.ನ. ಸ್ವಾಮಿ ಮತ್ತು ಡಾ. ಬಿ.ಆರ್. ಭಾರತೀ, ಮೈಸೂರು ಸಂಸ್ಥಾನದ ಪ್ರಧಾನ ವೆಂಕಪ್ಪಯ್ಯನವರು: ವೆಂಕಾಮತ್ಯರ ಜೀವನ ಚರಿತ್ರೆ, ಶ್ರೀ ಚಿನ್ಮಯಿ ಪ್ರಕಾಶನ, ಉಜಿರೆ, ೨೦೦೭, ಪುಟ ೧೯–೨೩.

೪. ಡಾ. ಶಿವಾನಂದ, ವಿ. ಮತ್ತು ಡಾ. ಲ.ನ. ಸ್ವಾಮಿ, ೨೦೨೦, ಟ್ರೇಸಿಂಗ್ ಆರಿಜನ್ ಆಫ್ ಒಡೆಯರ್ಸ್ ಆಫ್ ಮೈಸೂರ್, ಇನ್ ನ್ಯೂ ಫ್ಯಾಸೆಟ್ಸ್ ಆಫ್ ಇಂಡಿಯನ್ ಆರ್ಟ್ಸ್ ಆರ್ಕಿಟೆಕ್ಚರ್ ಅಂಡ್ ಎಪಿಗ್ರಫಿ, ಡಾ. ಎಲ್.ಎಸ್. ಶಾಂತಕುಮಾರಿ ಅಭಿನಂದನಾ ಗ್ರಂಥ, ಆಗಮ್ ಕಲಾಪ್ರಕಾಶನ, ದೆಹಲಿ, ಪು. ೨೨೬-೨೩೮.

೫. ಅದೇ, ಪುಟ ೨೨೬-೨೩೮.

೬. ಎ.ಕ. III, ನಂ.ಗೂ. ೨೧೨, ೧೬೩೯ ಕ್ರಿ.ಶ.

೭. ಡಾ. ಶಿವಾನಂದ, ವಿ. ಮತ್ತು ಡಾ. ಲ. ನ. ಸ್ವಾಮಿ, ೨೦೨೦, ಪೂರ್ವೋಕ್ತ, ಪು. ೨೨೬-೨೩೮.

೮. ಸ್ಥಳ ಮಹಾತ್ಮೆ ಪೂರ್ವೋಕ್ತ, ಪು. ೨೦-೨೪; ಸ್ಥಳಪುರಾಣ, ಪೂರ್ವೋಕ್ತ, ಪು. ೮-೧೨ ಮತ್ತು ಡಾ. ಲ.ನ. ಸ್ವಾಮಿ ಮತ್ತು ಡಾ. ಬಿ.ಆರ್. ಭಾರತೀ, ಪೂರ್ವೋಕ್ತ, ಪು. ೯-೧೧

೯. ಎಂ.ಪಿ.ಎಲ್. ಶಾಸ್ತ್ರಿ., ಪ್ರಧಾನ ವೆಂಕಪ್ಪಯ್ಯ, ಪೊಯಟ್ ಅಂಡ್ ಪ್ಲೇರೈಟ್, ಕ್ಯೂಜೆಎಂಎಸ್ ಸಂಪುಟ ೩೧. ಸಂಚಿಕೆ ೧, ಪು. ೩೬-೫೨. (Venkappaiah played a very prominent part in the history of Mysore during the eighteenth century. He belongs to the village Rampura which is mentioned in almost all his works and is on the bank of the Kabini river near Cattanahalli about 10 miles south-west of Mysore.)
ಎಂ.ಪಿ.ಎಲ್. ಶಾಸ್ತ್ರಿ, ಪ್ರಧಾನ ವೆಂಕಪ್ಪಯ್ಯ, ಪೊಯೆಟ್ ಅಂಡ್ ಪ್ಲೇರೈಟ್, ಡೈಮಂಡ್ ಜ್ಯೂಬಿಲಿ ಸೆಲೆಬ್ರೇಷನ್ಸ್, ಕಮ್ಮೆಮೊರೇಷನ್ ವ್ಯಾಲ್ಯೂ, ಡಾ. ಎಂ.ವಿ. ಕೃಷ್ಣರಾವ್ (ಸಂ.), ಯೂನಿವರ್ಸಿಟಿ ಹಿಸ್ಟರಿ ಅಸೋಸಿಯೇಷನ್ಸ್, ಮಹಾರಾಜಾಸ್ ಕಾಲೇಜ್, ಮೈಸೂರು,

೧೦. ಡಾ. ಲ.ನ. ಸ್ವಾಮಿ ಮತ್ತು ಡಾ. ಬಿ.ಆರ್. ಭಾರತೀ, ಪೂರ್ವೋಕ್ತ, ಪು. ೩-೯

೧೧. ಆರ್. ನರಸಿಂಹಾಚಾರ್ಯ, ೧೯೭೪, ಕರ್ನಾಟಕ ಕವಿಚರಿತೆ ಸಂ. ೩, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೨೩-೧೨೭ (ಮುಂದೆ ಕರ್ನಾಟಕ ಕವಿಚರಿತೆ ಎಂದು ಉಲ್ಲೇಖಿಸಲಾಗಿದೆ.)

೧೨. ಡಾ. ಲ.ನ. ಸ್ವಾಮಿ ಮತ್ತು ಡಾ. ಬಿ.ಆರ್. ಭಾರತೀ, ಪೂರ್ವೋಕ್ತ, ಪು. ೧೯-೨೫

೧೩. ಅದೇ, ಪುಟ ೩೮

೧೪. ತಿ.ತಾ. ಶರ್ಮ, ೧೯೯೯, ಚಾರಿತ್ರಿಕ ದಾಖಲೆಗಳು, ೨ನೆಯ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೩೯

ಈ ಹಂತದಲ್ಲಿ ಹೈದರ್‌ನಾಮೆ ಕೃತಿಯ ಬಗ್ಗೆ ಮತ್ತು ಕೃತಿಯ ಕರ್ತೃವಿನ ಬಗ್ಗೆ ಉಲ್ಲೇಖ ಮಾಡುವುದು ಅವಶ್ಯಕ. ಈ ಕೃತಿಯ ರಚನೆಕಾರರು ತುಮಕೂರು ಜಿಲ್ಲೆ ಸಿರಾದ ನರಸಿಂಹಸ್ವಾಮಿ ದೇವಾಲಯಕ್ಕೆ ಒಳಪಟ್ಟ ವಂಶಸ್ಥರ ಮೂಲದವರು. ಸೀಬಿ ದೇವಾಲಯದ ಕಛೇರಿಯ ಪಾರುಪತ್ತೇದಾರರಾಗಿದ್ದ ಕೃಷ್ಣಪ್ಪನವರು ಹೈದರ್‌ನಾಮ ಕೃತಿಯನ್ನು ರಚಿಸಿದ್ದಾರೆ. ಇದನ್ನು ಬರೆದವನು ಇಲ್ಲಿನ ಕರಣಿಕ ನಲ್ಲಪ್ಪನಲ್ಲ. ಈತ ಹೈದರಾಲಿಯವರ ಬಳಿ ಪ್ರಧಾನರಾಗಿ ಕಾರ್ಯ ನಿರ್ವಹಿಸುತ್ತಿದ್ದ ಗುರಿಕಾರ್ ವೆಂಕಟಪತಯ್ಯನವರ ಸಂಬಂಧಿ ಕೂಡ. ಇದನ್ನು ಸೀಬಿ ನರಸಿಂಹಸ್ವಾಮಿ ದೇವಾಲಯದ ದಾಖಲೆಗಳು ಶಾಸನದಲ್ಲಿ ಈ ರೀತಿ ಗುರುತಿಸಿರುತ್ತಾರೆ. ತಮ್ಮ ಪಿತೃವಂಶಕ್ಕೂ ಮಾತಾಮಹರಾದ ಖಡಿವೆಳ್ಳ ಮನೆವರಶೆಯವರಲ್ಲಿ ಇಕ್ಕೇರಿ, ಬಿದಲೂರು, ಕೂಡಿಯಾಲ ಬಂದರ್, ಹೈದರ್‌ನಗರ್ ಸಂಸ್ಥಾನದ ಸರ್ವಾಧಿಕಾರಿ ಗುರಿಕಾರ್ ವೆಂಕಟಪತಯ್ಯನವರಿಗೂ ಮಾತಾಮಹೀ ರಮಣಮ್ಮನವರಿಗೂ ಮಾತುಳ ಗುರಿಕಾರ್ ವೆಂಕಟರಮಣಪ್ಪ ಸೋದರತ್ತೆ ಲಕ್ಷ್ಮಿದೇವಮ್ಮ ಮುಂತಾದ ತಮ್ಮ ವಂಶದವರನ್ನು ಮತ್ತು ಅವರ ಕುಟುಂಬದವರ ವಿವರಗಳನ್ನು ದಾಖಲಿಸುತ್ತದೆ. ೧೭೭೫ರಲ್ಲಿ ಈ ದೇವಾಲಯವನ್ನು ಸ್ಥಾಪಿಸಿದ ಉದ್ದೇಶವನ್ನು ಉಲ್ಲೇಖಿಸುತ್ತಾ ಅವರ ವಂಶದವರಿಗೆ ಸದ್ಗತಿ ಪ್ರಾಪ್ತವಾಗಲೆಂದು ವಂಶದ ಎಲ್ಲರಿಗೂ ವೈಕುಂಠ ಪ್ರಾಪ್ತಿಯಾಗಲೆಂದು ದೇವಾಲಯ ನಿರ್ಮಿಸಿದ್ದಾಗಿ ತಿಳಿಸಲಾಗಿದೆ. ನಮ್ಮ ಲೇಖನದ ನಾಯಕ ಪ್ರಧಾನ ವೆಂಕಪ್ಪಯ್ಯನವರನ್ನು ಇದರಲ್ಲಿ ಗುರಿಕಾರ್ ವೆಂಕಟಪತಯ್ಯನವರು ಎಂದು ಅವರ ಪರಂಪರೆಯ ಕಾರ್ಯವನ್ನು ಮತ್ತು ಹುದ್ದೆಯನ್ನು ದಾಖಲಿಸಿ ಮಧ್ಯೆ ಬಂದುಹೋದ ಪದವಿಯನ್ನು ಬಿಟ್ಟು ಗುರುತಿಸಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಪ್ರಧಾನ ವೆಂಕಪ್ಪಯ್ಯನವರ ವಂಶಸ್ಥರೇ ಹೈದರ್‌ನಾಮ ಕೃತಿಯನ್ನು ರಚಿಸಿದ್ದಾರೆನ್ನುವುದು ಇದರಿಂದ ಖಚಿತವಾಗುತ್ತದೆ. ವಿವರಗಳಿಗೆ ಓದಿ: ಡಾ. ಬಿ. ನಂಜುಂಡಸ್ವಾಮಿ, 'ಹೈದರ್‌ನಾಮಾ' ಕೃತಿ ಕರ್ತೃ ಯಾರು? ಸೀಬಿ ನರಸಿಂಹಸ್ವಾಮಿ, ದೇವಸ್ಥಾನದ ಮಹಾದ್ವಾರದ ದಕ್ಷಿಣದ ಮಾಳಿಗೆಯಲ್ಲಿ ಕಪ್ಪು ಶಾಯಿಯಿಂದ ಬರೆದಿರುವ ಶಾಸನದ ಪೂರ್ಣ ಪಾಠ, ಇತಿಹಾಸ ದರ್ಶನ, ಸಂಪುಟ ೧೪, ೧೯೯೯, ಎಂ.ಜಿ. ನಾಗರಾಜ್ ಮತ್ತು ಪಿ.ವಿ. ಕೃಷ್ಣಮೂರ್ತಿ (ಸಂ), ಪು. ೨೮೪ರಿಂದ ೨೮೭.

೧೫. ಹಯವದನ ರಾವ್, ಸಿ., ಹಿಸ್ಟರಿ ಆಫ್ ಮೈಸೂರು, ಸಂ. ೨, ಗವರ್ನಮೆಂಟ್ ಪ್ರೆಸ್, ಬೆಂಗಳೂರು, ೧೯೪೬, ಪು. ೪೭೮

೧೬. ಲಿಂಗಣ್ಣಕವಿಯ ಕೆಳದಿನೃಪವಿಜಯ, ಆರ್. ಶಾಮಾಶಾಸ್ತ್ರಿ, (ಸಂ.) ಓರಿಯಂಟಲ್ ಲೈಬ್ರರಿ ಪಬ್ಲಿಕೇಷನ್ಸ್, ಕನ್ನಡ ಮಾಲಿಕೆ ಸಂಖ್ಯೆ-೯, ಮೈಸೂರು

ವಿಶ್ವವಿದ್ಯಾನಿಲಯ, ಮೈಸೂರು, ೧೯೨೧, ೧೨ನೆಯ ಆಶ್ವಾಸ, ಪು. ೨೧೭-೨೨೩

೧೭. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೪೧

೧೮. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೪೧-೪೧

೧೯. ಮಹೀಶೂರ ಶ್ರೀಮನ್ಮಹಾರಾಜ ಚಾಮರಾಜೇಂದ್ರ ಒಡೆಯರ್‌ರವರ ವಂಶರತ್ನಾಕರ, ಜಗನ್ಮೋಹನ ಮುದ್ರಾಕ್ಷರ ಶಾಲೆ, ಮೈಸೂರು, ೧೮೮೭, ಪು. (ಮುಂದೆ ವಂಶರತ್ನಾಕರವೆಂದು ದಾಖಲಿಸಿದೆ)

೨೦. ಸ್ವಾಮಿಕಣ್ಣುಪಿಳ್ಳೆ ಎನ್ ಇಂಡಿಯನ್ ಎಫಿಮರೀಸ್, ೧೯೨೨, ಸರ್ಕಾರಿ ಮುದ್ರಣಾಲಯ, ಮದ್ರಾಸು, ಸಂ. ೭, ಪು. ೩೨೮

೨೧. ರಾಮಕೃಷ್ಣರಾವ್, ಬಿ., ೧೯೧೬, ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜರವರ ವಂಶಾವಳಿ, ಗವರ್ನಮೆಂಟ್ ಪ್ರೆಸ್, ಮೈಸೂರು, ಪು. ೧೧೯-೨೦೦ (ಮುಂದೆ ವಂಶಾವಳಿಯೆಂದು ದಾಖಲಿಸಿದೆ).

೨೨. ಹಯವದನ ರಾವ್, ಸಿ., ೧೯೪೬, ಹಿಸ್ಟರಿ ಆಫ್ ಮೈಸೂರು, ಸಂ. ೨, ಗವರ್ನಮೆಂಟ್ ಪ್ರೆಸ್, ಬೆಂಗಳೂರು, ಪು. ೪೭೦-೪೭೫

೨೩. ಎಂ.ಎಂ. ಕಲಬುರ್ಗಿ, ೧೯೯೪, ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪು. ೧೩೮, ೨೬೨,

೨೪. ಅದೇ, ಪು. ೧೩೮, ೨೬೨,

೨೫. ರೀಟ ಬ್ರಗಾನ್ಜ್‌ಫ಼, ೨೦೦೧, ಗೋವಾ ಕರ್ನಾಟಕ ರಿಲೇಷನ್ಸ್, ೧೭೬೩-೧೮೫೭, ಎ ಪೊಲಿಟಿಕಲ್ ಅಂಡ್ ಎಕನಾಮಿಕ್ಸ್ ಸ್ಟಡಿ, ಗೋವಾ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪ್ರೌಢ ಪ್ರಬಂಧ, ಪು. ೬೬-೬೮

೨೬. ಎನ್. ಶಾಂ ಭಟ್, ೨೦೧೬, ಕೆನರಾದಲ್ಲಿ ಪೋರ್ಚುಗೀಸರು, ಮಂಗಳೂರು ದರ್ಶನ, ವಿವೇಕ್‌ರೈ (ಮು.ಸಂ.) ಸಂಪುಟ-೧, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ ಮಂಗಳೂರು, ೧೬೫-೧೮೨.

೨೭. Treaty Between Haidar Ali And The Portugueue (1769) Venkappayya was advised by the Secretary of State, Dom Joao Jose Demello, to take every care to ensure a lasting peace, to avoid negotiations which would hurt the English, but to negotiate for the restitution of the Fort of Mangalore.91 Haidar Ali's fight against the British ended in victory to Haidar on 4th April 1769. In 1769, Mangalore was once again in Haidar's hands and thanks to Camotim Vaga's good offices with the Governor of Kanara. Haidar ordered Sheik Ali, his Governor at Mangalore, to restore the Portuguese Factory and rights in that

city. Negotiations between the two governments bore fruit and an honourable treaty was concluded and signed in August 1769. The peace pact between Haidar All and the Portuguese was also ratified.

Affectionate letters and presents were exchanged by all concerned. The terms of this treaty were contained in a letter of Haidar to Sheik Ali, the Governor of Mangalore. The terms were: (a) that the Portuguese should be allowed to build factories in that port (Mangalore) in the same manner as they had before. (b) that they should be given a tribute of rice and allowed to collect articles like rice, pepper, sandalwood, etc. as of old. (c) that all Christian prisoners should be set free. (d) that all the debts and accounts of ammunitions, lead, etc. brought by the Governor in the past years from the State of Goa should be settled without much delay.

In July and August 1769, the Prime Minister of Haidar, Venkappayya Pradhan wrote two letters to the Portuguese Viceroy at Goa stressing the obligations incumbent on both parties to honour the treaty. Thus the treaty included provisions to safeguard the Portuguese interests in Kanara, particularly their economic interests. ರೀಟ ಬ್ರಗಾನ್ಜ಼, ೨೦೦೧, ಗೋವಾ ಕರ್ನಾಟಕ ರಿಲೇಷನ್ಸ್, ೧೭೬೩–೧೮೫೭, ಎ ಪೊಲಿಟಿಕಲ್ ಅಂಡ್ ಎಕನಾಮಿಕ್ಸ್ ಸ್ಟಡಿ, ಗೋವಾ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪ್ರೌಢ ಪ್ರಬಂಧ, ಪು.೬೬–೬೭

೨೮. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೬೨

೨೯. ಅದೇ ಪು. ೬೩

೩೦. ವಂಶರತ್ನಾಕರ, ಪು. ೧೯೮; ವಂಶಾವಳಿ ಪು. ೨೦೯

೩೧. ಹಯವದನರಾವ್, ಸಿ., ೧೯೪೬, ಪೂರ್ವೋಕ್ತ, ಪು. ಪು. ೪೭೮–೪೮೨

೩೨. ಎಂ.ಜಿ. ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು, ಭಾಗ–೧, ಕರ್ನಾಟಕ ರಾಜ್ಯ ಪುರಾತತ್ವ ಸಂಗ್ರಹಾಲಯಗಳ ಇಲಾಖೆ, ಮೈಸೂರು, ಪು. ೧೪೬–೧೪೯.

೩೩. ಅದೇ, ಪು. ೧೪೬–೧೪೯

೩೪. ವಂಶರತ್ನಾಕರ, ಪು. ೨೦೦–೨೦೧; ವಂಶಾವಳಿ, ಪು. ೨೧೨–೨೧೩.

೩೫. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೯೫

೩೬. ಹಯವದನ ರಾವ್, ಸಿ., ೧೯೪೬, ಪೂರ್ವೋಕ್ತ, ಪು. ಪು. ೪೭೮–೪೮೨

೩೭. ವಂಶಾವಳಿ, ಪು. ೨೦೭–೨೦೮.

೩೮. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೯೩

೩೯. ಹಯವದನ ರಾವ್, ಸಿ., ೧೯೪೬, ಪೂರ್ವೋಕ್ತ, ಪು. ಪು. ೪೭೮–೪೮೨

೪೦. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೯೪

೪೧. ಅದೇ, ಪು. ೯೧

೪೨. ಹಯವದನ ರಾವ್, ಸಿ., ೧೯೪೬, ಪೂರ್ವೋಕ್ತ, ಪು. ಪು. ೪೭೮-೪೮೨

೪೩. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೫೮

೪೪. ಅದೇ, ಪು. ೬೫

೪೫. ಅದೇ, ಪು. ೬೬

೪೬. ಹಯವದನ ರಾವ್, ಸಿ., ೧೯೪೬, ಪೂರ್ವೋಕ್ತ, ಪು. ಪು. ೪೭೯

೪೭. ಆರ್. ನರಸಿಂಹಾಚಾರ್ಯ, ೧೯೭೪, ಪೂರ್ವೋಕ್ತ, ಸಂ.೩, ಪು. ೧೨೩ ಅಡಿಟಿಪ್ಪಣಿ-೧

೪೮. ಅದೇ, ಪು. ೧೨೩-೧೪೭

೪೯. ಅದೇ, ಪು. ೧೨೩-೧೪೭

೫೦. ಅದೇ, ಪು. ೧೨೩-೧೪೭

೫೧. ಅದೇ, ಪು. ೧೨೩-೧೪೭

೫೨. ವೆಂಕಾಮಾತ್ಯ ಪ್ರಣೀತ, ೧೯೮೭, ಲಕ್ಷ್ಮೀಸ್ವಯಂವರ ಸಮವಕಾರಃ, ರಾಘವೇಂದ್ರರಾವ್, ಎಂ.ಎ., (ಸಂ.), ಪ್ರಕಾಶಕರು ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು.

೫೩. ನಾಗರಾಜ ಶರ್ಮ, ೨೦೦೫, ರಸಿಕರಂಜಿನಿ ಒಂದು ಅಪ್ರಕಟಿತ ಸಂಸ್ಕೃತ ತಾಳೆಗರಿ ಹಸ್ತಪ್ರತಿ, ದಿ ಮೈಸೂರು ಓರಿಯಂಟಲಿಸ್ಟ್ ಪತ್ರಿಕೆ, ಓರಿಯಂಟಲ್ ಇನ್ಸಿಟಿಟ್ಯೂಟ್‌ನ ಸಂಶೋಧನಾ ಪತ್ರಿಕೆ, ಮೈಸೂರು, ಸಂ. ೧೮, ಪು. ೧೬೩ರ ಅನಂತರ.

೫೪. ಡಾ. ಲ.ನ. ಸ್ವಾಮಿ ಮತ್ತು ಡಾ. ಬಿ.ಆರ್. ಭಾರತೀ, ಪೂರ್ವೋಕ್ತ, ಪು. ೧೯-೨೫

೫೫. ಅದೇ, ಪು. ೧೯-೨೩

೫೬. ಎಂ.ಡಿ. ಶ್ರೀನಿವಾಸ್, ಮಧುಗಿರಿ ಇತಿಹಾಸ, ಸುಧಾಪ್ರಕಾಶನ, ಮಧುಗಿರಿ, ೧೯೮೭, ಪು. ೫೪

೫೭. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೭೫-೭೬,

೫೮. ವಂಶರತ್ನಾಕರ, ಪು. ೨೨೩

೫೯. ವಂಶಾವಳಿ, ಪು. ೨೨೪.

೬೦. ತಿ.ತಾ. ಶರ್ಮ, ೧೯೯೯, ಪೂರ್ವೋಕ್ತ, ಪು. ೯೬



# ಶಾಸನಗಳು ಪ್ರೇಕ್ಷಣೀಯವಲ್ಲವೆ?



ಡಾ. ಬಿ. ರಾಜಶೇಖರಪ್ಪ

ಪ್ರವಾಸ ಎಲ್ಲರಿಗೂ ತುಂಬ ಪ್ರಿಯವಾದ ಒಂದು ಹವ್ಯಾಸ. ಹಿಂದೆ ಹೆಚ್ಚಾಗಿ ಜನ ಪುಣ್ಯಕ್ಷೇತ್ರ ದರ್ಶನದ ಉದ್ದೇಶದಲ್ಲಿ ಯಾತ್ರೆ ಮಾಡುತ್ತಿದ್ದರೆ, ಇಂದಿನ ಕಾಲದ ಜನ ಸ್ಥಳದರ್ಶನ, ಉದ್ಯೋಗ, ವ್ಯಾಪಾರ, ಜ್ಞಾನಾಪೇಕ್ಷೆ ಮುಂತಾದ ವಿವಿಧ ಉದ್ದೇಶದಲ್ಲಿ ಪ್ರವಾಸ ಮಾಡುತ್ತಿದ್ದಾರೆ. 'ದೇಶ ನೋಡು; ಕೋಶ ಓದು' ಎನ್ನುವ ಪ್ರಾಚೀನರ ನಾಣ್ಣುಡಿ ಪ್ರವಾಸದ ಮಹತ್ತ್ವವನ್ನು ಸಾರುತ್ತದೆ. ಇಂದು ಪ್ರವಾಸ ಒಂದು ವೈಭೋಗದ ವಿಷಯವಾಗದೆ, ಮನೋರಂಜನೆಯ, ಜ್ಞಾನಸಂಗ್ರಹದ ಹಾಗೂ ಉಲ್ಲಾಸದ ವಿಷಯವಾಗಿರುವುದರ ಜೊತೆಗೆ ವಾಣಿಜ್ಯೋದ್ದೇಶವನ್ನು ಹೊಂದಿದೆ. ಹಾಗಾಗಿಯೆ ಎಂದಿಗಿಂತ ಇಂದು ಅದರ ಬಗ್ಗೆ ಹೆಚ್ಚು ಆಸ್ಥೆ ಬೆಳೆಯುತ್ತಿದೆ. ಬೇರೆ ಬೇರೆ ಪ್ರದೇಶದ ಜನರ ಒಡನಾಟ, ಭಾಷೆ, ಸಂಸ್ಕೃತಿ, ಸ್ಥಳದರ್ಶನ, ಆಹಾರ-ವಿಹಾರ, ಉಡುಪು, ತೊಡುಗೆ ಮೊದಲಾದವುಗಳನ್ನು ಒಟ್ಟಿಗೆ ಅನುಭವ ಕೋಶಕ್ಕೆ ಸೆಳೆದುಕೊಳ್ಳುವ ಪ್ರವಾಸ ಇಂದು ಮಾನವನ ಒಂದು ಸಾಂಸ್ಕೃತಿಕ ಅಗತ್ಯವಾಗಿದೆ. ಒಂದು ರಾಜ್ಯದೊಳಗಿನ ಜನ ಅದೇ ರಾಜ್ಯದೊಳಗಿನ ಬೇರೆ ಬೇರೆಯ ಸ್ಥಳಗಳಿಗಷ್ಟೇ ಅಲ್ಲ, ರಾಜ್ಯದ ಹೊರಗಿನ ಅಥವಾ ದೇಶದಿಂದ ಹೊರಗಿನ ಅನೇಕ ಸ್ಥಳಗಳಿಗೆ ಹೋಗಿಬರುವುದು ಮತ್ತು ಬೇರೆಡೆಯವರು ನಮ್ಮಲ್ಲಿಗೆ ಬರುವುದು ದಿನೇ ದಿನೇ ಹೆಚ್ಚುತ್ತಿದೆ. ಹೀಗಾಗಿ ನಿರ್ದಿಷ್ಟ ಮಾರ್ಗದಲ್ಲಿ ನಿರ್ದಿಷ್ಟ ಸ್ಥಳಗಳಿಗೆ ಪ್ರವಾಸ ಏರ್ಪಡಿಸುವುದು, ಪ್ರವಾಸಿಗಳ ಪ್ರಯಾಣಕ್ಕೆ ಮತ್ತು ಸ್ಥಳದರ್ಶನ, ವಿಹಾರ ಹಾಗೂ ತಾತ್ಕಾಲಿಕ ತಂಗುವಿಕೆಗೆ ಸೌಕರ್ಯಗಳನ್ನು ಕಲ್ಪಿಸುವುದು, ಈಚಿನ ವರ್ಷಗಳಲ್ಲಿ ಒಂದು ಅವಶ್ಯಕತೆಯಾಗಿ ಪರಿಣಮಿಸಿ, ಪ್ರವಾಸೋದ್ಯಮ ಬೆಳೆಯುತ್ತಿದೆ.

ಪ್ರವಾಸೋದ್ಯಮ ಶೈಕ್ಷಣಿಕ ಸೇವೆ ಆಗುವುದರ ಜೊತೆಗೆ ದೇಶಕ್ಕೆ ವಿದೇಶೀ ವಿನಿಮಯ ಗಳಿಕೆಯೂ ಸೇರಿದಂತೆ ಒಂದು ಲಾಭದಾಯಕ ಉದ್ಯಮವೂ ಆಗಿದೆ. ನಮ್ಮ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳು ಪ್ರವಾಸೋದ್ಯಮ ಇಲಾಖೆಗಳನ್ನು ಅಸ್ತಿತ್ವಕ್ಕೆ ತಂದು ದೇಶೀಯ ಮತ್ತು ವಿದೇಶೀಯ ಪ್ರವಾಸಿಗರಿಗೆ ವಿವಿಧ ಸೌಕರ್ಯಗಳನ್ನು ಒದಗಿಸುವ ಕೆಲಸ ಮಾಡುತ್ತಿರುವುದು ಪ್ರಶಂಸನೀಯ. ಭಿನ್ನ ಭಿನ್ನ ಸ್ಥಳಗಳ ಪ್ರೇಕ್ಷಣೀಯ ಮಹತ್ತ್ವವನ್ನು ಜಾಹಿರಾತಿನ ಮೂಲಕ, ಭಿತ್ತಿಪತ್ರಗಳ ಮೂಲಕ, ಸಚಿತ್ರ ವಿವರಣಿಕೆ(ಬ್ರೋಶುರ್)ಗಳ ಮೂಲಕ, ದೂರದರ್ಶನ ಇತ್ಯಾದಿ ಮಾಧ್ಯಮಗಳ ಮೂಲಕ ಸಾದರಪಡಿಸುತ್ತ, ಮಾಹಿತಿ ಕೇಂದ್ರಗಳ ಮೂಲಕ ಪ್ರವಾಸಕ್ಕೆ ವಾಹನ, ಮಾರ್ಗದರ್ಶಿ ಇತ್ಯಾದಿಗಳ ಸೇವೆ ಸೌಕರ್ಯವನ್ನು ನೀಡುತ್ತ ಬಂದಿರುವುದು ಮೆಚ್ಚಬೇಕಾದ ಸಂಗತಿ. ಸಂದರ್ಶಕರು ಭೇಟಿ ಕೊಡುವ ಸ್ಥಳ ಚಾರಿತ್ರಿಕ ಸ್ಥಳವಾದರೆ, ಅಲ್ಲಿಯ ಪ್ರಾಚೀನ ಕೋಟೆಕೊತ್ತಲಗಳು, ಅರಮನೆಯ ಅವಶೇಷಗಳು, ದೇವಮಂದಿರಗಳು, ಮಸೀದಿ–ಇಗರ್ಜಿಗಳು, ಇತರ ಕಟ್ಟಡ–ಮಂಟಪಗಳು, ವಿಗ್ರಹಗಳು, ವಸ್ತುಸಂಗ್ರಹಾಲಯಗಳು ಮುಂತಾದವುಗಳನ್ನೂ; ನಿಸರ್ಗರಮಣೀಯವಾದ ಸ್ಥಳವಾದರೆ, ಅಲ್ಲಿಯ ಜಲಪಾತ, ಜಲಾಶಯ, ಸರೋವರ, ವಿಹಾರಧಾಮ, ದೋಣಿಯಾನ, ವನಸಿರಿ, ಸಸ್ಯಶಾಸ್ತ್ರೀಯ ಉದ್ಯಾನ, ಪಕ್ಷಿಧಾಮ ಅಥವಾ ವನ್ಯಜೀವಿಗಳು ಸ್ವಚ್ಛಂದವಾಗಿ ವಿಹರಿಸುವ ಅಭಯಾರಣ್ಯ ಇತ್ಯಾದಿಗಳನ್ನೂ; ಆಧುನಿಕ ನಗರಸ್ಥಳವಾದರೆ, ವಿಶ್ವವಿದ್ಯಾಲಯ, ಪ್ರಯೋಗಾಲಯ, ತಾರಾಲಯ, ವಿವಿಧ ಕಾರ್ಖಾನೆಗಳು, ಅಣೆಕಟ್ಟು, ವಿದ್ಯುತ್ ಉತ್ಪಾದನಾ ಘಟಕಗಳು ಇತ್ಯಾದಿಗಳನ್ನೂ ಕುರಿತು ಸಚಿತ್ರವಾದ ವಿವರಣೆಕೊಟ್ಟು ಪ್ರಚಾರ ಮಾಡಿ, ಪ್ರವಾಸಿಗರನ್ನು ಆಕರ್ಷಿಸಿ ಅವರನ್ನು ಕೊಂಡೊಯ್ದು, ಪ್ರವಾಸ ಅವರಿಗೆ ಆನಂದದಾಯಕವಾಗುವಂತೆ ಮಾಡಲು ಪ್ರವಾಸೋದ್ಯಮ ಇಲಾಖೆ ಕ್ರಮಗಳನ್ನು ಕೈಗೊಂಡಿದೆ. ಈ ದಿಸೆಯಲ್ಲಿ ಈಗಾಗಲೇ ಸಾಕಷ್ಟು ಬೆಳೆದಿರುವ ಪ್ರವಾಸೋದ್ಯಮವನ್ನು ಮತ್ತಷ್ಟು ಅಭಿವೃದ್ಧಿಪಡಿಸಲು ಮತ್ತು ಅರ್ಥಪೂರ್ಣವಾಗಿಸಲು ಹೆಚ್ಚಿನ ಅಥವಾ ಹೊಸ ಸಾಧ್ಯತೆಗಳಿವೆಯೇ ಎಂದು ಚಿಂತಿಸಿದಾಗ, ನಮ್ಮ ನಾಡಿನ ಶಾಸನಗಳು ಅಂಥ ಒಂದು ಹೊಸ ಸಾಧ್ಯತೆಯಾಗಬಹುದು; ಪ್ರವಾಸೋದ್ಯಮಕ್ಕೆ ಒಂದು ಹೆಚ್ಚಿನ ಆಯಾಮವನ್ನು ತರಬಹುದು ಎಂದು ತೋರುತ್ತದೆ.

ಮೊದಲಿಗೆ ಒಂದು ಸಂಗತಿಯನ್ನು ಪ್ರಸ್ತಾಪಿಸುವುದು ಅವಶ್ಯಕ. ಹಿಂದಿನ ಶತಮಾನದಿಂದ ಈವರೆಗೆ ಸಾಗಿಬಂದಿರುವ ಶಾಸನ ಸರ್ವೇಕ್ಷಣೆಯಲ್ಲಿ, ಸುಮಾರು ಇಪತ್ತೈದು ಸಾವಿರದಷ್ಟು ಶಿಲಾ ಹಾಗೂ ಲೋಹಶಾಸನಗಳು, ನಮ್ಮ ನಾಡಿನಲ್ಲಿ ಬೆಳಕಿಗೆ ಬಂದಿವೆಯೆಂಬುದು ಈಗಾಗಲೇ ಎಲ್ಲರಿಗೂ ತಿಳಿದ ಸಂಗತಿ. ನಮ್ಮ ನಾಡಿನ ಪ್ರಾಚೀನ ಕಾಲದ ರಾಜಕೀಯ ಇತಿಹಾಸ, ಧಾರ್ಮಿಕ ಸಾಮಾಜಿಕ ಸ್ಥಿತಿಗತಿಗಳು,

ಭಾಷೆಯ ವಿವಿಧ ಅವಸ್ಥೆಗಳು ಮತ್ತು ವಿಕಾಸ ಹಾಗೂ ವಿಶಿಷ್ಟ ಶಬ್ದಗಳು, ಸಾಹಿತ್ಯಾಂಶಗಳು, ಇವುಗಳ ಜೊತೆಗೆ ಸಂಸ್ಕೃತಿ ವಿಶೇಷಗಳು ನಮಗೆ ವಿಶ್ವಸನೀಯವಾಗಿ ತಿಳಿದುಬರುವುದು ಶಾಸನಗಳಿಂದ. ಹೀಗಾಗಿ ಅವುಗಳ ಮಹತ್ತ್ವವನ್ನು ಇನ್ನೂ ಹೆಚ್ಚು ಮಾತುಗಳಲ್ಲಿ ವಿವರಿಸುವ ಅಗತ್ಯವಿಲ್ಲ. ಆದರೆ, ಒಂದು ವಿಷಾದದ ಸಂಗತಿ ಎಂದರೆ, ಇಷ್ಟೊಂದು ಮಹತ್ತ್ವವಿರುವ ಶಾಸನಗಳ ಬಗೆಗೆ ನಮ್ಮ ಶಾಲಾಕಾಲೇಜುಗಳ ವಿದ್ಯಾರ್ಥಿಸಮುದಾಯ ಮತ್ತು ಸಾರ್ವಜನಿಕರು ಗಮನಹರಿಸುವಂತಹ ಅಥವಾ ಅವು ಎಷ್ಟು ಮುಖ್ಯ ಎಂದು ಮನವರಿಕೆ ಮಾಡಿಕೊಳ್ಳುವಂತಹ ಶಿಕ್ಷಣ ಪರಿಸರ ಅಷ್ಟಾಗಿ ಇನ್ನೂ ಬಂದಿಲ್ಲ ಎನ್ನುವುದು. ಶಾಲಾ ಕಾಲೇಜುಗಳ ನಿಗದಿತ ಪಠ್ಯಪುಸ್ತಕಗಳಲ್ಲಿ ಅವುಗಳ ಬಗೆಗೆ ವಿಶೇಷ ಆಸಕ್ತಿಯನ್ನು ಮೂಡಿಸುವಂತಹ ಪಾಠಗಳನ್ನು ಈವರೆಗೂ ಇಟ್ಟಿಲ್ಲವೆಂಬುದನ್ನು ಸಹ ಮೇಲಿನ ಮಾತಿಗೆ ಸೇರಿಸಬೇಕಾಗಿದೆ. ಇದರಿಂದ ಅವುಗಳ ಬಗ್ಗೆ ತರಹಾವರಿ ಮೂಢನಂಬಿಕೆಗಳು, ಅನಾಸ್ಥೆ, ದುರುಪಯೋಗ ಕಡಮೆಯಾಗದೆ ಹಾಗೇ ಮುಂದುವರಿದುಕೊಂಡು ಬಂದಿವೆ. ಶಾಸನ ಸಂಪತ್ತಿನ ದೃಷ್ಟಿಯಿಂದ ಇಡೀ ರಾಷ್ಟ್ರದಲ್ಲೇ ದ್ವಿತೀಯ ಸ್ಥಾನದಲ್ಲಿರುವ ರಾಜ್ಯದ ನಮಗೆ, ಅವುಗಳ ಬಗೆಗೆ ಪ್ರಜ್ಞೆ ಬೆಳೆಯುವುದು ಅವಶ್ಯಕವಲ್ಲವೇ?

ಇನ್ನು ನಮ್ಮ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಪುರಾತತ್ತ್ವ ಇಲಾಖೆಯವರಾದರೂ ಅವುಗಳನ್ನು ಸಾರ್ವಜನಿಕರ ಗಮನಕ್ಕೆ ತರುವಲ್ಲಿ ಏನುಮಾಡಿದ್ದಾರೆ ಎಂಬುದನ್ನು ನೋಡೋಣ. ಆ ಇಲಾಖೆಗಳವರು ಅನೇಕ ಶಿಲಾ ಹಾಗೂ ಲೋಹ ಶಾಸನಗಳನ್ನು ಸರ್ವೇಕ್ಷಣೆ ಮಾಡಿ ವಿವಿಧ ಸಂಪುಟಗಳಲ್ಲಿ ಪ್ರಕಟಿಸುತ್ತಾ, ಆ ಮೂಲಕ ಅವುಗಳ ಬಗ್ಗೆ ತಿಳಿವಳಿಕೆ ಕೊಡುವ ಕೆಲಸವನ್ನು ಮಾಡುತ್ತ ಬಂದಿದ್ದಾರೆ. ಇದಲ್ಲದೆ ಕೆಲವು ಪ್ರಾಚ್ಯವಸ್ತು ಸಂಗ್ರಹಾಲಯಗಳಲ್ಲಿ ಶಿಲಾ ಮತ್ತು ಲೋಹ ಶಾಸನಗಳನ್ನು ಅವು ಇದ್ದ ದೂರದ ಸ್ಥಳಗಳಿಂದ ತಂದಿರಿಸಿ, ಸಂದರ್ಶಕರು ಅವು ಇದ್ದ ಸ್ಥಳಗಳಿಗೆ ಹೋಗದೆಯೇ ಅಷ್ಟನ್ನಾದರೂ ನೋಡುವಂತಹ ಸೌಲಭ್ಯವನ್ನು ಕಲ್ಪಿಸಿದ್ದಾರೆ. ಅವುಗಳು ಮೂಲತಃ ಯಾವ ಸ್ಥಳದವು? ಯಾವ ಅಥವಾ ಯಾರ ಕಾಲದವು? ಎಂಬಂಥ ಕೆಲವೇ ಕೆಲವು ಪರಿಮಿತ ವಿವರಗಳನ್ನು ಅವುಗಳ ಬುಡದಲ್ಲೋ ಬದಿಯಲ್ಲೋ ಚಿಕ್ಕ ಫಲಕಗಳಲ್ಲಿ ಸಂದರ್ಶಕರಿಗೆ ಕಾಣುವಂತೆ ಹಾಕಿ, ಅವುಗಳು ಕೂಡಾ ನಮ್ಮ ಇತಿಹಾಸ ಸಂಸ್ಕೃತಿಗಳ ಭಾಗವೆಂಬುದನ್ನು, ಸಂದರ್ಶಕರಿಗೆ ತಿಳಿಯುವಂತೆ ಮಾಡಿದ್ದಾರೆ. ಉದಾಹರಣೆಗೆ, ಬೆಂಗಳೂರಿನ ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ, ಈವರೆಗೆ ಉಪಲಬ್ಧವಾದ ಕನ್ನಡ ಶಾಸನಗಳಲ್ಲೇ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನವನ್ನು ಹಾಸನ ಜಿಲ್ಲೆಯ ಹಲ್ಮಿಡಿಯಿಂದ ತಂದು ಇರಿಸಿದ್ದಾರೆ. ಹಾಗೆಯೇ ಯುದ್ಧದಿಂದ ಆಗುವ ದಾರುಣ ಹಿಂಸೆ ಅನಾಹುತಗಳ ಚಿತ್ರವನ್ನು ಕೊಡುವ ಅಪರೂಪದ ಶಿಲ್ಪ ಮತ್ತು ಶಾಸನವಿರುವ

ಬೇಗೂರಿನ ಬೃಹತ್ ವೀರಗಲ್ಲನ್ನು ಆ ಊರಿನಿಂದ ತಂದು ಇರಿಸಿದ್ದಾರೆ. ಅದರಂತೆಯೇ ಗಂಗ ವಂಶದ ದೊರೆ ೨ನೆಯ ನೀತಿಮಾರ್ಗ ಕೊಂಗುಣಿವರ್ಮನು ಮಂಚದ ಮೇಲೆ ಮರಣಶಯ್ಯೆಯಲ್ಲಿರುವಾಗ ಅವನ ವೇಳವಾಳಿಯಾದ ಅಗರಯ್ಯನು ಕೈಗತ್ತಿಯಿಂದ ತನ್ನ ಹೊಟ್ಟೆಯನ್ನು ತಾನೇ ಇರಿದುಕೊಂಡು ಒಡೆಯನ ಸಮ್ಮುಖದಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳುತ್ತಿರುವ ಅಪರೂಪದ ಶಿಲ್ಪ-ಶಾಸನವನ್ನು ಅದು ಇದ್ದ ದೊಡ್ಡಹುಂಡಿ ಎಂಬ ಊರಿನಿಂದ ತಂದು ಇರಿಸಿದ್ದಾರೆ. (ಹೀಗೆ ಇನ್ನೂ ಬೇರೆ ಬೇರೆಯ ಪ್ರಾಚ್ಯವಸ್ತು ಸಂಗ್ರಹಾಲಯಗಳಲ್ಲಿ ಕೆಲವು ಅಪರೂಪದ ಶಾಸನಗಳನ್ನು ತಂದಿರಿಸಿರುವುದುಂಟು) ಇಂಥವುಗಳ ಶಿಲ್ಪ, ಲಿಪಿ, ವಿಷಯಗಳು ಖಂಡಿತವಾಗಿ ಸಂದರ್ಶಕರ ಹೃನ್ಮನಗಳನ್ನು ಸೆಳೆಯಬಲ್ಲವು; ಇವು ನಮ್ಮ ಸಂಸ್ಕೃತಿ ಇತಿಹಾಸಗಳ ಎಂಥ ಮುಖ್ಯ ಭಾಗಗಳೆಂಬ ಪರಿಕಲ್ಪನೆಯನ್ನು ಮೂಡಿಸಬಲ್ಲವು.

ಇವುಗಳನ್ನು ನೋಡಲೆಂದೇ ಪ್ರತ್ಯೇಕ ಉದ್ದೇಶ ಅಥವಾ ಆಸಕ್ತಿಯಿಂದ ಬಂದಿರದಿದ್ದರೂ, ಒಟ್ಟಾರೆ ಪ್ರಾಚ್ಯವಸ್ತು ಸಂಗ್ರಹಾಲಯಗಳಿಗೆ ದಿನಂಪ್ರತಿ ಸಾವಿರಗಟ್ಟಲೆ ಸಂಖ್ಯೆಯಲ್ಲಿ ಭೇಟಿಕೊಡುವ ಅನೇಕ ವಿದ್ಯಾರ್ಥಿ-ವಿದ್ಯಾರ್ಥಿನಿಯರು, ಸಾರ್ವಜನಿಕರು, ಸ್ಥಳೀಯರು ಮತ್ತು ದೂರದವರು, ದೇಶೀಯರು ಮತ್ತು ವಿದೇಶೀಯರು ಒಟ್ಟಾರೆ ಎಲ್ಲರೂ ಇಂಥ ಶಾಸನಗಳನ್ನು ಸುಲಭವಾಗಿ ನೋಡುವ ಅವಕಾಶವನ್ನು ಇಲ್ಲಿ ಪಡೆಯುತ್ತಾರೆ. ಅವುಗಳು ಯಾವ ಕಾಲದವು ಅಥವಾ ಯಾರ ಕಾಲದವು ಮತ್ತು ಎಲ್ಲಿಯವು ಎಂಬಷ್ಟು ವಿಷಯ ಬಿಟ್ಟರೆ ಇನ್ನೂ ಹೆಚ್ಚಿನ ವಿವರ ಅಲ್ಲಿ ಪ್ರದರ್ಶಿತವಿಲ್ಲದ್ದರಿಂದ ಅವುಗಳ ಬಗೆಗಿನ ಹೆಚ್ಚಿನ ಸ್ಪಷ್ಟ ತಿಳುವಳಿಕೆಯಾಗದೆ ಅವು ನಮ್ಮ ದೇಶದ ಸಾಂಸ್ಕೃತಿಕ ಸಂಪತ್ತು ಅರ್ಥಾತ್ ನಮ್ಮೆಲ್ಲರ ಅಮೂಲ್ಯ ಸ್ವತ್ತು ಎಂಬ ಭಾವನೆ ಮೂಡಲು ಹೆಚ್ಚಾಗಿ ಅವಕಾಶ ಇರುವುದಿಲ್ಲ. ಅಂಥವುಗಳ ಬಗೆಗೆ ಸ್ಪಷ್ಟ ತಿಳುವಳಿಕೆ ನೀಡುವಂತಹ ವಿವರಣ ಫಲಕ ಮತ್ತು ಪುಸ್ತಿಕೆಗಳ ಅವಶ್ಯಕತೆಯೂ ಇದೆ.

ಮತ್ತೊಂದು ವಿಚಾರವೆಂದರೆ, ಕೆಲವು ಪ್ರಾಚೀನ ದೇವಾಲಯಗಳು, ವಿಗ್ರಹಗಳು, ಕಟ್ಟಡಗಳು, ರಕ್ಷಿತ ಸ್ಮಾರಕಗಳ ಪಟ್ಟಿಯಲ್ಲಿ ಸೇರ್ಪಡೆಯಾಗಿರುತ್ತವಷ್ಟೆ. ಅವುಗಳೊಳಗೆ ಅಥವಾ ಅಸುಪಾಸಿನಲ್ಲಿ ಕೆಲವು ಶಿಲಾ ಶಾಸನಗಳಿದ್ದರೆ ಅಲ್ಲಿರುವ ಕಾರಣಕ್ಕೆ ಒಂದು ರೀತಿಯಲ್ಲಿ ಅವೂ ರಕ್ಷಿತ ಸ್ಮಾರಕಗಳಾಗಿರುವ ರೀತಿಯಲ್ಲಿ ಇರುತ್ತವೆ. ಅಂಥವುಗಳನ್ನು ಪ್ರತ್ಯೇಕವಾಗಿ ನೋಡಲು ಬರದಿದ್ದರೂ, ದೇವಾಲಯ, ಕೋಟೆ, ಮುಂತಾದುವನ್ನು ನೋಡಲು ಬರುವವರು, ಅಷ್ಟಿಷ್ಟಾದರೂ ಅವುಗಳನ್ನು ನೋಡುತ್ತಾರೆ. ಅವುಗಳ ಎದುರು ಕೆಲವು ಕ್ಷಣಗಳನ್ನು ಕಳೆಯುತ್ತಾರೆ. ಉದಾಹರಣೆಗೆ, ಶ್ರವಣಬೆಳಗೊಳದ ಗೊಮ್ಮಟೇಶ್ವರನನ್ನು ನೋಡಲು ಬಂದವರ ಕಣ್ಣಿಗೆ, ಆ ಭವ್ಯಸುಂದರ ಶಿಲಾಮೂರ್ತಿಯ ಬುಡದಲ್ಲಿ ಕೆತ್ತಿರುವ ಕನ್ನಡ, ತಮಿಳು, ಮರಾಠಿ ಈ ಸುಂದರ ಲಿಪಿಗಳ ಕೆಲವು ಶಾಸನಗಳು ಕಣ್ಣಿಗೆ ಬೀಳುತ್ತವೆ. ಅವುಗಳ ವಿಷಯ ಏನೆಂದು ತಿಳಿಯಲು ತತ್‌ಕ್ಷಣದ ನೆರವು ಅಲ್ಲಿರದಿದ್ದರೂ, ಅವು

ಯಾವುದೋ ಒಂದು ಬಗೆಯ ಕುತೂಹಲವನ್ನು ಹುಟ್ಟಿಸುತ್ತವೆ. ಹಾಗೆಯೇ ಹರಿಹರದ ಹರಿಹರೇಶ್ವರ ದೇವಾಲಯವನ್ನು ನೋಡಲು ಹೋದವರಿಗೆ ಅದರ ಬದಿಯಲ್ಲೇ ನಿಲ್ಲಿಸಿರುವ ಕರ್ನಾಟಕದಲ್ಲೇ ಎತ್ತರವಾದವು ಎಂದು ಹೇಳುವ ಶಿಲಾಶಾಸನಗಳು ಗೋಚರಿಸುತ್ತವೆ. ಇಲ್ಲೂ ಅಷ್ಟೇ, ಅವುಗಳ ವಿಷಯ ಏನು? ಅವುಗಳ ಕಾಲ ಯಾವುದು? ಏತಕ್ಕಾಗಿ ಯಾರು ಅವನ್ನು ಅಲ್ಲಿ ನಿಲ್ಲಿಸಿದ್ದಾರೆ? ಇಂಥ ಸಂಗತಿಗಳ ವಿವರ ಲಭ್ಯವಿಲ್ಲದಿದ್ದರೂ, ಅವು ಪ್ರಾಚೀನ ಕಾಲದ ಲಿಪಿಕಲ್ಲುಗಳು ಎಂಬಷ್ಟಾದರೂ ತಿಳಿಯುತ್ತದೆ. ಹೀಗೇ ಬೇಲೂರು ಹಳೇಬೀಡುಗಳ ಪ್ರಸಿದ್ಧವಾದ ಹೊಯ್ಸಳಕಾಲದ ಸುಂದರ ಶಿಲ್ಪಕಲೆಯ ದೇವಾಲಯಗಳನ್ನು ನೋಡಲು ಬರುವ ಪ್ರವಾಸಿಗಳು, ಅಲ್ಲಿ ಹಲವೆಡೆ ಪ್ರಾಚೀನ ಬರಹಗಳನ್ನು ಕಾಣುತ್ತಾರೆ. ಅವುಗಳ ವಿಷಯ ಏನೆಂಬುದು ತಿಳಿಯಲಾಗದಿದ್ದರೂ ಅವುಗಳ ಬಗೆಗೆ ಕುತೂಹಲವನ್ನು ತಾಳುತ್ತ ಮುಂದೆ ಸಾಗುತ್ತಾರೆ. ಹೀಗೇ ಕೆಲವು ಶಿಲಾಶಾಸನಗಳು ಬಳ್ಳಿಗಾವೆ, ಬನವಾಸಿ, ಬಾದಾಮಿ, ಐಹೊಳೆ, ಪಟ್ಟದಕಲ್ಲು ಮುಂತಾದ ಕೆಲವು ದೇವಾಲಯಗಳ ಆಸುಪಾಸಿನಲ್ಲಿರುವ ಕಾರಣಕ್ಕೆ ಪ್ರವಾಸಿಗರ ಕಣ್ಣಿಗೆ ಬೀಳುತ್ತವೆ. ಇಂಥಲ್ಲಿ ಪುರಾತತ್ವ ಅಥವಾ ಪ್ರವಾಸೋದ್ಯಮ ಹೀಗೆ ಯಾವುದೇ ಇಲಾಖೆಯ ಯಾವುದೇ ಪ್ರಯತ್ನವಿಲ್ಲದೆ ಅಂಥವುಗಳು ನೋಡಲು ಪ್ರವಾಸಿಗರಿಗೆ ಲಭ್ಯವಾಗುವಂತಾಗಿದೆ.

ಪುರಾತತ್ವ ಇಲಾಖೆ ಶಾಸನಗಳ ಸಂರಕ್ಷಣೆಗೆ ವಿಶೇಷ ಪ್ರಯತ್ನ ಕೈಕೊಂಡಿರುವುದೆಂದರೆ ಅಶೋಕ ಚಕ್ರವರ್ತಿಯ ಕೆಲವು ಶಿಲಾಶಾಸನಗಳಂಥವುಗಳ ವಿಷಯದಲ್ಲಿ ಮಾತ್ರ. ಉದಾಹರಣೆಗೆ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟ್ಟಿಂಗರಾಮೇಶ್ವರ ಮತ್ತು ಅಶೋಕಸಿದ್ದಾಪುರ; ಕೊಪ್ಪಳ ಜಿಲ್ಲೆಯ ಮಸ್ಕಿ ಇಂಥ ಕಡೆಗಳಲ್ಲಿರುವ ಅಶೋಕನ ಶಿಲಾಶಾಸನಗಳ ಸುತ್ತ ಭದ್ರವಾದ ಕಟಾಂಜನ ನಿರ್ಮಿಸಿ ಮೇಲೆ ಛಾವಣಿಯನ್ನು ಹಾಕಿ ಸಂದರ್ಶಕರು ನೋಡಲು ಅನುಕೂಲವಾಗುವಂತೆ ಸಂರಕ್ಷಣ ವ್ಯವಸ್ಥೆಯನ್ನು ಮಾಡಲಾಗಿದೆ. ಅಲ್ಲದೆ ಆ ಶಾಸನಗಳ ವಿವರವನ್ನೂ ಫಲಕಗಳಲ್ಲಿ ಕೊಡಲಾಗಿದೆ. ಅದೇ ಕೊಪ್ಪಳದ ಗುಡ್ಡದಂಥ ಸ್ಥಳಗಳಲ್ಲಿರುವ ಅಶೋಕನ ಶಿಲಾ ಶಾಸನಗಳಿಗೆ ಅಂಥ ಯಾವ ಸಂರಕ್ಷಣ ವ್ಯವಸ್ಥೆಯೂ ಇರುವುದಿಲ್ಲ. ಬ್ರಹ್ಮಗಿರಿಯಂಥ ಸ್ಥಳಗಳಲ್ಲಿರುವ ಅಶೋಕನ ಶಿಲಾಶಾಸನವಂತೂ ಪ್ರವಾಸಿ ಆಕರ್ಷಣೆಯ ಒಂದು ಸ್ಥಳವಾಗಿ ಪ್ರಖ್ಯಾತವಾಗಿದೆ. ಅದೇ ಇತರೆಡೆಯ ಶಾಸನಗಳನ್ನು ನೋಡಲು ಅಷ್ಟರಮಟ್ಟಿಗೆ ಪ್ರವಾಸಿಗಳು ಹೋಗುವುದಿಲ್ಲ.

ಅದಕ್ಕೆ ಕಾರಣ ಬಹುಶಃ ಮಾಹಿತಿ, ಸೌಲಭ್ಯ ಮತ್ತು ಪ್ರಚಾರಗಳ ಕೊರತೆ. ಇಲ್ಲವೆ ಅವೂ ಕೂಡಾ ಪ್ರೇಕ್ಷಣೀಯ ವಸ್ತುಗಳಾಗುತ್ತವೆ ಎಂಬ ಕಲ್ಪನೆಯ ಕೊರತೆಯೂ ಇರಬಹುದು. ದೊಡ್ಡ ದೊಡ್ಡ ಬಂಡೆಗಳ ಮೇಲಿರುವಂಥ ಇಂಥ ಶಾಸನಗಳನ್ನು ಪ್ರಾಚ್ಯವಸ್ತು ಸಂಗ್ರಹಾಲಯಗಳಲ್ಲಂತೂ ತಂದಿಡಲು ಸಾಧ್ಯವಿಲ್ಲ. ಇಂಥವನ್ನು ಅವು ಇದ್ದಲ್ಲಿಗೇ ಹೋಗಿ ನೋಡಬೇಕಾಗುತ್ತದೆ. ನೋಡಲೇಬೇಕೆಂಬ

ಅನಿವಾರ್ಯ ಅಥವಾ ತೀವ್ರಾಸಕ್ತಿ ಇದ್ದವರು ಮಾತ್ರ ಅವು ಇದ್ದಲ್ಲಿಗೆ ಹೋಗಿ ನೋಡುತ್ತಾರೆ. ಆದರೆ ಉಳಿದವರು ಅವನ್ನು ನೋಡುವುದು ಬೇಡವೆ? ಅಷ್ಟು ಮಹತ್ತ್ವವಿರುವ ಅವನ್ನು ಜನ ನೋಡಲೆಂದು ಸೂಕ್ತ ವ್ಯವಸ್ಥೆಯನ್ನು ಸಂಬಂಧಪಟ್ಟ ಇಲಾಖೆಗಳು ಮಾಡಬೇಕಲ್ಲವೆ? ಇಂಥ ಕೆಲಸಕ್ಕೆ ಅವು 'ಸಂರಕ್ಷಿತ ಸ್ಮಾರಕಗಳು' ಎಂದು ಘೋಷಿಸುವ ಫಲಕವನ್ನಷ್ಟೇ ಹಾಕಿದರೆ ಏನೂ ಆದಂತಾಗುವುದಿಲ್ಲ. ಪುರಾತತ್ವ ಇಲಾಖೆಯವರು ಇಂಥವನ್ನು 'ಸಂರಕ್ಷಿತ ಸ್ಮಾರಕಗಳು' ಎಂಬಷ್ಟಾದರೂ ಅವುಗಳ ಬಗ್ಗೆ ಗಮನಿಸಿರುತ್ತಾರೆ; ಆದರೆ ಪ್ರವಾಸೋದ್ಯಮ ಇಲಾಖೆ?

ಬಾದಾಮಿಯಂಥ ಪ್ರಸಿದ್ಧ ಐತಿಹಾಸಿಕ ಸ್ಥಳಕ್ಕೆ ಹೋಗಿ ಅಲ್ಲಿಯ ಲಯಣಗಳು ಅಥವಾ ಗುಹಾಂತರ ದೇವಾಲಯುಗಳನ್ನು ನೋಡುವವರು ಅದೇ ಪರಿಸರದಲ್ಲೇ ಇರುವ ಕನ್ನಡದ ಅತಿ ಮುಖ್ಯ ಶಾಸನಗಳಲ್ಲೊಂದಾದ ಉಜ್ಜ್ವಲ ವ್ಯಕ್ತಿತ್ವದ ಕಪ್ಪೆ ಅರಭಟ್ಟನ ಶಾಸನವನ್ನು ನೋಡದೇ ಹೋಗುತ್ತಾರೆ. ಅದು ಇರುವ ಸ್ಥಳ ಈವರೆಗೂ ಪ್ರೇಕ್ಷಣಾಸಕ್ತಿಯ ಸ್ಥಳವಾಗಿ ಪರಿಗಣಿತವಾಗಿಯೇ ಇಲ್ಲ. ಕಾರಣ, ಅಲ್ಲಿಗೆ ಹೋಗಿ ನೋಡಿ ಬರಬೇಕೆಂದರೆ ಸರಿಯಾದ ಸೌಕರ್ಯಗಳಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದ ಪ್ರೇಕ್ಷಣೀಯವಾಗಿರುವ ಒಂದು ಮುಖ್ಯ ವಸ್ತು ವಿಶೇಷ ಎಂಬಂತೆ ಅದರ ಪ್ರಚಾರವೇ ಆಗಿಲ್ಲ. ಇಂಥದರ ಬಗ್ಗೆ ಪುರಾತತ್ತ್ವ ಇಲಾಖೆ ಹಾಗೆಯೇ ಪ್ರವಾಸೋದ್ಯಮ ಇಲಾಖೆಯವರು, ಬಾದಾಮಿಗೆ ಅಸಂಖ್ಯಾತವಾಗಿ ಹರಿದುಬರುವ ಸಂದರ್ಶಕರಿಗೆ ಬೇರೆ ಬೇರೆಡೆ ಎದ್ದು ಕಾಣುವಂತೆ ಫಲಕಗಳಲ್ಲಿ, ವಿವರಣಿಕೆ (ಬ್ರೋಶುರ್)ಗಳಲ್ಲಿ ಮಾಹಿತಿ ಮತ್ತು ಮಾರ್ಗ ಸೂಚನೆ ನೀಡಿದರೆ, ಸೌಲಭ್ಯ ಕಲ್ಪಿಸಿದರೆ, ಸಂದರ್ಶಕರು ಅಲ್ಲಿಗೆ ಹೋಗಿ ನೋಡಲು ಸಾಧ್ಯವಾಗುತ್ತದೆ.

ಹೀಗೆಯೇ ಚಿತ್ರದುರ್ಗದ ಪ್ರಖ್ಯಾತವಾದ ಏಳುಸುತ್ತಿನ ಕೋಟೆಯನ್ನು ನೋಡಲು ಬರುವವರು, ಇಲ್ಲಿಗೆ ಹತ್ತಿರದಲ್ಲೇ ಇರುವ ಎರಡು ಬಹುಮುಖ್ಯವಾದ ಶಾಸನಗಳನ್ನು ನೋಡದೆ, ಮುಂದೆಸಾಗುತ್ತಾರೆ. ಅವುಗಳಲ್ಲಿ ಒಂದು, ಚಿತ್ರದುರ್ಗದ ನೆರೆಯ ಚಂದ್ರವಳ್ಳಿ ಪ್ರದೇಶದ ಬಂಡೆಯೊಂದರಲ್ಲಿ, ಕನ್ನಡನಾಡಿಗೆ ಕನ್ನಡನಾಡಿನವರದೇ ಆದ ಆಳ್ವಿಕೆಯನ್ನು ಪ್ರಾರಂಭಿಸಿದ, ಸ್ವಾಭಿಮಾನ ಕ್ಷಾತ್ರಗಳಿಗೆ ಹೆಸರಾದ ಕದಂಬರ ಮಯೂರವರ್ಮನ ಕ್ರಿ.ಶ. ೪ನೆಯ ಶತಮಾನದ ಒಂದು ಶಾಸನವಿದೆ. ಅದು ಮಯೂರವರ್ಮನ ಏಕೈಕ ಶಾಸನವಷ್ಟೇ ಅಲ್ಲ, ಕರ್ನಾಟಕದಲ್ಲೇ ಅತ್ಯಂತ ಪ್ರಾಚೀನವಾದ ಸಂಸ್ಕೃತ ಶಾಸನ ಕೂಡಾ. ಇನ್ನೊಂದು, ಚಿತ್ರದುರ್ಗದ ಉತ್ತರಕ್ಕೆ ತಮಟಕಲ್ಲು ಎಂಬ ಗ್ರಾಮದ ಬಳಿ ಹೊಲವೊಂದರಲ್ಲಿರುವ ಮೂರು ಶಾಸನಗಳು. ಅಲ್ಲಿರುವ ಶಿಲ್ಪ ಕರ್ನಾಟಕದ ಅತ್ಯಂತ ಪ್ರಾಚೀನ ವೀರಗಲ್ಲು (ಕ್ರಿ.ಶ. ೬ನೆಯ ಶತಮಾನ) ಎಂಬ ಖ್ಯಾತಿ ಇರುವ ಶಿಲ್ಪ. ಗುಣಮಧುರ ಎಂಬ ದೊರೆಯೊಬ್ಬನ ಗುಣಗಳನ್ನು ವರ್ಣಿಸುವ, ಕನ್ನಡದಲ್ಲಿ ಈವರೆಗೆ ದೊರೆತ ಅತಿಪ್ರಾಚೀನ ಪದ್ಯ-ಶಾಸನ ಇನ್ನೊಂದು. ಅಷ್ಟೇ ಅಲ್ಲ, ಕರ್ನಾಟಕದಲ್ಲಿ ಈವರೆಗೆ

ದೊರೆತ ಅತ್ಯಂತ ಪ್ರಾಚೀನವಾದ ವಟ್ಟೆಳುತ್ತು ಲಿಪಿಯ ತಮಿಳು-ಶಾಸನ ಮತ್ತೊಂದು. ಇಂಥ ಶಾಸನಗಳ ಬಗ್ಗೆ, ಚಿತ್ರದುರ್ಗಕ್ಕೆ ಬರುವ ಸಂದರ್ಶಕರಿಗೆ ತಿಳಿಯುವಂತೆ, ಸೂಕ್ತ ಪ್ರಚಾರ, ಮಾಹಿತಿ ಮತ್ತು ಸೌಕರ್ಯ ಒದಗಿಸಿದರೆ, ಖಂಡಿತವಾಗಿ ಜನರು ಅವುಗಳನ್ನು ನೋಡಲು ಪ್ರಯತ್ನಿಸುತ್ತಾರೆ. ಸುಮಾರು ೨೦ ಸಾವಿರಕ್ಕೂ ಮೇಲ್ಪಟ್ಟ ಸಂಖ್ಯೆಯಲ್ಲಿ ದೊರೆತಿರುವ ವಚನಗಳಲ್ಲಿ ಒಂದೇ ಒಂದು ವಚನ ಇರುವ ಶಿಲಾಶಾಸನವೊಂದು ಇಲ್ಲಿಯ ಮುರುಘರಾಜೇಂದ್ರ ಬೃಹನ್ಮಠದ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿತವಾಗಿದೆ. ನಮ್ಮ ಜನ ಅದನ್ನೂ ನೋಡಬೇಕಲ್ಲವೆ?

ಹಿಂದೆಯೇ ಹೇಳಿದಂತೆ ಶ್ರವಣಬೆಳಗೊಳ ಗೊಮ್ಮಟೇಶ್ವರ ಶಿಲ್ಪಕ್ಕೆ ಪ್ರಸಿದ್ಧವಾಗಿರುವುದಾದರೂ ಇತರ ಅನೇಕ ಸ್ಮಾರಕಗಳೂ ಅಲ್ಲಿವೆ. ಕನ್ನಡ ಸಂಸ್ಕೃತಿಯ ದೃಷ್ಟಿಯಿಂದ ಬಹುಮುಖ್ಯವೆನಿಸುವ ಇನ್ನು ಕೆಲವು ಶಾಸನಗಳೂ ಅಲ್ಲಿವೆ. ಉದಾಹರಣೆಗೆ, ಕವಿ ರನ್ನನ ಹಸ್ತಾಕ್ಷರವೆಂದೇ ತಿಳಿಯಲಾಗಿರುವ ಒಂದು ಪುಟ್ಟ ಕಲ್ಬರಹ, ಪ್ರಖ್ಯಾತ ಜೈನಮುನಿ ಭದ್ರಬಾಹು ಭಟಾರರು ಹಾಗೂ ಚಂದ್ರಗುಪ್ತ ಮೌರ್ಯ ಅವರ ಪ್ರಸ್ತಾಪ ಇರುವ ಒಂದು ಬಂಡೆ ಶಾಸನ, ನಂದಿಸೇನ ಎಂಬ ಇನ್ನೊಬ್ಬ ಜೈನಮುನಿ ಲೌಕಿಕ ಸುಖಗಳು ಕ್ಷಣಿಕವೆಂದು ವೈರಾಗ್ಯ ಹೊಂದಿ ಸಮಾಧಿಮರಣ ಪಡೆದದ್ದನ್ನು ಕಾವ್ಯಮಯವಾಗಿ ಹೇಳುವ, ಪ್ರಾಚೀನ ಕನ್ನಡದ ಅತಿಸುಂದರ ಅಕ್ಷರಗಳ ಒಂದು ಶಾಸನ, ಇಡೀ ಶಾಸನವೇ ಒಂದು ಸಮಗ್ರ ಕಾವ್ಯವಾಗಿರುವ, ಬೊಪ್ಪಣ ಎಂಬ ಕವಿಯ ಗೊಮ್ಮಟ ಜಿನಸ್ತುತಿಯ ಶಾಸನ, ಇವೇ ಮುಂತಾದವು ಸಂಬಂಧಿಸಿದ ನಮ್ಮ ಸರ್ಕಾರಿ ಇಲಾಖೆಗಳವರಿಗೆ ಹಾಗೂ ಸಂದರ್ಶಕರಿಗೆ ಪ್ರೇಕ್ಷಣೀಯ ವಸ್ತುಗಳಾಗಿಯೇ ಇಲ್ಲ. ಇವು ಸಂದರ್ಶಕರು ವೀಕ್ಷಿಸಲೇ ಬೇಕಾದ ನಮ್ಮ ಸಂಸ್ಕೃತಿ ವಿಶೇಷಗಳಲ್ಲವೆ? ಈ ಬಗ್ಗೆ ಸೂಕ್ತ ಮಾಹಿತಿ, ಪ್ರಚಾರ ಇದ್ದರೆ ಶ್ರವಣಬೆಳಗೊಳಕ್ಕೆ ವರ್ಷದುದ್ದಕ್ಕೂ ಬರುವ ಸಂದರ್ಶಕರು ಮತ್ತು ಯಾತ್ರಾರ್ಥಿಗಳು ಇವನ್ನು ನೋಡುವ ಅವಕಾಶವನ್ನು ಖಂಡಿತ ಕಳೆದುಕೊಳ್ಳಲಾರರು.

ಹೀಗೆಯೇ ನಮ್ಮ ನಾಡಿನಲ್ಲಿ ಇಂಥ ಇನ್ನೂ ಹಲವು ಪ್ರೇಕ್ಷಣೀಯ ಮೌಲ್ಯವಿರುವ ಶಾಸನಗಳನ್ನು ಹೆಸರಿಸಬಹುದು: ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದದಲ್ಲಿ ಕದಂಬ ಮಯೂರವರ್ಮನ ಉಜ್ಜ್ವಲ ಚರಿತ್ರೆಯನ್ನು ಹೇಳುವ ಯೂಪಸ್ತಂಭದ ಸಂಸ್ಕೃತ ಶಾಸನ, ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಆವರಣದಲ್ಲಿರುವ ಹೊಯ್ಸಳ ದೊರೆ ಬಲ್ಲಾಳನಿಗೆ ಶುಭವನ್ನು ಬಯಸಿ ಅವನ ಗರುಡನಾಗಿದ್ದ ಕುವರಲಕ್ಷ್ಮ ಮತ್ತು ಅವನ ಸಾವಿರ ಲೆಂಕರು ಆತ್ಮಾರ್ಪಣೆ ಮಾಡಿಕೊಂಡದ್ದರ ಹೃದಯವಿದ್ರಾವಕ ಸಂಗತಿಯನ್ನು ಹೇಳುವ ಸಶಿಲ್ಪ-ಶಾಸನ, ಕೊಪ್ಪಳದಲ್ಲಿರುವ ಪಾಲ್ಕಿಗುಂಡು ಮತ್ತು ಇನ್ನೊಂದೆಡೆ ಸುಂದರಾಕೃತಿಯ ಬಂಡೆಗಳ ಪರಿಸರದಲ್ಲಿರುವ ಅಶೋಕನ ಶಾಸನಗಳು, ಮೊಳಕಾಲ್ಮುರು ಬೆಟ್ಟದ ಮೇಲೆ ಕೆರೆಯೊಂದರಲ್ಲಿ ಬಂಡೆಯ ಮೇಲೆ ಕೆತ್ತಿರುವ ದೊಡ್ಡ

ಆನೆಯ ಹೊಟ್ಟೆಯ ಕೆಳಗೆ ಕೊರೆದಿರುವ, ಪ್ರಖ್ಯಾತ ಕವಿ ಕಾಳಿದಾಸನ ಪ್ರಸ್ತಾಪವಿರುವ, ಕನ್ನಡಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿರುವ ಸುಂದರ ಯಮಕ ಶ್ಲೋಕದ ಶಾಸನ. ಯಮಕ ಶ್ಲೋಕವೆಂದರೆ, ಮೊದಲ ಸಾಲು ಕೊನೆಗೊಂಡ ಅಕ್ಷರದಿಂದ ಎರಡನೆಯ ಸಾಲು ಪ್ರಾರಂಭವಾಗುತ್ತದೆ; ಹಾಗೇ ಮೊದಲ ಸಾಲಿನ ಪ್ರಾರಂಭದ ಅಕ್ಷರದಿಂದ ಎರಡನೆಯ ಸಾಲು ಮುಕ್ತಾಯಗೊಳ್ಳುತ್ತದೆ.

**ಕಂಜರಂ ಪುರಿತೇಂದ್ರಂ ಚ ಮಹೇದಾಳಿ ಸದಾಳಿಕಾ**

**ಕಾಳಿದಾಸಳಿದಾ ಹೇಮಚಂದ್ರಂ ತೇ ರಿಪುರಂಜಕಂ**

ಅತ್ಯಂತ ಅಪರೂಪದ ಇಂಥ ಕವಿಚಮತ್ಕಾರದ ಪದ್ಯವಿರುವ ಹೆಮ್ಮೆಯ ಶಾಸನವನ್ನು ಸಂಸ್ಕೃತಿಪ್ರಿಯರು ನೋಡಲೇಬೇಕಲ್ಲವೆ?

ಹೀಗೇ ಇನ್ನೂ ಹಲವನ್ನು ಉದಾಹರಿಸಬಹುದು. ನಮ್ಮ ರಾಜ್ಯದಿಂದ ಹೊರಗೂ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದ ಇಂಥವೇ ಕೆಲವು ಶಾಸನಗಳನ್ನು ಹೆಸರಿಸಬಹುದು. ಅವೆಲ್ಲವನ್ನು ಪಟ್ಟಿಮಾಡಿ, ಆಯ್ಕೆಮಾಡಿ, ಅವುಗಳಲ್ಲಿ ಕೆಲವಕ್ಕಾದರೂ ಅತ್ಯಗತ್ಯವಾದ ಪ್ರಚಾರ, ಮಾಹಿತಿ ಮತ್ತು ಮಾರ್ಗ ಸೌಕರ್ಯ ಹಾಗೂ ವಾಹನ ಸೌಕರ್ಯಗಳನ್ನು ಕಲ್ಪಿಸುವತ್ತ ಪ್ರವಾಸೋದ್ಯಮ ಇಲಾಖೆ ಗಮನ ಹರಿಸಿದರೆ, ಶಾಸನಗಳು ಮಹತ್ತ್ವದ ಸ್ಮಾರಕಗಳಾಗಿರುವುದರ ಜತೆಗೆ ಪ್ರೇಕ್ಷಣೀಯ ಮೌಲ್ಯ ಉಳ್ಳವು ಎಂಬ ಅರಿವು ನೆಲೆಗೊಳ್ಳುವುದಲ್ಲದೆ, ನಮ್ಮ ಪ್ರಾಚೀನ ಜನರ ಸಂಸ್ಕೃತಿಯ ವಿಶೇಷ ಪರಿಚಯ, ಅಮೂಲಕ ಸಂಸ್ಕೃತಿ–ಅಭಿಮಾನ, ಇತಿಹಾಸ–ಪ್ರೇಮ ನಮ್ಮಲ್ಲಿ ಬೆಳೆಯಲು, ನಮ್ಮ ಮುಂದಿನ ಪೀಳಿಗೆಯವರಿಗೂ ಆ ಬಗ್ಗೆ ಅರಿವುಮಾಡಿಕೊಡಲು ಸಾಧ್ಯವಾಗುತ್ತದೆ. ನಾವು ಇತಿಹಾಸ ಸಂಸ್ಕೃತಿಗಳ ವಿಷಯದಲ್ಲಿ ಬಡವರಿಲ್ಲ; ಅವನ್ನು ಗುರುತಿಸುವಲ್ಲಿ, ಪ್ರೀತಿಸುವಲ್ಲಿ, ಅಭಿಮಾನದಿಂದ ನೋಡುವಲ್ಲಿ ಬಡವರೆನ್ನುವಂತಾಗಿದೆ. ನಾವೇ ಹಾಗಾದರೆ ನಮ್ಮ ಮುಂದಿನ ಪೀಳಿಗೆಯಲ್ಲಿ ಇವುಗಳ ಬಗ್ಗೆ ಪ್ರೀತಿಯನ್ನು ಉಳಿಸಿ ಬೆಳೆಸುವುದು ಸಾಧ್ಯವೇ ಎಂದು ನಾವೆಲ್ಲ ಚಿಂತಿಸಬೇಕಾಗಿದೆ.



# ಲೇಖಕರ ವಿಳಾಸಗಳು

✦ ೧. **ಡಾ.ಸಿ.ಯು. ಮಂಜುನಾಥ್**

ಗಳಅ, ೭ನೇ 'ಸಿ' ಮುಖ್ಯರಸ್ತೆ, ೩ನೇ ಯ ಅಡ್ಡರಸ್ತೆ, ಹಂಪಿನಗರ, ಬೆಂಗಳೂರು–೫೬೦೧೦೪, ಮೊ– ೯೮೪೫೦೩೧೯೭೨

೨. **ವಿದ್ಯಾಸಾಗರ**

ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ–೫೮೫೩೬೭

೩. **ಡಾ. ಚನ್ನಬಪ್ಪ ಮಲ್ಕಂದಿನ್ನಿ**

ಇತಿಹಾಸ ಸಹಾಯಕ ಪ್ರಾಧ್ಯಾಪಕರು ದೇವನಾಂಪ್ರಿಯ ಅಶೋಕ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಾಗೂ ಸ್ನಾತಕೋತ್ತರ ಕೇಂದ್ರ ಮಸ್ಕಿ, ರಾಯಚೂರು ಜಿಲ್ಲೆ–೫೮೪೧೨೪

೪. **ಚಂದ್ರಶೇಖರ್**

ನಿವೃತ್ತಪ್ರಾಂಶುಪಾಲರು, ೮೫/೧, ೩ನೇ ಮುಖ್ಯರಸ್ತೆ, ಬ್ಯಾಂಕ್ ಆಫ್ ಬರೋಡ ಲೇಔಟ್, ಪುಟ್ಟೇನಹಳ್ಳಿ, ಜೆ.ಪಿ.ನಗರ, ೭ನೇ ಹಂತ, ಬೆಂಗಳೂರು–೫೬೦೦೭೮ ಮೊ– ೯೯೪೫೦೦೪೮೪೬

೫. **ಡಾ. ಎಚ್.ಎಸ್. ಅನಂತನಾರಾಯಣ**

ಭಾಷಾಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರು, ಉಸ್ಮಾನಿಯಾ ವಿ.ವಿ., ೨೦೬, 'ಬ್ರಿಗೇಡ್ ಕ್ಲಾಸಿಕ್', ಆರ್ಮುಗಂ ಸರ್ಕಲ್, ಬಸವನಗುಡಿ, ಬೆಂಗಳೂರು–೫೬೦೦೦೪ ಮೊ–೯೮೦೬೨೨೮೧೦

೬. **ಬಸವರಾಜ ಕೋಡಗುಂಟಿ**

ಸಹ ಪ್ರಾಧ್ಯಾಪಕ ಮತ್ತು ಮುಖ್ಯಸ್ತ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ

೭. **ಬಸಯ್ಯ ಸ್ವಾಮಿ**

ಸಂಶೋಧನಾ ವಿಧ್ಯಾರ್ಥಿ, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಲಬುರಗಿ, ಮೊ– ೯೪೮೨೯೪೮೩೨೦

೮. **ಡಾ. ಬಿ. ನಂಜುಂಡಸ್ವಾಮಿ**

ಪಂಡಿತ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು – ೫೭೨೧೦೨, ಮೊ : ೯೮೮೯೯೬೧೯೬

೯. **ಡಾ. ರಾಜಶೇಖರ ಜಮದಂಡಿ**

ಇತಿಹಾಸ ಸಹಾಯಕ ಪ್ರಾಧ್ಯಾಪಕರು, ದೇವನಾಂಪ್ರಿಯ ಅಶೋಕ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಾಗೂ ಸ್ನಾತಕೋತ್ತರ ಕೇಂದ್ರ, ಮಸ್ಕಿ, ರಾಯಚೂರು ಜಿಲ್ಲೆ-೫೮೪೧೨೪

೧೦. **ಜಿ.ಎಂ. ಹೆಗಡೆ**

#೯ನೇ ಕ್ರಾಸ್, ಕಲ್ಯಾಣನಗರ, ಧಾರವಾಡ - ೫೮೦೦೦೭ ಮೊ-೯೯೪೫೪೨೯೯೨೭೭

೧೧. **ಡಾ. ಲ.ನ. ಸ್ವಾಮಿ**

ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಪಿಆರ್‌ಎಂ ವಿಜಯ ಪ್ರಥಮ ದರ್ಜೆ ಕಾಲೇಜು, ಟಿ. ನರಸೀಪುರ

೧೨. **ಡಾ. ಬಿ. ರಾಜಶೇಖರಪ್ಪ**

ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ), ೨ನೆಯ ತಿರುವು (ಪಶ್ಚಿಮ), ಜಯಚಾಮರಾಜೇಂದ್ರ ಬಡಾವಣೆ, ಚಿತ್ರದುರ್ಗ - ೫೭೭ ೫೦೧ ಮೊ: ೯೪೮೦೨ ೨೬೦೬೪



ವಚನ ಸಾಹಿತ್ಯದಲ್ಲಿ ಬಳಕೆಯಾಗಿರುವ ಅನುಭಾವಿಕ ಪರಿಭಾಷೆಯ ಅರ್ಥ ಕನ್ನಡ ಬಿಟ್ಟು ಉಳಿದ ಭಾಷೆಗಳಲ್ಲಿ ಕಂಡು ಬಂದಂತಿಲ್ಲ.

– ಡಾ. ಸಿ. ಯು. ಮಂಜುನಾಥ್

ರಾಜಕೀಯವಾಗಿ ಅನೇಕ ಸಾಧನೆಗಳನ್ನು ಮಾಡಿದ ಪ್ರಧಾನ ವೆಂಕಪ್ಪಯ್ಯನವರು 18ನೇ ಶತಮಾನದ ಅತ್ಯಂತ ಶ್ರೇಷ್ಠ ಕನ್ನಡ ಮತ್ತು ಸಂಸ್ಕೃತ ಭಾಷಾ ತಜ್ಞರು.

– ಡಾ. ಲ. ನ. ಸ್ವಾಮಿ

ವಲಸೆ ನಡೆದಾಗ ಅದು ಕೇವಲ ಭೌತಿಕ ಇಲ್ಲವೆ ಸಾಮಾಜಿಕ ಆಗಿರುವುದಿಲ್ಲ. ಬದಲಿಗೆ ಅದು ಮುಖ್ಯವಾಗಿ ಮಾನಸಿಕವೂ ಆಗಿರುತ್ತದೆ.

– ಬಸಯ್ಯ ಸ್ವಾಮಿ

ಜನ್ನನ ಎರಡೂ ಕೃತಿಗಳಲ್ಲಿ ಸಾವು ಮತ್ತು ಸ್ವರ್ಗ ನರಕದ ಸ್ವರೂಪ ಹೇಗೆ ಬಂದಿದೆ ಎಂಬುದನ್ನು ಗುರುತಿಸುವುದು ಈ ಲೇಖನದ ಆಶಯವಾಗಿದೆ.

– ವಿದ್ಯಾಸಾಗರ

'ಪಾರ್ವರ ಪಿಳ್ಳೆಯ ಪೋದ ಜೀವಮಂ'– ಹಿನ್ನೆಲೆ ಹುಡುಕಿ ಹೊರಟಾಗ ಭಾಗವತ ದಶಮಸ್ಕಂದದ ಎಂಬತ್ತೊಂಬತ್ತನೆಯ ಅಧ್ಯಾಯದಲ್ಲಿ ಬ್ರಾಹ್ಮಣನೊಬ್ಬನ ಮಗನನ್ನು ರಕ್ಷಿಸಲು ಅರ್ಜುನ ಪ್ರತಿಜ್ಞೆ ಮಾಡಿದ ಪ್ರಸಂಗ, ವಿವರಣೆ ಕಂಡುಬರುತ್ತದೆ.

– ಚಂದ್ರಶೇಖರ್

ಬಸವಣ್ಣನವರ ವಚನಗಳಲ್ಲಿ ಕಂಡುಬರುವ ವೈಜ್ಞಾನಿಕ ದೃಷ್ಟಿ ಬದುಕಿಗೂ ಹತ್ತಿರವಾಗಿರುವಂಥದ್ದು.

– ಡಾ. ರಾಜಶೇಖರ ಜಮದಂಡಿ

ಇದು ಉತ್ತರ ಕರ್ನಾಟಕದಲ್ಲಿಯೇ ಪ್ರಧಾನವಾಗಿ ಶೋಧಗೊಂಡ ಚೋಳ ಅರಸರ ಶಾಸನವಾಗಿದೆ.

– ಡಾ. ಚನ್ನಬಸಪ್ಪ ಮಲ್ಕಂದಿನ್ನಿ

ಶ್ರೀಕಂಠಯ್ಯನವರು ಕನ್ನಡ ನವೋದಯದ ಮುಖ್ಯಧಾರೆಗಳಾದ ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆಯ ವಿಚಾರಗಳನ್ನು ತಮ್ಮ ಭಾಷಣಗಳಲ್ಲಿ ಪ್ರಸ್ತಾಪ ಮಾಡಿದ್ದಾರೆ.

– ಡಾ. ಜಿ. ಎಂ. ಹೆಗಡೆ

ಅಕ್ಕಮಹಾದೇವಿಯ ಈ ವಚನ ಸಾಮಾಜಿಕ ರಚನೆಯಲ್ಲಿ ಬಳಲಿ ಬೆಂಡಾಗಿರುವವರ ಮಾನಸಿಕ ಸ್ಥಿತಿಯನ್ನು ಕುರಿತು ಮಾತನಾಡುತ್ತಿರುವಂತಿದೆ.

– ಬಸವರಾಜ ಕೋಡಗುಂಟಿ

ಹಳೆಯ ಪ್ರಕಟಿತ ಬಾಲಿಕಾ ಗೀತಮುಕು ಕಲಾಪ ಪರಿಶೀಲಿಸುವಾಗ ಬಸವಪ್ಪಶಾಸ್ತ್ರಿಗಳು ವಿರಚಿಸಿದ ಈ ಗೀತೆಗಳು ನನ್ನ ಪರಿಶೀಲನೆಗೆ ಲಭ್ಯವಾದವು.

– ಡಾ. ಬಿ. ನಂಜುಂಡಸ್ವಾಮಿ

ಇಲ್ಲಿ 'ನ್ಯಾಯ' ಶಬ್ದವನ್ನು ಒಂದು ವಿಶಿಷ್ಟ ರೀತಿಯಲ್ಲಿ ಉಪಯೋಗಿಸಿದೆ. ಇವು ಮನುಷ್ಯನು ಜೀವನದಲ್ಲಿ ಕಂಡು ಕೊಂಡ ಪಾಠಗಳು.

– ಡಾ. ಎಚ್.ಎಸ್. ಅನಂತನಾರಾಯಣ